*Sanctioned as a Text Book by the Bombay Educational Department & as a Library Book by the Mysore Edl. Department.*

LORD AVEBURY'S

(SIR JOHN LUBBOCK'S)

# THE PLEASURES OF LIFE

RENDERED INTO KANARESE

BY


**HANUMANT GOVINDRAO DESHPANDE, B.A.,**

S. T. C. (HONOURS)

HEAD-MASTER, TRAINING SCHOOL, DHARWAR.


THIRD EDITION

# ಸಂಸಾರಸುಖ

೩ನೆಯ ಆವೃತ್ತಿ.

ಲೇಖಕ ಮತ್ತು ಪ್ರಕಾಶಕ:


**ಹನುಮಂತರಾವ ಗೋವಿಂದರಾವ ದೇಶಪಾಂಡೆ,** ಬಿ. ಎ.,

ಹೆಡ್‌ಮಾಸ್ತರ್, ಟ್ರೇನಿಂಗ್ ಸ್ಕೂಲ್,

ಧಾರವಾಡ.






1928

[Price: 1-4-0.

# PREFACE.

This is the second edition of "**SANSARA SUKHA**", an adaptation in Kanarese of the 'Pleasures of Life' by *Lord Avebury.* The first edition of the book was published in 1915 and it is a decade since then. No copies have been in stock for a few years past. The book was awarded a prize by the Karnatak Vidya Vardhak Sangha, Dharwar and was sanctioned as a prize and library book by the Educational Department of the Bombay Presidency in 1918.

I should say that the book is not a close translation of the English original. Changes have been made where necessary. Portions which were considered uninteresting to Kanarese readers have been omitted. On the other hand, portions from famous Western and Eastern writers have been added to further illumine the ideas in the various essays. The English poetical pieces have been replaced by apt Sanskrit and Kanarese quotations from the Ramayana, Mahabharata, Bhagawat, Bhagawadgita, and the works of Kalidasa, Bhartrihari, Purandardas etc.

In this edition, two noteworthy improvements have been made. First, Kanarese verses from *Nagarasa's* beautiful Kanarese Bhagawadgita have been inserted. Second, short lives of Western writers, quoted in the book, have been given in the appendix.

There is a paucity of good Kanarese prose books suitable for being prescribed as text books for University Examinations and in High Schools. It is hoped "SANSARA SUKHA" will be competent to remove this long-felt want.

Training College for Men
Dharwar,
February, 1926

*H. G. Deshpande.*

## THIRD EDITION.

In consequence of **'SANSARA SUKHA'** being sanctioned as a text book for secondary schools by the Bombay Educational Department and prescribed as a text book in Kanarese prose by the University of Bombay for the School-Leaving Examination of 1929, for which our thanks are due to them, the copies of the second edition were exhausted and there has been a keen demand for copies of the book from the public as well.

In this edition, the few printing and other mistakes of the 2nd edition have been rectified. It may be observed that the Kanarese language has still to produce many works on science, drama, essay, history etc. which may compare favourably with the select English books on the subjects. A few changes have been made in the list of Kanarese books.

Training College.Dharwar,
August 1928.

*H. G. Deshpande.*

## Opinion of the Modern Review Calcutta September, 1926 on *'Sansara Sukha'*

---

Sir John Lubbock or Lord Avebury's book "The Pleasures of Life" is well known to the students of English Literature as a work of modest originality, but of rare scholarship and laborious composition. The book under review is an adaptation of that work. The author has been successful in his attempt. He has lessened the number of quotations and embodied their purport in the main current of the author's thought. He has saved the reader from that distraction of quotations. As equivalents to the English quotations, Sanskrit and Kanarese passages stand as an evidence of the dual or rather the multiple scholar-ship of the author. The transfusion of the exotic thoughts into the Kanarese body is very creditable. The reader never feels that he is reading English words and thoughts wrought into Kanarese.

The book is written in simple, chaste and dignified Kanarese. It is in that way an excellent book to unify the Kanarese language of the various divisions of the Karnatak.

To the general reader, it will be an edifying pastime. By his beautiful work, a rendering though it is, done in excellent Kanarese, the author has laid the Kanarese language and the public under an obligation.

---

# ಪ್ರಸ್ತಾವನೆ.

## ಮೊದಲನೆಯ ಆವೃತ್ತಿ.

ಇಂಗ್ಲಿಷ ಭಾಷೆಯಲ್ಲಿ ಬಹುಜನಪ್ರಿಯವಾದ 'ಪ್ಲೆಝರ್ಸ್ ಆಫ್ ಲಾಯಿಫ್' ಎಂಬ ಗ್ರಂಥದ ಆಧಾರದಿಂದ **ಸಂಸಾರಸುಖ**ವೆಂಬ ಈ ಪುಸ್ತಕವನ್ನು ಕನ್ನಡಿಗರ ದೆಶೆಯಿಂದ ಬರೆದಿದ್ದೇವೆ. ಇಂಗ್ಲಂಡದಲ್ಲಿ ೨೭ ವರುಷಗಳ ಅವಧಿಯಲ್ಲಿ ಇದರ ೪೨ ಆವೃತ್ತಿಗಳಾಗಿ, ೫ ಲಕ್ಷ ಪ್ರತಿಗಳಿಗಿಂತ ಹೆಚ್ಚು ಪುಸ್ತಕಗಳು ಜನರ ಕೈಸೇರಿರುತ್ತವೆ. ಇದು ಯುರೋಪದ ಎಲ್ಲ ಭಾಷೆಗಳಲ್ಲಿಯೂ ಪರಿವರ್ತಿಸಲ್ಪಟ್ಟದೆ; ಮತ್ತು ಹಿಂದುಸ್ತಾನದಲ್ಲಿ ಪ್ರಚಲಿತವಾದ ಬಹುಶಃ ಎಲ್ಲ ದೇಶಭಾಷೆಗಳಲ್ಲಿ ಇದು ರೂಪಾಂತರ ಹೊಂದಿದೆ; ಹಾಗು ಆಯಾ ಭಾಷೆಗಳಲ್ಲಿ ಇದರ ಎಷ್ಟೋ ಆವೃತ್ತಿಗಳು ಆಗಿಹೋಗಿವೆ. ಆದರೆ ದುರ್ದೈವದಿಂದ ಕನ್ನಡಿಗರಿಗೆ ಮಾತ್ರ ಇದುವರೆಗೆ ಈ ಪುಸ್ತಕವನ್ನು ಓದುವ ಶುಭಕಾಲವು ಒದಗಲಿಲ್ಲೆಂದು ದುಃಖದಿಂದ ಹೇಳಬೇಕಾಗಿದೆ. ಆದುದರಿಂದ ಈ ಕೊರತೆಯನ್ನು ದೂರಮಾಡಬೇಕೆಂಬ ಉದ್ದೇಶದಿಂದ ಈ ಕಾರ್ಯವನ್ನು ಕೈಕೊಂಡೆವು.

ಇಷ್ಟು ಲೋಕಪ್ರಿಯವಾದ ಪುಸ್ತಕವನ್ನು ಬರೆದ ಗ್ರಂಥಕರ್ತರು ಎಷ್ಟು ವಿದ್ವಾಂಸರಿದ್ದರೆಂಬುದು ಅವರ ಹೆಸರಿನ ಮುಂದೆ ಇದ್ದ ಯುರೋಪಖಂಡದ ವಿಶ್ವವಿದ್ಯಾಲಯಗಳ ಸನ್ಮಾನ ಸೂಚಕ ಪದವಿಗಳಿಂದ ಸಹಜವಾಗಿಯೇ ಕಂಡುಬರುವುದು. ಎಲ್ಲ ಪ್ರಸಿದ್ಧವಾದ ವಿಶ್ವವಿದ್ಯಾಲಯಗಳು ಇವರ ಪಾಂಡಿತ್ಯಕ್ಕೆ ಮೆಚ್ಚಿ ಇವರಿಗೆ ಪದವಿಗಳನ್ನು ಕೊಡಲಿಕ್ಕೆ ಮುಂದುವರಿದುವು. ಇಂಥ ಜಗದ್ವಿಖ್ಯಾತರಾದ ಗ್ರಂಥಕರ್ತರ ಹೆಸರು **ಲಾರ್ಡ್ ಎವ್ಹಬರಿ**. ಇವರು ಸರ್ **ಜಾನ್ ಲಬಾಕ್** ಎಂಬ ಹೆಸರಿನಿಂದಲೇ ಬಹು ಪ್ರಸಿದ್ಧರಿರುವರು.

ಇವರು ೧೮೩೪ನೇ ಇಸವಿಯಲ್ಲಿ ಹುಟ್ಟಿ ೧೮೭೦ರಿಂದ ೧೮೮೦ರ ವರೆಗೆ ಮೇಡಸ್ಟೋನ್ ಎಂಬ ಪಟ್ಟಣದ ಪ್ರತಿನಿಧಿಗಳಾಗಿ ಪಾರ್ಲಿಮೆಂಟಿನ

ಸಭಾಸದರಿದ್ದರು. ಮುಂದೆ ಇಸವಿ ಸನ್ ೧೮೬೦ರಿಂದ ೧೯೦೦ರ ವರೆಗೆ ಲಂಡನ್ ವಿಶ್ವವಿದ್ಯಾಲಯುದ ವತಿಯಿಂದ ಸಭಾಸದರಾಗಿ ಬ್ಯಾಂಕು- ಗಳಿಗೆ ಸೂಟಗಳನ್ನು ಕೊಡುವ ಕಾಯಿದೆಯನ್ನು ಮುಂದೆ ತಂದು ಅದನ್ನು ಮಂಜೂರು ಮಾಡಿಸಿಕೊಂಡರು ಇವರು "ಇರಿವೆಗಳು," "ಹೂಗಳು", "ಸೃಷ್ಟಿಸೌಂದರ್ಯಗಳು" ಎಂಬ ಶಾಸ್ತ್ರೀಯ ಶೋಧಗಳನ್ನು ಒಳಕೊಂಡ ಗ್ರಂಥಗಳನ್ನು ಬರೆದುದರಿಂದ ಶಾಸ್ತ್ರಜ್ಞರೆಂದು ಹೆಸರಾಗಿ- ದ್ದಾರೆ. ಇವರು ೩೫ವರ್ಷದವರಿದ್ದಾಗಲೇ ಅಧ್ಯಾತ್ಮಜ್ಞಾನಸಂಘದ ಅಧ್ಯಕ್ಷರಾಗಿದ್ದದ್ದಲ್ಲದೆ ಎಷ್ಟೋ ಶಾಸ್ತ್ರಶೋಧಸಂಘಗಳ ಪ್ರವರ್ತಕರಾಗಿ- ದ್ದರು. ಆಗ ಟೆನಿಸನ್, ಡಾರ್ವಿನ್, ಹಕ್ಸಲಿ ಮೊದಲಾದ ಪ್ರಸಿದ್ಧ ವಿದ್ವಾಂಸರು ಆ ಸಂಘದ ಸಭಾಸದರಿದ್ದರು. ಇವರು ಕೂಸು ಇರು- ವಾಗ ಫೊಟೊಗ್ರಾಫ್ ತೆಗೆಯುವ ಯುಕ್ತಿಯ ಶೋಧವಾಯಿತು. ಆಗ ಅದರ ಶೋಧಕನು ಇವರ ಭಾವಚಿತ್ರವನ್ನು ತೆಗೆದನು. ಅದೇ ಮೊಟ್ಟ- ಮೊದಲಿನ ಭಾವಚಿತ್ರವು. ಅದಕ್ಕೂ ಪೂರ್ವದಲ್ಲಿ ಯಾರ ಭಾವಚಿತ್ರ- ವನ್ನೂ ತೆಗೆದಿರಲಿಲ್ಲ. ಸಂಸಾರಸುಖವಲ್ಲದೆ 'ಸಂಸಾರಕರ್ತವ್ಯ', 'ಸುಖವೂ ಶಾಂತಿಯೂ' ಎಂಬ ಜನಪ್ರಿಯುವಾದ ಗ್ರಂಥಗಳನ್ನು ಇವರು ಬರೆದಿರು- ವರು. ಇವರು ಇಸವಿ ಸನ್ ೧೯೧೩ರ ಮೇ ೨೮ನೇ ತಾರೀಖಿನ ದಿವಸ ಸ್ವರ್ಗಸ್ಥರಾದರು.

ಇವರು ತಮ್ಮ ಕಾಲದ ವಿದ್ವಾಂಸರಲ್ಲಿ ಅತಿಧುರೀಣರೆಂದು ಹೆಸ- ರಾಗಿದ್ದರು.

ಈ ಪುಸ್ತಕದ ಗ್ರಂಥಕಾರರು ಪ್ರಾಚೀನ ಗ್ರಂಥಗಳನ್ನು ಓದುವಾಗ, ತಮಗೆ ಮಹತ್ವವಾದುವುಗಳೆಂದು ಕಂಡುಬಂದ ವಾಕ್ಯಗಳನ್ನು ಬರೆ- ದಿಟ್ಟುಕೊಂಡು ದಿನಾಲು ಮನನ ಮಾಡುತ್ತಿದ್ದರು. ಮುಂದೆ ಉಚ್ಚ ವಿದ್ಯಾಲಯುಗಳ ವಾರ್ಷಿಕ ಸಮಾರಂಭಗಳಲ್ಲಿ ವಿದ್ಯಾರ್ಥಿಗಳಿಗೆ ಉಪ- ದೇಶ ಮಾಡುವ ಬಗ್ಗ ಅಲ್ಲಿಯ ಅಧಿಕಾರಿಗಳು ಇವರಿಗೆ ನಿಮಂತ್ರಣ- ಕೊಟ್ಟಾಗ, ತಮ್ಮ ನಿರೂಪಣೆಗಳಲ್ಲಿ ಒಂದೇ ಪ್ರಕಾರದ ವಿಚಾರವುಳ್ಳಂಥ ವಾಕ್ಯಗಳನ್ನು ಒಟ್ಟುಗೂಡಿಸಿ, ಅವುಗಳ ಆಧಾರದಿಂದ ಬೇರೆ ಬೇರೆ

ವಿಷಯಗಳನ್ನು ಪ್ರತಿಪಾದಿಸುತ್ತಿದ್ದರು. ಹೀಗೆ ಅನೇಕ ವ್ಯಾಖ್ಯಾನಗಳನ್ನು ಕೊಟ್ಟ ಮೇಲೆ ಅವುಗಳ ಮಹತ್ವವನ್ನೂ ಸ್ವಾರಸ್ಯವನ್ನೂ ಬಲ್ಲ ಅವರ ಇಷ್ಟಮಿತ್ರರು ಅವುಗಳನ್ನು ಪುಸ್ತಕರೂಪದಿಂದ ಪ್ರಸಿದ್ಧಪಡಿಸಬೇಕೆಂದು ಅವರಿಗೆ ಆಗ್ರಹ ಮಾಡಲು ಮೊದಲು ಪ್ರಥಮ ಭಾಗವನ್ನಷ್ಟೇ ಅಚ್ಚು ಹಾಕಿಸಿದರು. ಅದು ಬಹುಜನಪ್ರಿಯವಾಗಿ ಮೇಲಿಂದ ಮೇಲೆ ಹೊಸ ಆವೃತ್ತಿಗಳನ್ನು ತೆಗೆಯುವ ಸುಯೋಗವು ಒದಗಿದ್ದರಿಂದ ಮುಂದೆ ಉಳಿದ ವ್ಯಾಖ್ಯಾನಗಳನ್ನು ದ್ವಿತೀಯ ಭಾಗದಲ್ಲಿ ಪ್ರಸಿದ್ಧಿಸಿದರು.

ಈ ಗ್ರಂಥವು ಒಬ್ಬ ವ್ಯಕ್ತಿಯ ಸ್ವತಂತ್ರ ವಿಚಾರದ ಫಲವಲ್ಲ; ಆದರೆ ಅನೇಕ ಪ್ರಾಚೀನ ಗ್ರಂಥಕಾರರ, ಕವಿಗಳ, ತತ್ವಜ್ಞಾನಿಗಳ, ಧರ್ಮೋಪದೇಶಕರ, ಶಾಸ್ತ್ರಜ್ಞರ ಹಾಗು ರಾಜಕಾರ್ಯಧುರಂಧರರ ಸುವಿಚಾರಗಳ ಸಾರವಾಗಿರುವುದು. ವಿಷಯದ ಪ್ರತಿಪಾದನೆಯಲ್ಲಿ ಬಿಡಿ ಬಿಡಿಯಾದ ವಾಕ್ಯಗಳನ್ನು ಒತ್ತಟ್ಟಿಗೆ ಸಮಾವೇಶಮಾಡಿದ್ದರಿಂದ ಕೆಲವೆಡೆಯಲ್ಲಿ ವಿಷಯವಿವೇಚನವು ಸಾಕಷ್ಟು ಸ್ಪಷ್ಟವಾಗಿಲ್ಲೆಂದು ಕೆಲವರು ಅನ್ನುತ್ತಾರೆ. ಆದರೂ ಗ್ರಂಥಕಾರರು ಅಂಥ ಸಂದಿಗ್ಧತೆಯನ್ನು ಮಾರ್ಮಿಕವಾದ ಸಂಕ್ಷಿಪ್ತ ವಾಕ್ಯಗಳಿಂದ ದೂರೀಕರಿಸಿದ್ದಾರೆಂಬುದು ಗ್ರಂಥವಾಚನದಿಂದ ಸ್ಪಷ್ಟವಾಗುವುದು. ಕನ್ನಡಿಗರಿಗೆ ವಿಷಯಜ್ಞಾನವು ಸ್ಪಷ್ಟವಾಗಿ ಆಗಬೇಕೆಂದು ನಾವು ಅಲ್ಲಲ್ಲಿಗೆ ಪಾಶ್ಚಾತ್ಯವಿಚಾರಗಳಿಗೆ ಸರಿಯಾದ ಶ್ಲೋಕಗಳನ್ನು ಭಗವದ್ಗೀತೆ, ಮಹಾಭಾರತ, ರಾಮಾಯಣ, ಭಾಗವತ ಮೊದಲಾದ ಅತಿ ಪ್ರಸಿದ್ಧ ಸಂಸ್ಕೃತ ಗ್ರಂಥಗಳೊಳಗಿಂದಲೂ ಕನ್ನಡಪದ್ಯಕಾವ್ಯಗಳೊಳಗಿಂದಲೂ ಆರಿಸಿ, ಕ್ಲಿಷ್ಟವಿದ್ದಲ್ಲಿ ಅರ್ಥಸಹಿತವಾಗಿ ಕೊಟ್ಟಿದ್ದೇವೆ. ಅದರಿಂದ ವಿಷಯವಿವೇಚನವು ಸುಗಮವಾದರೆ ನಾವು ಕೃತಾರ್ಥರೆಂದು ತಿಳಿದುಕೊಳ್ಳುವೆವು. ಈ ಪುಸ್ತಕವು ಇಂಗ್ಲಿಷ ಗ್ರಂಥದ ಶಬ್ದಶಃ ಭಾಷಾಂತರವಲ್ಲ. ಅದರೊಳಗಿನ ವಿಚಾರಗಳು ವಾಚಕರಿಗೆ ರುಚಿಸುವಂತೆ ಅವಶ್ಯವೆಂದು ತೋರಿದ ಹೆಚ್ಚುಕಡಿಮೆಗಳನ್ನು ಮಾಡಿದ್ದೇವೆ.

ಈ ನಿಬಂಧಗಳಿಂದ ಸಾಂಸಾರಿಕರಾದ ಸ್ತ್ರೀಪುರುಷರಿಗಷ್ಟೇ ಆನಂದವಾಗಬಹುದೆಂತಲ್ಲ; ಸಾಮಾನ್ಯ ವಾಚಕರಿಗೆ ಸಹ ಬೋಧಪ್ರದವೂ

ಮನೋರಂಜಕವೂ ಆಗಬಹುದೆಂದು ಎಣಿಸಿದ್ದೇವೆ. ಕನ್ನಡ ಭಾಷೆಯಲ್ಲಿ ಪ್ರಬಂಧ ಗ್ರಂಥಗಳ ಕೊರತೆಯು ವಿಶೇಷ. ಈ ಪುಸ್ತಕದಲ್ಲಿ ಬೇರೆ ಬೇರೆ ೨೩ ವಿಷಯುಗಳ ಮೇಲೆ ನಿಬಂಧಗಳಿದ್ದುದರಿಂದ ಆ ಕೊರತೆಯು ಕೆಲ-ಮಟ್ಟಿಗಾದರೂ ದೂರವಾಗುವುದೆಂದು ಆಶಿಸುತ್ತೇವೆ.

ಈ ಪುಸ್ತಕವನ್ನು ಪರೀಕ್ಷಿಸಿ ಬಹುಮಾನವನ್ನು ಕೊಟ್ಟು ಆದರಿಸಿದ ಕರ್ನಾಟಕ ವಿದ್ಯಾವರ್ಧಕ ಸಂಘಕ್ಕೂ, ಗ್ರಂಥಪ್ರಕಾಶನದ ಕಾರ್ಯ-ವನ್ನು ಸ್ವಪ್ರೇರಣೆಯಿಂದ ಕೈಕೊಂಡ ಕರ್ನಾಟಕ ಗ್ರಂಥಪ್ರಸಾರಕ ಮಂಡಲಕ್ಕೂ, ಪುಸ್ತಕವನ್ನು ಬಲು ಅಂದವಾಗಿ ಮುದ್ರಿಸಿದ ಧರ್ಮ-ಪ್ರಕಾಶ ಮುದ್ರಣಾಲಯಕ್ಕೂ, ಈ ಪುಸ್ತಕವನ್ನು ಸಮಗ್ರ ಓದಿ ಅನೇಕ ಉಪಯುಕ್ತ ಸೂಚನೆಗಳನ್ನೂ ತಿದ್ದುಪಡೆಗಳನ್ನೂ ಮಾಡಿದ ನಮ್ಮ ಪರಮಮಿತ್ರರಾದ ರಾ. ರಾ. ವೆಂಕಟರಾವ ಆಲೂರ ಇವರಿಗೂ ನಾವು ಕೃತಜ್ಞರಾಗಿರುವೆವು.

ಬೆಳಗಾಂವ,
ಮೇ, ೧೯೧೩.

**ಹನುಮಂತರಾವ ಗೋವಿಂದರಾವ**
**ದೇಶಪಾಂಡೆ.**

---

## ಎರಡನೆಯ ಆವೃತ್ತಿ.

ಈ ಗ್ರಂಥವು ಪ್ರಸಿದ್ಧವಾದ ಕೆಲವು ವರುಷಗಳಲ್ಲಿ ಇದರ ಪ್ರತಿಗಳೆಲ್ಲ ತೀರಿಹೋದುವು. ಜನರ ಬೇಡಿಕೆಯು ಹೆಚ್ಚಾಗುತ್ತ ನಡೆದದೆ. ಆದು-ದರಿಂದ ಈ ಆವೃತ್ತಿಯನ್ನು ಪ್ರಸಿದ್ಧಿಸುವ ಸುಯೋಗವು ಒದಗಿದ್ದಕ್ಕಾಗಿ ನಾವು ಸಂತೋಷವನ್ನು ವ್ಯಕ್ತಪಡಿಸದೆ ಇರಲಾರೆವು. ಈ ಪುಸ್ತಕ-ವನ್ನು ಮೆ। ಎಜ್ಯುಕೇಶನಲ್ ಇನ್‌ಸ್ಪೆಕ್ಟರ್ ಸಾಹೇಬ ದಕ್ಷಿಣ ಭಾಗ-ಇವರು ಇನಾಮಿಗಾಗಿಯೂ ವಾಚನಾಲಯುಗಳಿಗಾಗಿಯೂ ೧೯೧೮ನೇ ಇಸವಿಯಲ್ಲಿ ಮಂಜೂರು ಮಾಡಿದ್ದಾರೆ. ಇತ್ತಲಾಗಿ ಹೈಸ್ಕೂಲುಗಳ ಎಲ್ಲ ಇಯತ್ತೆಗಳಲ್ಲಿಯೂ ಕನ್ನಡ ಗದ್ಯ ಪುಸ್ತಕಗಳನ್ನು ಓದುವುದು ಅವಶ್ಯ-ವಾಗಿದೆ. ಮತ್ತು ವಿಶ್ವವಿದ್ಯಾಲಯುಗಳ ಪರೀಕ್ಷೆಗಳಿಗೂ ಸಹ ಕನ್ನಡ ಗದ್ಯ

ಪುಸ್ತಕಗಳನ್ನು ನಿಯಮಿಸಿರುವರು. ಈ ಪುಸ್ತಕವು ಅಂಥ ವಿದ್ಯಾರ್ಥಿ-ಗಳಿಗೆ ತಕ್ಕ ಪುಸ್ತಕವೆಂಬುದು ವಾಚನದಿಂದ ಗೊತ್ತಾಗುವುದು.

ಹಿಂದಿನ ಆವೃತ್ತಿಯೊಳಗಿನ ದೋಷಗಳನ್ನು ಈ ಸಾರೆ ದೂರಮಾಡ-ಲಿಕ್ಕೆ ಯತ್ನಿಸಿದ್ದೇವೆ. "ಕನ್ನಡ ಭಾಷೆಯಲ್ಲಿಯ ಉತ್ತಮ ಗ್ರಂಥಗಳು" ಎಂಬ ೪ನೆಯ ಅಧ್ಯಾಯದಲ್ಲಿ ವಿಷಯ ವೈಚಿತ್ರ್ಯವನ್ನು ವಿವರಿಸುವ ಪುಸ್ತಕ-ಗಳು ಕಡಿಮೆಯೆಂದು ಬರೆದಿದ್ದೆವು. ಈಗ ಆ ಸ್ಥಿತಿಯು ಸುಧಾರಿಸ-ಹತ್ತಿದೆಂಬುದು ಸಂತೋಷದ ಸಂಗತಿಯು. ಹಿಂದೆ ಭಗವದ್ಗೀತೆಯ ಶ್ಲೋಕಗಳನ್ನು ಉಲ್ಲೇಖಿಸುವಾಗ ಮೂಲಸಂಸ್ಕೃತ ಪದ್ಯಗಳನ್ನು ಮಾತ್ರ ಕೊಟ್ಟದ್ದೆವು. ಈ ಸಾರೆ ಅವುಗಳೊಂದಿಗೆ ನಾಗರಸನ ಕರ್ನಾಟಕ ಭಗವ-ದ್ಗೀತೆಯೊಳಗಿನ ಸುರಸ ಕನ್ನಡ ಗೀತಗಳನ್ನು ಕೊಟ್ಟದ್ದೇವೆ.

ಪಾಶ್ಚಾತ್ಯ ಗ್ರಂಥಕಾರರ ಗ್ರಂಥಗಳೊಳಗಿನ ಅನೇಕ ವಿಚಾರಗಳು ಈ ಪುಸ್ತಕದಲ್ಲಿ ಸಮಾವೇಶವಾಗಿವೆ. ಆದುದರಿಂದ ಆ ಗ್ರಂಥಕಾರರ ಅಲ್ಪ ಪರಿಚಯವನ್ನು ವಾಚಕರಿಗೆ ಮಾಡಿಕೊಡುವುದಕ್ಕಾಗಿ ಅವರ ಅಲ್ಪ ಚರಿತ್ರಗಳನ್ನು ಅನುಬಂಧದಲ್ಲಿ ಕೊಟ್ಟದ್ದೇವೆ.

ಈ ಆವೃತ್ತಿಯನ್ನು ಪ್ರಸಿದ್ಧಿಸುವದಕ್ಕಿಂತ ಮೊದಲು ನನ್ನ ಸಹ ವ್ಯವ-ಸಾಯಿಗಳೂ ಸ್ನೇಹಿತರೂ ಆದ ಪಂಡಿತ ಮಹಾದೇವ ಶಾಸ್ತ್ರಿ ಪೂಜಾರ ಮತ್ತು ಶ್ರೀ. ನಾರಾಯಣ ವೆಂಕಟೇಶ ಕುರಡಿ ಇವರಿಬ್ಬರೂ ಬಹು ಸೂಕ್ಷ್ಮ-ವಾಗಿ ಈ ಪುಸ್ತಕವನ್ನು ಓದಿ ಅನೇಕ ಉಪಯುಕ್ತ ಸೂಚನೆಗಳನ್ನು ಮಾಡಿದ್ದಕ್ಕಾಗಿ ಅವರಿಗೆ ತುಂಬಾ ಉಪಕೃತನಾಗಿರುವೆನು.

ಟ್ರೇನಿಂಗ್ ಕಾಲೇಜ್,
ಧಾರವಾಡ.
ಫೆಬ್ರುವರಿ ೧೯೩೬.

**ಹನುಮಂತರಾವ ಗೋವಿಂದರಾವ**
**ದೇಶಪಾಂಡೆ.**

# ಮೂರನೆಯ ಆವೃತ್ತಿ.

ಮುಂಬೈ ಪ್ರಾಂತದ ವಿದ್ಯಾಧಿಕಾರಿಗಳು ಈ ಪುಸ್ತಕವನ್ನು ಪಠ್ಯ ಪುಸ್ತಕವೆಂದು ನಿಯಮಿಸಿದ್ದರಿಂದಲೂ, ಮುಂಬೈ ವಿಶ್ವವಿದ್ಯಾಲಯದವರು ಇ. ಸ. ೧೯೨೯ನೆಯ ಎಪ್ರಿಲದಲ್ಲಾಗುವ ಮ್ಯಾಟ್ರಿಕ್ಯುಲೇಶನ ಪರೀಕ್ಷೆಗೆ ಪಠ್ಯಪುಸ್ತಕವೆಂದು ಗೊತ್ತುಮಾಡಿದ್ದರಿಂದಲೂ ಎರಡೇ ವರ್ಷಗಳಲ್ಲಿ ಪ್ರತಿ-ಗಳು ತೀರಿ ವಿದ್ಯಾರ್ಥಿಗಳ ಹಾಗೂ ಸಾಮಾನ್ಯ ವಾಚಕರ ಬೇಡಿಕೆಯು ಹೆಚ್ಚಾಗಿದೆ. ಆದುದರಿಂದ ಈ ಮೂರನೆಯ ಆವೃತ್ತಿಯನ್ನು ಪ್ರಸಿದ್ಧಿಸುವ ಸುಯೋಗವು ಒದಗಿದ್ದಕ್ಕಾಗಿ ಸಂತೋಷಬಡುತ್ತೇವೆ. ಮತ್ತು ಈ ಕಾರ್ಯದಲ್ಲಿ ನಮಗೆ ಸಂಪೂರ್ಣವಾಗಿ ಸಹಾಯಮಾಡಿದ ಮುಂಬೈ ವಿದ್ಯಾಧಿಕಾರಿಗಳಿಗೂ ವಿಶ್ವವಿದ್ಯಾಲಯದವರಿಗೂ ನಮ್ಮ ವಂದನೆಗಳನ್ನು ಸಮರ್ಪಿಸುವೆವು.

ಹಿಂದಿನ ಆವೃತ್ತಿಯಲ್ಲಿಯ ದೋಷಗಳನ್ನು ದೂರಮಾಡಿ ಈ ಆವೃತ್ತಿ-ಯು ಸರ್ವ ವಿಧದಿಂದಲೂ ಸಮೀಚೀನವಾಗುವಂತೆ ಮಾಡಿದ್ದೇವೆ.

ಇಂಗ್ಲಿಷ ಭಾಷೆಯಲ್ಲಿಯ ಉತ್ತಮ ಗ್ರಂಥಗಳಿಗೆ ಕನ್ನಡ ಗ್ರಂಥ-ಗಳನ್ನು ಹೋಲಿಸಿದರೆ ನಮ್ಮಲ್ಲಿ ಭೌತಿಕಶಾಸ್ತ್ರ, ನಾಟಕ, ಪ್ರಬಂಧ, ಇತಿಹಾಸ ಮೊದಲಾದ ವಿಷಯಗಳನ್ನು ಬೋಧಿಸುವ ಉತ್ತಮ ಗ್ರಂಥಗಳು ಇನ್ನೂ ಹುಟ್ಟಬೇಕಾಗಿವೆ ಎಂದು ಹೇಳುವದು ತಪ್ಪಾಗಲಿಕ್ಕಿಲ್ಲ.

ಎಂದಿನಂತೆ ಮುದ್ರಣದ ಕಾರ್ಯವನ್ನು ಸುಂದರವಾಗಿಯೂ, ಸತ್ವರ-ವಾಗಿಯೂ ಮಾಡಿಕೊಟ್ಟದ್ದಕ್ಕೆ ಧರ್ಮಪ್ರಕಾಶ ಮುದ್ರಣಾಲಯದ ವ್ಯವ-ಸ್ಥಾಪಕರನ್ನು ಅಭಿನಂದಿಸುವೆವು.

ಟ್ರೇನಿಂಗ ಕಾಲೇಜ,
ಆಗಸ್ಟ ೧೯೨೮.

**ಹನುಮಂತರಾವ ದೇಶಪಾಂಡೆ.**

# ಅನುಕ್ರಮಣಿಕೆ.

---

## ೧ನೆಯ ಭಾಗ.

## ೨ನೆಯ ಭಾಗ.

ಶ್ರೀ

# ಸಂಸಾರಸುಖ.

## ೧ನೆಯ ಭಾಗ.

## ೧ನೆಯ ಅಧ್ಯಾಯ.

### ಸುಖಪ್ರಾಪ್ತಿ.

"अकिंचनस्य दान्तस्य शान्तस्य समचेतसः ।
सदा संतुष्टमनसः सर्वाः सुखमया दिशः ॥"

—भर्तृहरि.




ಕಿಂಚನನಿಗೂ, ದಾಂತನಿಗೂ, ಶಾಂತನಿಗೂ, ಸಮಚಿತ್ತ-ವುಳ್ಳವನಿಗೂ, ಯಾವಾಗಲೂ ಸಂತುಷ್ಟನಿದ್ದವನಿಗೂ ಸುಖವಾಗುವುದು.

ಮಾನವ ಪ್ರಾಣಿಗಳೆಲ್ಲರೂ ಸುಖಿಗಳಾಗಬೇ-ಕೆಂದು ದೇವರ ಇಚ್ಛೆಯು. ಇನ್ನು, ಯಾರಾದರೂ ದುಃಖಿಗಳಾದರೆ ಅದು ಅವರ ತಪ್ಪಿನಿಂದಲೇ ಸರಿ; ದೇವರ ಇಚ್ಛೆಯೇ ನಮಗೆ ಕೊಟ್ಟ ಆಜ್ಞೆಯೆಂದು ತಿಳಿಯತಕ್ಕದ್ದು. ಅದನ್ನು ಮೀರುವುದೇ ಪಾಪವು. "**पापमूलानि दुःखानि**".

ಎಲ್ಲ ಜನ್ಮಗಳಲ್ಲಿಯೂ ಮನುಷ್ಯಜನ್ಮವು ಶ್ರೇಷ್ಠವಾದುದರಿಂದ ಆ ಜನ್ಮವನ್ನು ಪಡೆದವರು ಅವರ ಸಾಫಲ್ಯವು ಹೇಗೆ ಆಗುವುದೆಂಬುದನ್ನು ಅರಿತು ಅದರಂತೆ ವರ್ತಿಸುವುದು ಅವರ ಕರ್ತವ್ಯವು.

"ಪರರ ದೆಸೆಯಿಂದ ಮನಮುಟ್ಟಿ ಯತ್ನಮಾಡಿ ಅವರಿಗೆ ಆದಷ್ಟು ಹಿತವಾಗುವಂತೆ ಮಾಡಬೇಕೆಂಬ ಸಿದ್ಧಾಂತವು ಸರ್ವರಿಗೂ ಮಾನ್ಯ-ವಾದರೂ ಅದಕ್ಕನುಸರಿಸಿ ವರ್ತಿಸುವುದು ಎಲ್ಲರಿಗೂ ಸಾಧ್ಯವಲ್ಲ; ಆದರೂ

ಪ್ರತಿಯೊಬ್ಬನು ತನ್ನ ನೆರೆಹೊರೆಯುವರಿಗೂ, ಆಪ್ತೇಷ್ಟರಿಗೂ ಸುಖವಾಗುವಂತೆ ಪ್ರಯತ್ನ ಮಾಡುವುದು ಉಚಿತವಲ್ಲವೋ? ಇನ್ನು ಸ್ವಸುಖಕ್ಕಾಗಿಯೇ ಶ್ರಮಪಡುವುದು ಸರಿಯಾದುದೋ ಅಲ್ಲವೋ ಎಂಬ ಮಾತಿನ ವಿಷಯವಾಗಿ ಮಾತ್ರ ಮತಭೇದವುಂಟು.

ವಿಚಾರಮಾಡಲು, ಸುಖವು ಜೀವಿತದ ಮುಖ್ಯೋದ್ದೇಶ್ಯವಲ್ಲೆಂದು ಕಂಡುಬರುತ್ತದೆ; ಮತ್ತು ನಾವು ಸ್ವಾರ್ಥಪರರಾಗಿ ಅದನ್ನು ಹುಡುಕಹೋದರೆ, ಅದು ಸಿಗುವುದೂ ದುರ್ಲಭವು; ಈ ಸಂಸಾರದಲ್ಲಿ ಅನೇಕ ಪ್ರಕಾರದ ವಿಲಾಸಗಳು ಇವೆ. ಅವುಗಳಲ್ಲಿಯೇ ಆಸಕ್ತರಾದರೆ ನಾವು ದುಃಖಿಗಳಾಗುವುದು ನಿಜವು. ಒಂದರಹಿಂದೊಂದರಂತೆ ಒದಗುವ ಸುಖದುಃಖಗಳಿಗೆ ಈಡಾಗುವ ಮನುಷ್ಯನ ಪಾಡು ಏನಾಗುವುದೆಂಬುದನ್ನು ತರ್ಕಿಸುವುದು ಅಸಾಧ್ಯವು!

“ಸುಖವನ್ನು ಸಂಪಾದಿಸುವುದು ನಮ್ಮ ಕರ್ತವ್ಯವು; ಮತ್ತು ಕರ್ತವ್ಯವನ್ನು ಮಾಡುವುದರಿಂದಲೇ ಸುಖಪ್ರಾಪ್ತಿಯು” ಎಂಬ ಎರಡು ಬೀಜ ಮಂತ್ರಗಳನ್ನು ಅರಿತುಕೊಂಡರೆ, ನಮ್ಮ ಸಂಸಾರಯಾತ್ರೆಯು ಸುಖಾವಹವಾಗಬಹುದು. ನಾವು ಸ್ಮಿತವದನರಾಗಿಯೂ, ಆನಂದವೃತ್ತಿಯುಳ್ಳವರಾಗಿಯೂ ಇದ್ದರೆ, ನಮ್ಮ ಕುಟುಂಬದ ಜನರೂ ನೆರೆಯುವರೂ ಸಹ ನಮ್ಮಂತೆ ಆನಂದವನ್ನೂ ಸುಖವನ್ನೂ ಹೊಂದಬಹುದು.

ಆನಂದವೃತ್ತಿಯುಳ್ಳ ಗೆಳೆಯರ ಸಮಾಗಮದಿಂದ ಎಷ್ಟು ಸುಖವಾಗುತ್ತದೆಂಬುದು ಎಲ್ಲರಿಗೂ ಗೊತ್ತಿದ್ದ ಮಾತಾಗಿದೆ. ಇಹಲೋಕದಲ್ಲಿದ್ದು ಸ್ವರ್ಗದ ಸುಖವನ್ನಾಗಲಿ ನರಕದ ಯಾತನೆಯನ್ನಾಗಲಿ ಅನುಭವಿಸುವುದು ಸರ್ವಥಾ ನಮ್ಮ ಮನೋವೃತ್ತಿಯನ್ನೇ ಅವಲಂಬಿಸಿಯಿದೆ.

ಎಷ್ಟೋ ಜನರು ತಾವು ದುರ್ದೈವಿಗಳೆಂದು ತಿಳಿದು, ಹಗಲೂ ಇರುಳೂ ಇಲ್ಲದ ದುಃಖಗಳ ವ್ಯರ್ಥವಾದ ಕಲ್ಪನೆಯನ್ನು ಮಾಡುವುದರಲ್ಲಿಯೇ ಹೊತ್ತುಗಳೆಯುವರು. ಸದಾ ಆನಂದವೃತ್ತಿಯಿಂದಿರುವುದು ಅಶಕ್ಯವಾದರೂ ಕುಶಲತೆಯಿಂದಲೂ, ಜಾಗರೂಕತೆಯಿಂದಲೂ ಅದನ್ನು ಪಡೆಯಬಹುದು.

**"सुखस्यानंतरं दुःखं दुःखस्यानंतरं सुखम्"**

"ಸುಖದ ಮೇಲೆ ದುಃಖ, ದುಃಖದ ಮೇಲೆ ಸುಖ."

ಈ ಜಗತ್ತಿನಲ್ಲಿ ಸುಖದುಃಖಗಳು ಒಂದಕ್ಕೊಂದು ತಳಕುಹಾಕಿಕೊಂಡಂತೆ ತೋರುತ್ತವೆ. ನಮಗೆ ಎಷ್ಟು ಸುಖವಿದ್ದರೂ ಹೆಚ್ಚಿನ ಸೌಖ್ಯವಿಲ್ಲೆಂದು ನಾವು ದುಃಖಪಡುತ್ತಿರುತ್ತೇವೆ. ನಾವು ಎಷ್ಟು ದುಃಖಿಗಳಾದರೂ ಸುಖಸಮಾಧಾನಗಳು ನಮಗೆ ಅಲ್ಪಾಂಶದಿಂದಾದರೂ ಲಭಿಸಬಹುದು.

ಇಂಗ್ಲಿಷ್ ಜನರು ಉದಾಸೀನಸ್ವಭಾವದವರಾದುದರಿಂದ ಆನಂದದಲ್ಲಿದ್ದಾಗ ಸಹ ಅವರ ಮೋರೆಯ ಮೇಲೆ ಔದಾಸೀನ್ಯದ ಕಳೆಯು ತೋರುವುದೆಂದು ಕೆಲವರ ಅಭಿಪ್ರಾಯವಿದೆ; ಆದರೆ ಇಂಗ್ಲಂಡಕ್ಕೆ ಮೊದಲಿನಿಂದ (Merry) 'ಉಲ್ಲಾಸವೃತ್ತಿಯ' ಎಂಬ ವಿಶೇಷಣವನ್ನು ಹಚ್ಚುವುದರಿಂದ ಅಲ್ಲಿಯ ಜನರು ಆನಂದವೃತ್ತಿಯುಳ್ಳವರೆಂಬುದು ನಿಸ್ಸಂದೇಹವಾಗಿದೆ! ನಿಜವಾಗಿ ನೋಡಲು, ಪೌರ್ವಾತ್ಯರು ಉದಾಸೀನಸ್ವಭಾವದವರೆಂದು ಕಂಡುಬರುವುದು. 'ಉಮರಕಯಾಮು'ನೆಂಬ ಒಬ್ಬ ಇರಾಣದ ಕವಿಯು ಬರೆದುದೇನಂದರೆ:—"ನಾವು ಈ ಜಗತ್ತಿನಲ್ಲಿ ಅತಿ ಸ್ವಲ್ಪಕಾಲ ವಾಸಿಸುತ್ತೇವೆ; ನಮಗೆ ಲಭಿಸುವ ಸಂಗತಿಗಳೆಂದರೆ ಶೋಕಾನುತಾಪಗಳು; ಮತ್ತು ಜನ್ಮದ ಸಾಫಲ್ಯವು ಹೇಗೆ ಆಗುವುದೆಂಬುದನ್ನು ನಾವು ತಿಳಿದುಕೊಳ್ಳದೆ ದುಃಖಪೀಡಿತರಾಗಿ ಹೊರಟುಹೋಗುತ್ತೇವೆ."

ಗೌತಮಬುದ್ಧನ ಅಭಿಪ್ರಾಯವಾದರೂ ಹೀಗೆಯೇ ಇದೆ. "ನಮ್ಮೆಲ್ಲರ ಜೀವಿತವು ವಾಯುವಿನಂತೆ ಇರುವುದು; ವಾಯುವಿಗೆ ಚಲನೆಯುಂಟಾಗಿ ನಸುಗಾಳಿ, ಸುಳಿಗಾಳಿ, ಬಿರುಗಾಳಿಗಳು ಉದ್ಭವಿಸುವಂತೆ ಮನುಷ್ಯನಿಗಾದರೂ ದುಃಖಾನುತಾಪಗಳು ಮೇಲಿಂದ ಮೇಲೆ ಒದಗುವುವು."

ಮೇಲೆ ಹೇಳಿದ ಮಾತು ನಿಜವಾದರೆ, ದುಃಖವನ್ನು ನಿರ್ಮೂಲಮಾಡುವುದಕ್ಕೆ ನಿರ್ವಾಣ(ಮೋಕ್ಷ)ವನ್ನು ಹೊಂದುವುದೇ ಮುಖ್ಯೋಪಾಯವೆಂದೆನ್ನಬೇಕಾಗುವುದು. ಆದರೆ ನಾವು ಇದಕ್ಕಿಂತ ಸುಲಭವಾದ ಹಾಗೂ ಹಿತಕರವಾದ ಉಪಾಯವನ್ನು ಹುಡುಕಿಕೊಳ್ಳುವುದು ಉಚಿತವಲ್ಲವೋ?

"उदरभरणमात्रकेवलेच्छो: ।
पुरुषपशोश्च पशोश्च को विशेषः ॥" —हितोपदेश.

"ಕೇವಲ ಹೊಟ್ಟೆತುಂಬಿಕೊಂಡು ಆಯುಷ್ಯವನ್ನು ಕಳೆಯುವ
ನರಪಶುಗಳಿಗೂ ಪಶುಗಳಿಗೂ ಏನು ಭೇದವು?"

ಜಗತ್ತಿನಲ್ಲಿ ಪ್ರತಿಯೊಬ್ಬನು ಮಾಡಬಹುದಾದ ಸತ್ಕಾರ್ಯವು ಇದ್ದೇ ಇರುತ್ತದೆ. ಹೀಗಿದ್ದರೂ ಎಷ್ಟೋ ಜನರಿಗೆ ಜನ್ಮದಲ್ಲಿ ತಮ್ಮ ಕರ್ತವ್ಯವೇನೆಂಬುದರ ಅರಿವು ಸಹ ಇರುವುದಿಲ್ಲ. ನದಿಯ ಸೆಳವಿಗೆ ಬಿದ್ದು ಹರಿದುಹೋಗುವ ಹುಲ್ಲುಕಡ್ಡಿಗಳಂತೆ ಕೆಲವರು ಆಯುಷ್ಯಪ್ರವಾಹದ ಸೆಳವಿನಿಂದಲೇ ಹರಿದುಹೋಗುತ್ತಾರೆ; ಅವರಿಂದ ಒಂದಾದರೂ ಉಪಯುಕ್ತವಾದ ಕೆಲಸವಾಗದು. ಹೇಗಾದರೂ ಆಯುಷ್ಯ ಕಳೆದರೆ ತೀರಿತೆಂದು ತಿಳಿದು, ದೇವರು ತಮಗಿತ್ತ ಬುದ್ಧಿಸಾಮರ್ಥ್ಯದ ಉಪಯೋಗವನ್ನು ಮಾಡಿಕೊಳ್ಳದೆ ಪಶುಗಳಂತೆ ತಮ್ಮ ಆಯುಷ್ಯವನ್ನು ವ್ಯರ್ಥವಾಗಿ ಕಳೆಯುವ ಜನರಿಗೆ ಏನೆನ್ನಬೇಕೆಂಬುದು ತಿಳಿಯದು.

ನಮ್ಮ ಆಯುಷ್ಯದ ಪರಿಮಿತಿಯನ್ನು ಜಗತ್ತಿನಲ್ಲಿ ಕಳೆದ ವರ್ಷಗಳ ಮೇಲಿಂದ ಎಣಿಸದೆ, ನಾವು ಯೋಚಿಸಿದ ಸದ್ವಿಚಾರಗಳಿಂದಲೂ, ಯೋಜಿಸಿದ ಸತ್ಕೃತಿಗಳಿಂದಲೂ, ಬೋಧಿಸಿದ ಸದುಪದೇಶಗಳಿಂದಲೂ ಎಣಿಸತಕ್ಕದ್ದು. ಹೀಗೆ ಮಾಡುವವರಿಗೆ ಸಂಸಾರಸುಖವು ಲಭಿಸುವುದೆಂಬುದರಲ್ಲಿ ಸಂದೇಹವಿಲ್ಲ.

ಎಡರುಗಳು ಬಂದಾಗ ಅಂಜದೆ ಧೈರ್ಯದಿಂದ ಇದ್ದು, ನಮ್ಮ ಸುತ್ತಲೂ ಇರುವ ಸುಖಸಾಧನಗಳ ಉಪಯೋಗವನ್ನು ಮಾಡಿಕೊಂಡರೆ, ದೇವರು ನಮಗೆ ಕೊಟ್ಟ ಅಮೌಲ್ಯವಾದ ವಸ್ತುಗಳಲ್ಲಿ ಮನುಷ್ಯಜನ್ಮವು ಶ್ರೇಷ್ಠವಾದುದೆಂಬುದು ಕಂಡುಬರುವುದು. "ಜಗತ್ತಿನಲ್ಲಿ ಎಲ್ಲ ವಸ್ತುಗಳು ಮನುಷ್ಯನ ಉಪಯೋಗಕ್ಕಾಗಿಯೇ ನಿರ್ಮಿತವಾಗಿವೆಯೆಂದರೂ ಸಲ್ಲುವುದು; ಕಸದಂತೆ ಎಲ್ಲ ಕಡೆಯಲ್ಲಿಯೂ ಹುಟ್ಟುವ ಗಿಡಮೂಲಿಕೆಗಳಿಂದ ಅವನ ಬೇನೆಯು ವಾಸಿಯಾಗುವುದು. ಹೊಲದ ಬೆಳೆಯಿಂದ ಅವನ ಉಪಜೀವನವಾಗುವುದು. ಹೀಗೆ ವ್ಯಕ್ತವಾಗುವ ದೇವರ ಪ್ರೀತಿ-

ಯನ್ನು ಎಷ್ಟೆಂದು ವರ್ಣಿಸಲಿ! ಅವನು ಮನುಷ್ಯನ ಸಲುವಾಗಿಯೇ ಜಗತ್ತನ್ನು ನಿರ್ಮಿಸಿದ್ದಾನೆಂದರೂ ಸಲ್ಲುವುದು."

—**ಹರ್ಬರ್ಟ್**.

ಅನೇಕರಿಗೆ ತಮ್ಮ ಈ ಅಲಭ್ಯಜನ್ಮದ ಬಗ್ಗೆ ದೇವರಲ್ಲಿ ಕೃತಜ್ಞತೆಯೇ ಹುಟ್ಟುವುದಿಲ್ಲ; ಜಗತ್ತಿನ ಸೌಂದರ್ಯವೈಭವಗಳನ್ನು ನೋಡಿ ಸಂತೋಷ-ಸಮಾಧಾನಗಳು ಆಗುವುದಿಲ್ಲ. ದುಃಖಕ್ಲೇಶಗಳನ್ನು ನೀಗಿ ನಾವು ಸುಖಿ-ಗಳಾಗಬೇಕಾದರೆ ಜಗತ್ತಿನಲ್ಲಿಯ ಸುಖಸಾಧನಗಳ ಉಪಯೋಗವನ್ನು ಮಾಡಿಕೊಳ್ಳಬೇಕೆಂಬ ಬೀಜಮಂತ್ರವನ್ನು ಅರಿತುಕೊಳ್ಳತಕ್ಕದ್ದು. ಹಾಗೆ ಮಾಡದವರು ಮಹಾಮೂರ್ಖರು! ನಾವು ಬಾಲ್ಯದಲ್ಲಾಗಲಿ ತಾರುಣ್ಯ-ದಲ್ಲಾಗಲಿ ಸೋಮಾರಿಗಳಾದರೆ ಮುಂದೆ ದುಃಖಿಗಳಾಗುವುದೂ ಪಶ್ಚಾ-ತ್ತಾಪಪಡುವುದೂ ನಿಜವು!

'**अतिपरिचयादवज्ञा**' ಎಂಬ ಉಕ್ತಿಯಂತೆ ನಮ್ಮೆದುರಿಗೆ ಪಸರಿಸಿರುವ ಜಗತ್ತಿನ ಅಲೌಕಿಕಸೌಂದರ್ಯವನ್ನು ನಾವು ಕಣ್ಣೆತ್ತಿ ಸಹ ನೋಡುವು-ದಿಲ್ಲ; ನೋಡಿದರೂ ಅದರ ಬಗ್ಗೆ ನಮ್ಮಲ್ಲಿ ಆದರವೇ ಹುಟ್ಟುವುದಿಲ್ಲ.

"ದೇವರು ಕರುಣಾನಿಧಿಯೆಂದು ಸಾಧುಸಂತರು ನಮಗೆ ಉಪದೇಶಿ ಸುತ್ತಾರೆ. ಆದರೆ ದೇವರ ಪ್ರೀತಿಯನ್ನು ಸಂಪಾದಿಸುವ ತೀರ ಸುಲಭ ಸಾಧನಗಳು ಯಾವುವೆಂಬುದನ್ನು ಅವರು ಹೇಳುವುದಿಲ್ಲ. ಅವನು ಇತರ ಪ್ರಾಣಿಗಳಿಗೆ ಕೊಟ್ಟಂತೆ ನಮಗಾದರೂ ಅನ್ನವಸ್ತ್ರಾರೋಗ್ಯಗಳನ್ನು ಕೊಟ್ಟಿ ರುತ್ತಾನೆಂದು ಹೇಳುತ್ತಾರೆ; ಆದರೆ ಮನುಷ್ಯನಿಗೆ ಸೃಷ್ಟಿವೈಚಿತ್ರ್ಯವನ್ನು ಅರಿತುಕೊಳ್ಳುವ ಸಾಮರ್ಥ್ಯವನ್ನು ಕೊಟ್ಟಿರುವುದರಿಂದ, ನಾವು ಆತನ ಉಪಕಾರವನ್ನು ಎಷ್ಟು ಸ್ಮರಿಸಿದರೂ ತೀರದೆಂಬ ಮಾತನ್ನು ಅವರು ಹೇಳು ವುದಿಲ್ಲ. ಏಕಾಂತದಲ್ಲಿ ಕುಳಿತು ದೇವರ ಧ್ಯಾನಮಾಡಿರೆಂದು ಅವರು ಉಪ ದೇಶಮಾಡುತ್ತಾರೆ; ಆದರೆ ಬೈಲಿಗೆ ಹೋಗಿ ಸುತ್ತಲಿನ ಸೃಷ್ಟಿಸೌಂದರ್ಯ ವನ್ನು ನೋಡಿರೆಂದು ಹೇಳುವುದಿಲ್ಲ. ಆತ್ಮಸಂಯಮನ ಮಾಡುವುದು ನಮ್ಮೆ ಲ್ಲರ ಕರ್ತವ್ಯವೆಂದು ಹೇಳುತ್ತಾರೆ; ಆದರೆ ಸುಖದ ಉಪಭೋಗವನ್ನು ತೆಗೆದುಕೊಳ್ಳುವುದು ಮನುಷ್ಯನ ಕರ್ತವ್ಯವೆಂದು ಅವರು ಹೇಳುವುದಿಲ್ಲ.

ಪಕ್ಷಿಗಳ ಇಂಪಾದ ಗಾನವನ್ನೂ, ಮಂದವಾಗಿ ಬೀಸುವ ಗಾಳಿಯನ್ನೂ, ನಿರ್ಮಲವಾದ ಝುರಿಗಳ ಮಂದವಾದ ಪ್ರವಾಹವನ್ನೂ ಕೃಪಾಳುವಾದ ದೇವರು ಮನುಷ್ಯನ ಮನೋರಂಜನದ ಸಲುವಾಗಿಯೇ ಉಂಟುಮಾಡಿ-ದ್ದಾನೆ; ಆದುದರಿಂದ ಅಂಥ ವಸ್ತುಗಳಿಂದ ಆನಂದಹೊಂದದವರು ದೇವರ ಕೃಪೆಗೆ ತಾವು ಪಾತ್ರರಲ್ಲೆಂಬುದನ್ನು ಒಪ್ಪಿಕೊಂಡಂತಾಗುವುದು."

— **ಜಾನ್ ರಸ್ಕಿನ್.**

"ನಾವು ನಮ್ಮ ಆಯುಷ್ಯದ ಸಿಂಹಾವಲೋಕನವನ್ನು ಮಾಡಿದರೆ ಸುಖಪ್ರಾಪ್ತಿಯನ್ನು ಮಾಡಿಕೊಳ್ಳುವ ಎಷ್ಟೋ ಉತ್ತಮ ಪ್ರಸಂಗಗಳನ್ನು ಕಳೆದುಕೊಂಡೆವೆಂಬುದು ನಮಗೆ ಕಂಡುಬರುವುದು."

— **ಟೇಲರ್.**

"ಆಯುಷ್ಯದಲ್ಲಿ ಸುಖಹೊಂದದಂಥ ಮನುಷ್ಯನು ಜೀವನ್ಮೃತನೇ ಸರಿ."

— **ಬ್ರಾವುನ್.**

"ನಮ್ಮ ದುಃಖಕ್ಕೆ ನಾವೇ ಕಾರಣೀಭೂತರು."

— **ಸೆಂಟ್ ಬರ್ನರ್ಡ್.**

"ಮನುಷ್ಯರು ಸಂಕಟಗಳಿಗೆ ಒಳಗಾಗಬಾರದೆಂದು ದೇವರು ಸುಖೋ-ತ್ಪತ್ತಿಯ ಸಾಧನಗಳನ್ನೂ ದುಃಖನಿವಾರಣೆಯ ಉಪಾಯಗಳನ್ನೂ ಅವ-ರಿಗೆ ಗೊತ್ತುಮಾಡಿಕೊಟ್ಟಿದ್ದಾನೆ; ಆ ಸಾಧನಗಳನ್ನು ಯೋಗ್ಯರೀತಿ-ಯಿಂದ ಉಪಯೋಗಿಸುವವನಿಗೆ ದುಃಖವು ಸಹಸಾ ಒದಗಲಾರದು."

— **ಮಾರ್ಕಸ್ ಅರೇಲಿಯಸ್.**

"ದೇವರ ಇಚ್ಛೆಯಂತೆ ಎಲ್ಲ ಕಾರ್ಯಗಳು ನೆರವೇರುವುದು ಹಿತವಲ್ಲದೆ ನಮ್ಮ ಇಚ್ಛೆಯಂತೆ ನಡೆಯುವುದು ಇಷ್ಟವಲ್ಲ. ಆದುದರಿಂದ ನಿಮ್ಮ ಕೋರಿಕೆಯಂತೆ ಎಲ್ಲವೂ ಕೈಗೂಡಬೇಕೆಂದು ಬಯಸಬೇಡಿರಿ. ಹೀಗೆ ಬಯಸದೆ ಇರುವುದರಿಂದಲೇ ಮನಶ್ಶಾಂತಿಯುಂಟಾಗುವುದು."

— **ಎಪಿಕ್ಟಿಟಸ್.**

ಹೀಗೆ ನಡೆಯುವುದು ವೇದಾಂತಿಗಳಿಗೆ ಸಾಧ್ಯವಲ್ಲದೆ ನಮ್ಮಂಥ ಪಾಮರರಿಗೆ ಸಾಧ್ಯವಾಗಲಾರದೆಂದು ಕೆಲವರು ಆಕ್ಷೇಪಿಸಬಹುದು.

ನಮ್ಮ ಸಾಧುಸಂತರೆಲ್ಲರೂ ಇದೇ ತೆರದ ಉಪದೇಶವನ್ನು ಮಾಡಿರುವು-ದಿಲ್ಲವೇ? "ಆದದ್ದೆಲ್ಲ ಒಳಿತೇ ಆಯಿತು" ಎಂಬ ಪುರಂದರದಾಸರ ವಾಕ್ಯದ ಬೋಧವಾದರೂ ಇದೇ.

ಮೇಲೆ ಹೇಳಿದ ತತ್ವಗಳು ನಿಜವಿದ್ದರೂ ನಮಗೆ ಬಾಹ್ಯಕಾರಣ-ಗಳಿಂದ ಒಮ್ಮೊಮ್ಮೆ ದುಃಖವಾಗದೆ ಇರದು. ಬೇನೆ, ಚಿಂತೆ, ನೋವು ಮೊದಲಾದುವುಗಳಿಂದ ನಾವು ಬಳಲದೆ ಇರಲಾರೆವು. ನಮ್ಮ ಪ್ರಿಯ ಜನರ ದುರ್ಲಕ್ಷದಿಂದಾಗಲಿ ಅವರ ತಪ್ಪುಗಳಿಂದಾಗಲಿ ಒಮ್ಮೊಮ್ಮೆ ನಮಗೆ ವ್ಯಸನವಾಗುವುದು. ಸಿಟ್ಟಿನಲ್ಲಾಡಿಸಿಕೊಂಡ ಒಂದು ಶಬ್ದದಿಂದ ಸಹ ಎಷ್ಟೋ ದಿವಸ ಅಸಮಾಧಾನಪಡುತ್ತಿರುವ ಜನರನ್ನು ನೀವು ನೋಡಿಲ್ಲವೆ? ಸನ್ ೧೮೦೬ನೆಯ ಇಸವಿಯ ಅಕ್ಟೋಬರ ತಿಂಗಳ ೧೪ನೇ ತಾರೀಖಿನ ದಿವಸ ಜೆನ್ನಾದಲ್ಲಿ ಯುದ್ಧವು ನಡೆದಿದ್ದರೂ, 'ಹೆಜೆಲ'ನೆಂಬ ಜರ್ಮನ್ ತತ್ವಜ್ಞನು ತನ್ನದೊಂದು ದೊಡ್ಡ ಗ್ರಂಥವನ್ನು ಅಲ್ಲೇ ಬರೆದು ಮುಗಿಯಿಸಿದನು. ಯುದ್ಧವು ನಡೆದದ್ದು ಅವನಿಗೆ ಗೊತ್ತಿದ್ದಿಲ್ಲ. ಯುದ್ಧದಲ್ಲಿ ತನ್ನ ದೇಶಬಾಂಧವರಿಗೆ ಅಪಜಯವಾಯಿತೆಂಬ ವಾರ್ತೆಯು ಅವನಿಗೆ ಗೊತ್ತಾ-ಗಿದ್ದರೆ ಬಹಳ ಅಸಮಾಧಾನವಾಗುತ್ತಿತ್ತು. ಮತ್ತು ಅವನಿಂದ ಆ ಗ್ರಂಥವನ್ನು ಬರೆಯುವುದು ಆಗುತ್ತಿದ್ದಿಲ್ಲ!

"ನಾವು ಆಕಾಶದಲ್ಲಿರುವ ಗ್ರಹಗಳಂತೆ ವರ್ತನವನ್ನಿಡುವುದು ಲೇಸು" ಎಂದು ಮ್ಯಾಥು ಆರ್ನೊಲ್ಡನೆಂಬ ವಿದ್ವಾಂಸನು ಹೇಳುತ್ತಾನೆ. "ಗ್ರಹ-ಗಳು ಸುತ್ತಲಿನ ಕತ್ತಲೆಗೆ ಅಂಜದೆ, ಸೃಷ್ಟಿಯ ಅಪಾರತೆಯಿಂದ ವ್ಯಗ್ರ-ವಾಗದೆ, ಬಾಹ್ಯವಸ್ತುಗಳ ಸಹಾಯವನ್ನಪೇಕ್ಷಿಸದೆ, ತಮ್ಮ ಕರ್ತವ್ಯ-ವನು ದಕ್ಷತೆಯಿಂದ ಮಾಡಿ ಅಪರಿಮಿತವಾದ ತೇಜಸ್ಸನ್ನು ಸಂಪಾದಿ-ಸಿರುತ್ತವೆ."

"लोके गुरुत्वं विपरीततां वा ।
स्वचेष्टितान्येव नरं नयंति ॥" —हितोपदेश.

"ನಮ್ಮ ಉತ್ಕರ್ಷವನ್ನು ಅಥವಾ ಅಪಕರ್ಷವನ್ನು ಮಾಡಿಕೊಳ್ಳು-ವುದು ನಮ್ಮ ಕೈಯಲ್ಲಿಯೇ ಇದೆ" ಎಂಬ ಮಾತು ಅಂಶತಃ ನಿಜವಿದ್ದರೂ

ಕೆಲವೆಡೆಯಲ್ಲಿ ಪರರ ಸಹಾಯವಿಲ್ಲದೆ ನಮ್ಮ ಪೂರ್ಣವಾದ ಏಳಿಗೆಯಾಗದು; ಮತ್ತು ಜನಸಮುದಾಯವನ್ನು ಬಿಟ್ಟು ಒಬ್ಬನೇ ಇರುವುದೂ ಅಸಾಧ್ಯವು. ಮನುಷ್ಯರಿಗೆ ಇತರರ ಸಮಾಗಮವು ಅವಶ್ಯವಾಗಿ ಬೇಕು. ನಾವು ನಮ್ಮ ಇಷ್ಟಮಿತ್ರರ ಹಿತಾಹಿತಗಳನ್ನು ಸಾಧಿಸಿದಂತೆ ಅವರಾದರೂ ನಮ್ಮ ಹಿತಾಹಿತಗಳನ್ನು ಸಾಧಿಸುವರು. ನಾವು ಕೇವಲ ಸ್ವಾರ್ಥಪರರಾಗಿ ಎರಡನೆಯವರ ಮೇಲೆ ದಯೆಯನ್ನು ತೋರಿಸದಿದ್ದರೆ ದೇವರು ನಮ್ಮ ಮೇಲೆ ಎಂದೂ ದಯೆ ತೋರಿಸನು."

ಸಂಕಟಗಳಿಂದ ನಮಗೆ ಯಾವಾಗಲೂ ಅಹಿತವಾಗುತ್ತದೆಂತಲ್ಲ; ಅವುಗಳಿಂದ ನಮಗೆ ಹಿತವಾಗುವುದಲ್ಲದೆ ಬೋಧವೂ ಉಂಟಾಗುವುದು.

"ಆಪತ್ತು ಬಂದಾಗ ನಾವು ಅದರ ಮರ್ಮವನ್ನು ತಿಳಿಯದೆ ಅದರಿಂದಾಗುವ ಹಿತವನ್ನು ಮರೆತು ದುಃಖಿಗಳಾಗುವುದು ಸರಿಯಾದುದಲ್ಲ. ದುಃಖವು ಮುಂದೆ ಬರತಕ್ಕ ಸುಖಗಳ ಸೂಚಕವಾಗಿದೆ."

— **ಬ್ರಾವುನ್.**

ನಮಗೆ ಒದಗುವ ಸಂಕಟಗಳಲ್ಲಿ ಸಹ ಹಿತದ ಅಂಶವಿರುವುದು. ಹಾಗಾದರೆ ಸಂಕಟವೆಂದರೇನು? ಅದರಿಂದ ನಮಗೆ ಶಾಶ್ವತವಾದ ಹಾನಿಯಾಗುವುದೋ? ಇಲ್ಲ. ನಾವು ಅನುಭವಿಸುವ ಕ್ಲೇಶಯಾತನೆಗಳಿಂದ ಕಟ್ಟಕಡೆಗೆ ನಮಗೆ ಸುಖವಾಗುವುದು. ಸಂಕಟಗಳಿಂದ ನಮ್ಮ ಅನುಭವವೂ ಸಹನಶೀಲತೆಯೂ ಹೆಚ್ಚಾಗುತ್ತವೆ. ಕತ್ತಲೆಯ ಹೊರತು ದೀಪದ ಮಹತ್ವವು ತಿಳಿಯದಂತೆ, ದುಃಖದ ಅನುಭವವಿಲ್ಲದೆ ಸುಖದ ಮಹತ್ವವು ಗೊತ್ತಾಗದು.

"**सुखं हि दुःखान्यनुभूय शोभते ।**
**घनांधकारेष्विव दीपदर्शनम् ॥**" — मृच्छकटिक.

"ದೇವರು ನಮ್ಮ ಕೊರತೆಗಳನ್ನು ಪೂರೈಸುವುದರಲ್ಲಿ ದಕ್ಷನಾಗಿರುವನು. ನಮ್ಮ ಪ್ರಾರ್ಥನೆಗಳನ್ನು ಕೇಳಿ, ನಮ್ಮ ಮನೋರಥಗಳನ್ನು ಪೂರ್ಣಗೈಯುವನು. ಒಮ್ಮೊಮ್ಮೆ ನಮಗೆ ನಿರಾಶೆಪಡಿಸಿದರೂ, ನಮ್ಮ ಇಚ್ಛೆಯನ್ನು ಅವನು ಅರಿತುಕೊಳ್ಳದೆ ಬಿಡನು."

"ದೇವರು ಅನ್ನವನ್ನು ಕೊಡುತ್ತಾನೆ; ಅವನೇ ನಮ್ಮನ್ನು ಪಾಲಿಸುತ್ತಾನೆ; ಅವನ ಆಜ್ಞೆಯಿಂದಲೇ ಮೋಡಗಳು ಮಳೆಗರೆಯುತ್ತವೆ; ದೇವರೇ ನಮ್ಮನ್ನು ಪಾರುಮಾಡುತ್ತಾನೆ; ಆತನೇ ನಮ್ಮನ್ನು ದಂಡಿಸುತ್ತಾನೆ; ಅವನೇ ಎಲ್ಲ ಕಾರ್ಯಗಳನ್ನು ಪ್ರವರ್ತಿಸುವನು; ಅನ್ನೋದಕಗಳನ್ನು ದೇವರೇ ಹುಟ್ಟಿಸಿದನು; ಚರಾಚರಾತ್ಮಕ ವಸ್ತುಗಳನ್ನು ಅವನೇ ನಿರ್ಮಿಸಿದನು."
— **ರಾಮದಾಸ.**

ಪರಮೇಶ್ವರನ ಇಚ್ಛೆಯ ಹೊರತು ಒಂದು ಎಲೆಯಾದರೂ ಅಲುಗಾಡುವುದಿಲ್ಲವೆಂದು ಒಪ್ಪಿಕೊಳ್ಳುವ ಜನರು ಮೇಲಿನ ವಿಚಾರಗಳಿಗೆ ತಲೆದೂಗುವರು; ಆದರೆ ಹಾಗೆ ತಿಳಿಯದ ಜನರು ಸಹ ಸೃಷ್ಟಿಯ ನಿಯಮಗಳಿಂದ ಎಲ್ಲರಿಗೂ ಹಿತವಾಗುತ್ತದೆಂಬ ಮಾತನ್ನು ಒಪ್ಪಿಕೊಳ್ಳುವುದಿಲ್ಲವೊ?

ನಮ್ಮ ಸಂಸಾರಯಾತ್ರೆಯು ಸುಖಕರವಾಗಬೇಕಾದರೆ ಬಂದ ಆಪತ್ತುಗಳನ್ನೆಲ್ಲ ಧೈರ್ಯದಿಂದ ಸಹಿಸಬೇಕು. ನಮ್ಮ ಮೇಲೆ ಬಂದ ಸಂಕಟಗಳಿಂದ ನಮಗೆ ಕಲ್ಯಾಣವಾಗುವುದೇ ಹೊರತು ಅಪಾಯವಾಗದು. 'ಹೆಮಹೋಲ್ಟ'ನೆಂಬ ಪ್ರಸಿದ್ಧ ಜರ್ಮನ್ ಶಾಸ್ತ್ರಜ್ಞನು ವಿದ್ಯಾರ್ಥಿಯಿದ್ದಾಗ ವಿಷಮಜ್ವರದಿಂದ ಪೀಡಿತನಾಗಲು, ಧರ್ಮಾರ್ಥ ಔಷಧಶಾಲೆಯಲ್ಲಿಟ್ಟು ಅವನಿಗೆ ಉಪಚಾರಮಾಡಿದರು. ಅವನು ಆ ಅವಧಿಯ ವಿದ್ಯಾರ್ಥಿವೇತನದ ಹಣವನ್ನು ಉಳಿಸಿ, ಆದರಿಂದ ಒಂದು ಸೂಕ್ಷ್ಮದರ್ಶಕಯಂತ್ರವನ್ನು ಕೊಂಡುಕೊಂಡನು. ಆ ಯಂತ್ರದಿಂದ ನಿರೀಕ್ಷಣೆ ಮಾಡುತ್ತಾ ಮಾಡುತ್ತಾ ಶಾಸ್ತ್ರಜ್ಞನಾಗಿ ಪ್ರಸಿದ್ಧಿಗೆ ಬಂದನು. ಮೊದಲು ಅನಿಷ್ಟವೆಂದು ತಿಳಿದ ವಿಷಮಜ್ವರದಿಂದ ಹೆಮಹೋಲ್ಟನಿಗೆ ಮುಂದೆ ಹೇಗೆ ಹಿತವಾಯಿತೆಂಬುದು ಈ ಉದಾಹರಣೆಯಿಂದ ವ್ಯಕ್ತವಾಗುತ್ತದೆ.

ಶಿವಾಜಿಯು ರಾಜಾ ಜಯಸಿಂಗನ ಅಪ್ಪಣೆಯ ಮೇರೆಗೆ ಔರಂಗಜೇಬನ ಭೇಟಿಗೆ ಹೋಗಲು ಆ ಬಾದಶಹನು ವಂಚಿಸಿ ಅವನನ್ನು ಸೆರೆಯಲ್ಲಿಟ್ಟನು. ಈ ಸಂಕಟದಿಂದ ಮಹಾರಾಷ್ಟ್ರಕ್ಕೆ ಅಪಾಯವೇನೂ ತಟ್ಟದೆ, ಲಾಭವೇ ಆಯಿತೆಂದು ಇತಿಹಾಸದಿಂದ ಗೊತ್ತಾಗುತ್ತದೆ. ಇದ-

ರಿಂದ ಮಹಾರಾಷ್ಟ್ರೀಯರಲ್ಲಿ ಧೈರ್ಯವೂ, ದೇಶಾಭಿಮಾನವೂ, ರಾಜ-ಭಕ್ತಿಯೂ ಹೆಚ್ಚಾಗಿ ಅವರ ರಾಜ್ಯವು ದೃಢವಾಗಿ ಬೇರೂರಿತು.

ಇನ್ನು ದುಃಖಗಳ ಮೂಲಕಾರಣಗಳ ಬಗ್ಗೆ ಬೇರೆ ಬೇರೆ ಜನಾಂಗ-ದವರು ಯಾವ ಯಾವ ಅಭಿಪ್ರಾಯವುಳ್ಳವರೆಂಬುದನ್ನು ನೋಡುವ. ಆಫ್ರಿಕಾ ಖಂಡದ ಕಾಡುಜನರು ಭೂತ-ಪಿಶಾಚಗಳಿಂದ ಅನಿಷ್ಟಗಳುಂಟಾ-ಗುತ್ತವೆಂದು ನಂಬುತ್ತಾರೆ; ದೇವದೇವತೆಗಳಲ್ಲಿ ದ್ವೇಷವೂ ಮತ್ಸರ-ಬುದ್ಧಿಯೂ ಇದ್ದುದರಿಂದ ಮನುಷ್ಯರಿಗೆ ಸಂಕಟಗಳು ಒದಗುತ್ತವೆಂದು ಗ್ರೀಕಜನರ ಅಭಿಪ್ರಾಯವಿದ್ದಿತು; ಉಳಿದ ಎಷ್ಟೋ ಜನರು ಸುಖದುಃಖ-ಗಳನ್ನು ಕೊಡುವ ಭಿನ್ನಭಿನ್ನವಾದ ದೇವತೆಗಳುಂಟೆಂದು ಅಭಿಪ್ರಾಯ-ಪಡುತ್ತಾರೆ. ಪ್ರಾಕ್ತನಕರ್ಮದಿಂದಲೇ ದುಃಖಗಳನ್ನು ಅನುಭವಿಸ-ಬೇಕಾಗುತ್ತದೆಂದು ಹಿಂದುಗಳಾದ ನಾವು ತಿಳಿಯುತ್ತೇವೆ.

“ **प्रायः प्राक्तनमेव कर्मबलवत् कः कस्य कर्तुं क्षमः ।** ”

ಮತ್ತು ಪುರಂದರದಾಸರು ಅನ್ನುವುದೇನೆಂದರೆ:—

“ಆರೇನು ಮಾಡುವರು? । ಆರಿಂದಲೇನಹುದು? ॥
ಪೂರ್ವಜನ್ಮದಕರ್ಮ । ವಿಧಿಬೆನ್ನಬಿಡದು ॥”

ಮನುಷ್ಯನಿಗಿದ್ದ ಕ್ರಿಯಾಸ್ವಾತಂತ್ರ್ಯವೇ ಅನಿಷ್ಟದ ಮೂಲವು. ನಮ್ಮ ಸುಖದುಃಖಗಳು ನಮ್ಮ ವರ್ತನವನ್ನೇ ಅವಲಂಬಿಸಿರುತ್ತವೆ.

“ **आत्मैव ह्यात्मनो बंधुरात्मैव रिपुरात्मनः** ” —भगवद्गीता.

ವಾಸ್ತವವಾಗಿ ನೋಡಲು ದೇವರು ಮನುಷ್ಯನನ್ನು ತನ್ನಂತೆ ಪೂರ್ಣಜ್ಞಾನಿಯನ್ನೂ ಸುಖಿಯನ್ನೂ ಮಾಡಿದ್ದರೆ, ಅವನು ಸೃಷ್ಟಿಯ ಕಾರ್ಯಕ್ಕೆ ವಿಘ್ನಗಳನ್ನುಂಟುಮಾಡಿ ಅದು ಸುಸೂತ್ರವಾಗಿ ಸಾಗದಂತೆ ಮಾಡುತ್ತಿದ್ದನು. ಆದಕಾರಣ ತನ್ನದೊಂದು ಅಂಶವನ್ನು ಮಾತ್ರ ದೇವರು ಮನುಷ್ಯನಲ್ಲಿ ಇಟ್ಟಿದ್ದಾನೆ.

“ಆತ್ಮವೇ ಈ ದೇವಾಂಶವು; ಅದರ ಸದುಪಯೋಗವನ್ನು ಮಾಡು-ವುದು ನಮ್ಮ ಕರ್ತವ್ಯವು. ಅದು ನಮ್ಮ ಸರ್ವಸ್ವವು. ನಮಗೆ ಲಭಿ-ಸಿದ ವಸ್ತುಗಳಲ್ಲಿ ಆತ್ಮದಷ್ಟು ಅಮೌಲ್ಯವಾದುದು ಯಾವುದೂ ಇಲ್ಲ.

ಆದುದರಿಂದ ನಾವು ಜಾಣರಾಗಿ ಅದರ ಸದುಪಯೋಗವನ್ನು ಮಾಡ-ತಕ್ಕದ್ದು." — **ಎಪಿಕ್ಟೈಟಸ್.**

ನಮ್ಮ ಸುಖದುಃಖಗಳಿಗೆ ನಾವೇ ಹೊಣೆಗಾರರು; ಮತ್ತು ದುಃಖವು ಅಪರಿಹಾರ್ಯವಾದುದು. ಆದುದರಿಂದ ದುಃಖಗಳು ಬಂದಾಗ ನಾವು ಜಾಣರಾಗಿ ವಿವೇಕದಿಂದಲೂ ಧೈರ್ಯದಿಂದಲೂ ಅವುಗಳನ್ನು ತಡೆದು-ಕೊಂಡು ಸಮಾಧಾನಹೊಂದಬೇಕು. ಇದಲ್ಲದೆ ಕಾಲಾವಧಿಯಿಂದ ದುಃಖಶಮನವು ತನ್ನಷ್ಟಕ್ಕೆ ತಾನೇ ಆಗುವುದು.

ಸಣ್ಣಸಣ್ಣ ಸಂಗತಿಗಳಿಂದ ಎಷ್ಟೋ ಜನರಿಗೆ ಉಪದ್ರವವಾಗುತ್ತದೆ; ಆದರೆ ಇಂತಹ ಸಣ್ಣ ಪುಟ್ಟ ತೊಂದರೆಗಳನ್ನು ಸುಲಭವಾಗಿಯೇ ಸಹಿಸಿ-ಕೊಳ್ಳಬಹುದು. ಗೃಹಕಲಹಗಳು ಇಲ್ಲದಂತಾದರೆ ನಮ್ಮ ಗೃಹಸುಖಕ್ಕೆ ಎಣೆಯೇ ಇಲ್ಲದಂತಾಗುವುದು. ಆದುದರಿಂದ ಸಿಡುಕು ಸ್ವಭಾವವನ್ನು ಬಿಟ್ಟು ನಾವು ಸಮಾಧಾನಗುಣವುಳ್ಳವರಾದರೆ ನಮಗೆ ಸಣ್ಣ ಪುಟ್ಟ ಸಂಗತಿಗಳಿಂದೆಂದೂ ಉಪದ್ರವವಾಗದು.

ದುಃಖಗಳು ಅಜ್ಞಾನದಿಂದಲೂ, ಅವಿಚಾರದಿಂದಲೂ ಉಂಟಾಗು-ತ್ತವೆ. ಒಮ್ಮೊಮ್ಮೆ ಕ್ಷಣಭಂಗುರವಾದ ಆಶೆಗೆ ಬಿದ್ದು ನಾವು ಇಡೀ ಆಯುಷ್ಯದ ಸುಖವನ್ನು ಕಳೆದುಕೊಳ್ಳುತ್ತೇವೆ.

ಭಾವಿಸಂಕಟಗಳ ಕಲ್ಪನೆಯನ್ನು ಮಾಡಿ ಎಷ್ಟೋ ಜನರು ದುಃಖಿ-ಗಳಾಗುವರು. ಅವುಗಳಲ್ಲಿ ಎಷ್ಟೋ ಸಂಕಟಗಳು ಎಂದೂ ಸಂಭವಿಸು-ವುದಿಲ್ಲ. ಆದರೆ ಅವು ಮುಂದೆ ಬರುವುವೆಂದು ತಿಳಿದು ಕೆಲವರು ಚಿಂತೆ-ಹಚ್ಚಿಕೊಳ್ಳುವರು. "ಚಿಂತೆಯೇ ಮುಪ್ಪು, ಸಂತೋಷವೇ ಯೌವನ" ಎಂಬ ನಾಣ್ಣುಡಿಯಾದರೂ ಇದೇ ಮಾತಿಗೆ ಬಲಕೊಡುತ್ತದೆ. ಒಂದು ಸಂಸ್ಕೃತ ಗ್ರಂಥದಲ್ಲಿ ಇದೇ ಮಾತು ವಿಶದವಾಗಿ ಹೇಳಿಯಿದೆ.—

**चिता दहति निर्जीवं । चिंता दहति जीविनं ॥**
**चिंतायाश्च चितायाश्च । बिंदुमात्र विशेषतः ॥**

"ಚಿಂತೆಗೂ ಚಿತೆಗೂ ನಡುವೆ ಒಂದು ಶೂನ್ಯ ಮಾತ್ರ ವಿಶೇಷವು. ಚಿತೆಯು ಜೀವವಿಲ್ಲದ ಶರೀರವನ್ನು ಸುಡುವುದು. ಆದರೆ ಚಿಂತೆಯು

ಜೀವವುಳ್ಳ ಮನುಷ್ಯನನ್ನು ದಹಿಸುವುದು." ಆದುದರಿಂದ ವ್ಯರ್ಥವಾಗಿ ಚಿಂತೆ ಹಚ್ಚಿಕೊಳ್ಳುವುದು ಸರಿಯಾದುದಲ್ಲವೆಂದು ಕಂಡುಬರುತ್ತದೆ.

ಇನ್ನು ಚಿಕ್ಕಮಕ್ಕಳ ಸುಖದ ವಿಷಯವಾಗಿ ವಿಚಾರಮಾಡುವ. ಬಾಲ್ಯಾವಸ್ಥೆಯು ಸುಖದ ಕಾಲವೆಂದು ವಾಡಿಕೆಯಾಗಿ ಅನ್ನುವುದುಂಟು. ಆದರೆ ಬಾಲಕರು ಕೋಮಲ ಹೃದಯವುಳ್ಳವರಾಗಿರುವುದರಿಂದ ಆಡಿದ ಮಾತುಗಳನ್ನು ಮನಸ್ಸಿಗೆ ಹಚ್ಚಿಕೊಂಡು ಅಳುವರು. ಕುದುರೆಗಳಿಗೆ ಸಿಟ್ಟುಮಾಡಿದರೆ ಅವುಗಳ ನಾಡಿಯು ೧ ಮಿನಿಟಗೆ ೧೦ ಪಟ್ಟು ಹೆಚ್ಚು ಹಾರುತ್ತದೆಂದು ಇಂಗ್ಲಂಡದ ಪ್ರಸಿದ್ಧ ಅಶ್ವವಿಜ್ಞಾನಕೋವಿದನಾದ 'ರೇರಿ' ಎಂಬವನು ಹೇಳುತ್ತಾನೆ. ಕುದುರೆಯ ಅವಸ್ಥೆಯೇ ಹೀಗಾದ ಮೇಲೆ ಬಾಲಕರಿಗೆ ಸಿಟ್ಟುಮಾಡಿದರೆ ಅವರಿಗೆ ಏನಾಗುವುದೆಂಬುದನ್ನು ವಾಚಕರೇ ಊಹಿಸಬಹುದು.

ಬಾಲಕರು ಅಜ್ಞಾನಿಗಳಾದುದರಿಂದ ವ್ಯರ್ಥವಾಗಿ ದುಃಖಪಡುವರು; ಆದರೆ ದೊಡ್ಡವರು ಸಹ ಒಮ್ಮೊಮ್ಮೆ ಹೀಗೆಯೇ ದುಃಖಪಡುತ್ತಾರೆ. ಬಂದ ಸಂಕಟಗಳೊಳಗಿಂದ ಪಾರಾಗಬೇಕಾದರೆ ಧೈರ್ಯವು ಬೇಕು. "ಮೈ ತೊಯ್ಯುವ ವರೆಗೆ ಮಳೆಯ ಅಂಜಿಕೆ"ಯೆಂಬಂತೆ ಸಂಕಟಗಳು ನಮ್ಮ ಮೇಲೆ ಬರುವ ವರೆಗೆ ಅವುಗಳ ಅಂಜಿಕೆಯು; ಬಂದಮೇಲೆ ಧೈರ್ಯವೇ ಆಶ್ರಯವು.

ಮುಂದೆ ಸಂಕಟಗಳು ಬರುವುವೆಂದು ತಿಳಿದು ಅವುಗಳೊಳಗಿಂದ ಪಾರಾಗುವ ಹಂಚಿಕೆಗಳನ್ನು ಹುಡುಕುವಾಗ ಒಮ್ಮೊಮ್ಮೆ ನಾವಾಗಿಯೇ ಸಂಕಟದೊಳಗೆ ಬೀಳುತ್ತೇವೆ; "ಯಾವನು ಸ್ವಲ್ಪಕ್ಕೆ ತೃಪ್ತಿಹೊಂದುವುದಿಲ್ಲವೋ ಅವನಿಗೆ ಎಷ್ಟರಿಂದಲೂ ತೃಪ್ತಿಯಾಗದು."

— **ಎಪಿಕ್ಟಿಟಸ್**.

"ಯಾವ ವಸ್ತುವು ನಮಗೆ ಉಪಯುಕ್ತವಾದುದಲ್ಲವೋ ಅದು ನಮಗೆ ಬೇಡ."

— **ಸೆನೆಕಾ**.

ಆದರೂ ಎಷ್ಟೋ ಜನರು ಅಂತಹ ನಿರುಪಯುಕ್ತವಾದ ವಸ್ತುಗಳ ಹಂಬಲ ಬಿಡರು.

ಸಂಕಟಗಳು ಬಂದಾಗ ಎದೆಗುಂದದೆ ಅವುಗಳನ್ನು ಧೈರ್ಯದಿಂದ ಪರಿಹರಿಸಿಕೊಳ್ಳುವುದೇ ಸುಜ್ಞರ ಲಕ್ಷಣವು. ನಿಷ್ಕಾರಣವಾದ ದುಃಖದಿಂದಲೂ, ಸಿಟ್ಟಿನಿಂದಲೂ ನಮಗೆ ಅಪಾಯವಾಗಬಹುದು. ಎರಡನೆಯವರು ನಮ್ಮ ದೋಷಗಳನ್ನು ಪ್ರಕಟಮಾಡಿದರೆ ಅವರ ಮೇಲೆ ಸಿಟ್ಟಿಗೇಳದೆ ನಮ್ಮ ತಪ್ಪುಗಳನ್ನು ತಿದ್ದಿಕೊಳ್ಳಲಿಕ್ಕೆ ನಾವು ಮನಮುಟ್ಟಿ ಯತ್ನಿಸಬೇಕು. ಸುಮ್ಮನೆ ಸಿಟ್ಟಿಗೇಳುವುದು ಸರಿಯಾದುದಲ್ಲ.

"क्रोध एष महान्शत्रुस्तृष्णा वैतरणी नदी ॥
संतोषो नंदनवनं शांतिरेव हि कामधुक् ॥" —अध्यात्मरामायणम्.

"ಸಿಟ್ಟು ದೊಡ್ಡ ಶತ್ರುವು; ಆಶೆಯು ನರಕದ ಹಾದಿಯಲ್ಲಿರುವ ವೈತರಣೀ ನದಿಯು; ಸಂತೋಷವೇ ನಂದನವನವು; ಶಾಂತಿಯೇ ಕಾಮಧೇನುವು."

ಸಂಕಟಗಳು ಬಂದಾಗ ದುಃಖಪಡುವುದರಿಂದ ನಮಗೆ ಬಹಳ ಹಾನಿಯುಂಟಾಗುವುದು. ಎಪಿಕ್ಟಿಟಸನೆಂಬ ಗ್ರೀಕ ತತ್ತ್ವಜ್ಞನು ಅಂದದ್ದೇನೆಂದರೆ:— "ಮನುಷ್ಯನಿಗೆ ಮರಣವು ಎಂದೂ ತಪ್ಪದು. ಹೀಗಿದ್ದ ಮೇಲೆ ನಮಗೆ ಮರಣಬಂದರೆ ನಾವು ಯಾಕೆ ದುಃಖಿಗಳಾಗಬೇಕು? ನನ್ನ ಕಾಲುಗಳಿಗೆ ಸಂಕೋಲೆಗಳನ್ನು ಹಾಕಿದರೂ, ನನಗೆ ದೇಶತ್ಯಾಗಮಾಡುವ ಪ್ರಸಂಗ ಬಂದರೂ, ನಾನು ಆನಂದದಿಂದಲೂ ಸಂತೋಷದಿಂದಲೂ ಅವುಗಳಿಗೆ ಒಳಗಾಗುವೆನು. ನನ್ನನ್ನು ಯಾರಾದರೂ ಸೆರೆಯಲ್ಲಿಡಹೋದರೆ ನೀವು ನನ್ನ ದೇಹವನ್ನು ಮಾತ್ರ ಸೆರೆಯಲ್ಲಿಡಬಹುದು; ಆದರೆ ನನ್ನ ಮನಸ್ಸಿಗೆ ಆಗುವ ಆನಂದವನ್ನು ನಿಮ್ಮಿಂದಾಗಲಿ ನಿಮ್ಮ ಪಿತಾಮಹರಿಂದಾಗಲಿ ನಾಶಪಡಿಸುವುದಾಗದು; ದೇವರು ಸಹ ಹಾಗೆ ಮಾಡಲು ಅಸಮರ್ಥನು ಎಂದು ಹೇಳುವೆನು."

ನಾವು ನಮ್ಮ ತಪ್ಪಿನಿಂದಲೇ ನಮ್ಮ ಸುಖವನ್ನು ಕಳೆದುಕೊಳ್ಳುತ್ತೇವೆ. ಸಾಕ್ರೇಟಸನೆಂಬ ತತ್ವಜ್ಞನು ಗ್ರೀಸದೇಶದಲ್ಲಿ ೩೦ ಮಂದಿ ಅನಿಯಂತ್ರಿತ ರಾಜರ ಆಳಿಕೆಯಲ್ಲಿದ್ದಾಗಲೂ ಅವನು ಶಾಂತನೂ, ಸಂತುಷ್ಟನೂ ಆಗಿದ್ದನೆಂಬುದು ಇತಿಹಾಸದಿಂದ ತಿಳಿಯುತ್ತದೆ. ನೋಡಿರಿ! 'ಎಪಿಕ್ಟಿಟಸ್'

ನೆಂಬ ತತ್ವಜ್ಞನು ಗುಲಾಮನಿದ್ದಾಗಲೂ ಅವನು ಬರೆದ ಗ್ರಂಥಗಳು ಯುರೋಪದ ಎಲ್ಲ ರಾಷ್ಟ್ರಗಳಲ್ಲಿ ಮಾನ್ಯವಾಗಿವೆ. ಈ ಕೆಳಗಿನ ಸಂಸ್ಕೃತ ಶ್ಲೋಕದಲ್ಲಿ ವರ್ಣಿಸಿದ ಯೋಗಿಯಂತೆ ಅವನ ವರ್ತನವಿದ್ದು-ದರಿಂದಲೇ ಅವನು ಸದಾಸಂತುಷ್ಟನಾಗಿದ್ದನು.

"धैर्यं यस्य पिता क्षमा च जननी शांतिश्चिरं गेहिनी ।
सत्यं सूनुरयं दया च भगिनी भ्राता मनस्संयमः ।
शय्या भूमितलं दिशोऽपि वसनं ज्ञानामृतं भोजनं ।
एते यस्य कुटुंबिनो वद सखे कस्माद्भयं योगिनः ॥"

"ಧೈರ್ಯವೇ ತಂದೆಯು; ಕ್ಷಮಾಗುಣವೇ ತಾಯಿಯು; ಶಾಂತಿಯೇ ಹೆಂಡತಿಯು; ಸತ್ಯವೇ ಮಗನು; ದಯೆಯೇ ತಂಗಿಯು; ಮನೋನಿಗ್ರ-ಹವೇ ತಮ್ಮನು; ನೆಲವೇ ಹಾಸಿಗೆಯು; ದಿಕ್ಕುಗಳೇ ಹೊದಿಕೆಯು; ಜ್ಞಾನಾಮೃತವೇ ಭೋಜನವು; ಇಂಥ ಆಪ್ತೇಷ್ಟರುಳ್ಳ ಯೋಗಿಗೆ ಏತರಿಂದ ಭಯವು?"

ಇಂಥ ಅನುಪಮಯೋಗಿಯ ದರ್ಶನದಿಂದ ಆನಂದದ ಮಳೆಯು ಕರೆದಂತಾಗುವುದೆಂಬುದರಲ್ಲಿ ಏನಾಶ್ಚರ್ಯವು?

ಪ್ರತಿದಿನವೂ ದೇವರು ನಮ್ಮ ಮೇಲೆ ಅಗಣಿತವಾದ ಉಪಕಾರ-ಗಳನ್ನು ಮಾಡುತ್ತಾನೆ. ಆದರೆ, ಅವುಗಳನ್ನು ಲಕ್ಷಕ್ಕೆ ತಾರದೆ ಅವು ಅತ್ಯಲ್ಪವೆಂದು ತಿಳಿದು ಅವುಗಳನ್ನುಂಟುಮಾಡಿದ ಪರಮಾತ್ಮನನ್ನು ಭಕ್ತಿ-ಪುರಸ್ಸರವಾಗಿ ಭಜಿಸದೆ ಇದ್ದ ಜನರನ್ನು ಯಾವ ಕೋಟಿಯಲ್ಲಿ ಎಣಿಸ-ಬೇಕೆಂಬುದು ತಿಳಿಯದು. "ಹನಿಹನಿ ಕೂಡಿದರೆ ಹಳ್ಳ"ವೆಂಬ ನಾಣ್ಣುಡಿ-ಯಂತೆ ಅಲ್ಪವಸ್ತುಗಳು ಒಟ್ಟುಗೂಡಿ ಮಹತ್ತರವಾದ ಪರಿಣಾಮವನ್ನುಂ-ಟುಮಾಡುತ್ತವೆ. ಮತ್ತು ಆ ಮಹತ್ತರವಾದ ಪರಿಣಾಮವು ಅಲ್ಪವಲ್ಲೆಂ-ಬುದು ಎಲ್ಲರಿಗೂ ಗೊತ್ತುಂಟು ಎಂದು 'ಮಿಕಾಯಿಲ್ ಎಂಜೆಲೊ' ಎಂಬ ಇತಲೀ ದೇಶದ ಪ್ರಸಿದ್ಧ ಚಿತ್ರಕಾರನು ಅನ್ನುತ್ತಿದ್ದನು. ಪ್ರತಿದಿವಸ ನಮಗೆ ಸಿಗುತ್ತಿರುವ ವಸ್ತುಗಳ ಬಗ್ಗೆ ನಮಗೆ ಆದರವಾಗಲಿ ಪ್ರೀತಿಯಾ-ಗಲಿ ಹುಟ್ಟದಿರುವುದು ಸ್ವಾಭಾವಿಕವು. ಆದರೂ ದೇವರು ದಿನಾಲು

ನನುಗೆ ದಯಪಾಲಿಸುತ್ತಿರುವ ಅಸಂಖ್ಯ ಇಷ್ಟ ವಸ್ತುಗಳ ಬಗ್ಗೆ ನಾವು ಆತನನ್ನು ಎಷ್ಟು ಭಜಿಸಿದರೂ ಕಡಿಮೆಯೆಂಬುದನ್ನು ಮರೆಯಲಾಗದು.

"ಹುಟ್ಟುಗುರುಡನಿಗೆ ಒಮ್ಮೆಲೆ ದೃಷ್ಟಿಯುಂಟಾಗಿ ಸೃಷ್ಟಿಸೌಂದರ್ಯದ ಸ್ವರೂಪವು ಕಾಣಹತ್ತಿದರೆ ಅವನಿಗೆ ಎಷ್ಟು ಆನಂದವಾಗುವುದೆಂಬುದನ್ನು ಏನು ಹೇಳುವುದು? ಆದರೆ ಅಂತಹ ಸೃಷ್ಟಿಸೌಂದರ್ಯವು ನಮ್ಮೆಲ್ಲರ ದೃಷ್ಟಿಗೆ ಅನಾಯಾಸವಾಗಿ ಪ್ರತಿದಿವಸವೂ ಬೀಳುವುದರಿಂದ ದೇವರ ಉಪಕಾರವನ್ನು ನಾವು ಎಷ್ಟು ಸ್ಮರಿಸಿದರೂ ಸಾಲದೆಂಬ ಮಾತು ನಿರ್ವಿವಾದವಾಗಿ ಸಿದ್ಧವಾಗುತ್ತದೆ." — **ವಾಲ್ಟನ್.**

"ಮನುಷ್ಯರ ಸುಖಸಮಾಧಾನಕ್ಕೆ ಇಚ್ಛೆಗಳ ಅಭಾವವು ಕಾರಣವಾದಂತೆ ದ್ರವ್ಯಭಾಂಡಾರವಾಗಲಿ ಸಾರ್ವಭೌಮಾಧಿಕಾರವಾಗಲಿ ಕಾರಣವಲ್ಲ. ಆದುದರಿಂದ ಇಚ್ಛೆಗಳನ್ನು ತೊರೆದವನೇ ಸುಖಿಯು. ಸದಾತೃಪ್ತನೇ ಸದಾಸಂತುಷ್ಟನು." — **ಎಪಿಕ್ಯೂರಸ್.**

ಈ ಸೃಷ್ಟಿಯಲ್ಲಿ ಮನುಷ್ಯನ ಸುಖಕ್ಕೆ ಬೇಕಾಗುವ ವಸ್ತುಗಳೆಲ್ಲವನ್ನೂ ದೇವರು ನಿರ್ಮಿಸಿದ್ದಾನೆ. ಬೆಳೆಯುವ ಪೈರನ್ನೂ ಅರಳುವ ಹೂಗಳನ್ನೂ ನೋಡುವುದರಿಂದ ಕಣ್ಣುಗಳಿಗೆ ಆನಂದವಾಗುವುದು; ಶಾರೀರಿಕ ಶ್ರಮಮಾಡುವುದರಿಂದ ರುಧಿರಾಭಿಸರಣವು ಬೆಳೆದು ಮನಸ್ಸಿಗೆ ಉಲ್ಲಾಸವುಂಟಾಗುವುದು; ಅವಯವಗಳು ಬಲಪಡುವುವು; ವಾಚನದಿಂದ ಮನೋರಂಜನವಾಗುವುದು. ಹಾಗೆಯೇ ಪ್ರೀತಿಯಿಂದಲೂ, ಮನನ ನಿದಿಧ್ಯಾಸಗಳಿಂದಲೂ ಆನಂದವಾಗುವುದು. ಹೀಗೆ ಮನುಷ್ಯಪ್ರಾಣಿಗಳಿಗೆ ಹಲವು ಬಗೆಯಿಂದ ಸುಖವಾಗುತ್ತದೆ.

"ಕಳ್ಳರು ನನ್ನಲ್ಲಿದ್ದ ದ್ರವ್ಯವನ್ನೆಲ್ಲ ಕದ್ದೊಯ್ದರೂ ನನಗೆ ದುಃಖವಾಗಲಿಲ್ಲ; ಯಾಕೆಂದರೆ, ಅವರು ನನ್ನ ಸಂತೋಷವೃತ್ತಿಯನ್ನೂ ನಿರ್ಮಲಾತಃಕರಣವನ್ನೂ ಕದ್ದೊಯ್ಯಲಿಲ್ಲ. ಸುಖವು ನಿರ್ಮಲಾಂತಃಕರಣದಿಂದಲೂ, ಶಾಂತವೃತ್ತಿಯಿಂದಲೂ ಉಂಟಾಗುತ್ತದೆಂಬುದು ಗೊತ್ತಿದ್ದರೂ ಬಹು ಜನರು ದುಃಖಿಗಳಾಗುತ್ತಾರೆಂಬುದನ್ನು ನೋಡಿದರೆ ಆತ್ಯಾಶ್ಚರ್ಯವಾಗುತ್ತದೆ." — **ಜೆರೆಮಿ ಟೇಲರ್.**

"ಸೂರ್ಯ ಚಂದ್ರ ನಕ್ಷತ್ರಗಳೂ ಸಮುದ್ರಗಳೂ ಸುತ್ತಲು ಇರುವ ತನಕ ಮನುಷ್ಯನು ಒಬ್ಬೊಂಟಿಗನೆಂದು ತಿಳಿಯುವುದು ತಪ್ಪು."

— **ಎಪಿಕ್ಟಿಟಸ್.**

"ಸ್ವರ್ಗಸುಖವೇ ಜಗತ್ತಿನಲ್ಲಿ ಸಿಕ್ಕಮೇಲೆ ದೇವರಿಂದಾದರೂ ಹೆಚ್ಚು ಏನ ಬೇಡುವುದಿದೆ? ಯಾಕೆಂದರೆ:—ಪ್ರಥ್ವಿಯ ಮೇಲೆ ಎಲ್ಲ ತರದ ಸೃಷ್ಟಿಸೌಂದರ್ಯವನ್ನು ಕಾಣಬಹುದು. ಎಲ್ಲ ಇಂದ್ರಿಯಗಳನ್ನು ಆನಂದದಲ್ಲಿ ಮುಳುಗಿಸಿಬಿಡುವಂಥ ವಸ್ತುಗಳು ಅನೇಕವಾಗಿವೆ. ನಾನಾತರದ ರುಚಿಕರವಾದ ಪದಾರ್ಥಗಳು, ಅತಿಸುಂದರವಾದ ರೂಪಗಳು, ಸುವಾಸನೆಯುಳ್ಳ ಪುಷ್ಪಗಳು, ಹೊಳೆಯುವ ಬಣ್ಣಗಳು, ಶ್ರುತಿಮನೋಹರವಾದ ಗಾನಗಳು, ತೇಜಃಪುಂಜವಾದ ಸೂರ್ಯನ ಪ್ರಕಾಶವು, ಆಹ್ಲಾದಕರವಾದ ಬೆಳದಿಂಗಳು, ನಿರ್ಮಲವಾದ ಸರೋವರಗಳು, ಗಗನಚುಂಬಿಗಳಾದ ಪರ್ವತಗಳು, ನಿಬಿಡವಾದ ಅರಣ್ಯಗಳು, ಅಗಾಧವಾದ ಮಹಾಸಾಗರಗಳು, ಮೇಘದಿಂದಲೂ ಹಿಮದಿಂದಲೂ ಆಚ್ಛಾದಿತವಾದ ಶಿಖರಗಳು ಇವೇ ಮೊದಲಾದ ಹರ್ಷಜನಕ-ಸುಂದರವಸ್ತುಗಳು ಇಹಲೋಕದಲ್ಲಿ ದೇವರಿಂದ ಹೇರಳವಾಗಿ ನಿರ್ಮಿತವಾಗಿವೆ. ಇವುಗಳಿಗಿಂತ ಹೆಚ್ಚು ಸುಂದರವಾದ ವಸ್ತುಗಳು ವಿಶ್ವದಲ್ಲಿ ಮತ್ತೆಲ್ಲಿಯಾದರೂ ಇರಬಹುದೆಂಬ ವಿಚಾರವು ಸಹ ನಮ್ಮ ಕಲ್ಪನೆಯೊಳಗೆ ಬರುವುದಿಲ್ಲ. ಈ ಎಲ್ಲ ವಸ್ತುಗಳು ಮಾನವ ಪ್ರಾಣಿಗಳ ಉಪಭೋಗಕ್ಕಾಗಿಯೇ ನಿರ್ಮಿತವಾಗಿವೆ. ಈ ಪ್ರಕಾರ ನಮ್ಮ ಇಂದ್ರಿಯಸುಖದ ಯೋಜನೆಯಾಗಿದೆಯೆಂಬುದರಲ್ಲಿ ಏನೂ ಸಂದೇಹವಿಲ್ಲ. ದೇವರು ಇಂದ್ರಿಯಸುಖದ ಯೋಜನೆಯನ್ನು ಮಾಡಿದಂತೆ ಮಾನಸಿಕಸುಖದ ವಿಷಯವಾಗಿಯೂ ಯೋಗ್ಯ ವ್ಯವಸ್ಥೆಯನ್ನು ಮಾಡಿದ್ದಾನೆಂಬ ಮಾತನ್ನು ಕಲ್ಪನಾಸೃಷ್ಟಿಯಲ್ಲಾಗಲಿ, ವಿಚಾರಸೃಷ್ಟಿಯಲ್ಲಾಗಲಿ ಭ್ರಮಣಮಾಡಿ, ಅನೇಕ ಗೂಢವಾದ ತತ್ವಗಳ ಜ್ಞಾನವನ್ನು ಮಾಡಿಕೊಂಡು, ಅದರಿಂದ ನಿತ್ಯಾನಂದವನ್ನು ಹೊಂದುವ ಮನುಷ್ಯನು ಒಪ್ಪಿಕೊಳ್ಳುವನು. ಪ್ರೇಮದ ರಹಸ್ಯವನ್ನು ಬಲ್ಲಂಥ ಜನರು ಈ ಅತರ್ಕ್ಯವಾದ ಸುಖದ ಪ್ರಾಪ್ತಿಯ ಬಗ್ಗೆ ದೇವರನ್ನು ಎಷ್ಟು

ಕೊಂಡಾಡಿರಲಿಕ್ಕಿಲ್ಲ? ಈಗಿದ್ದ ಸೃಷ್ಟಿಯು ಲಯಹೊಂದಿದ ಮೇಲೆ ಹೊಸ-ದೊಂದು ಸೃಷ್ಟಿಯನ್ನು ದೇವರು ನಿರ್ಮಿಸಹೋದರೆ ನಮಗೆ ಈಗ ಉಪ-ಲಬ್ಧವಾದ ಸುಖಸಾಧನಗಳಿಗಿಂತ ಹೆಚ್ಚು ಅನುಕೂಲತೆಗಳನ್ನು ಮಾಡಿ-ಕೊಡುವುದು ಅಸಾಧ್ಯವೆಂದೆನಿಸುವುದು. ಅಂದಬಳಿಕ ಈಗಿದ್ದ ಸುಖ-ಸಾಧನಗಳೂ ಅನುಕೂಲತೆಗಳೂ ಪೂರ್ಣವಾಗಿವೆಯೆಂಬುದಕ್ಕೆ ಏನಾ-ದರೂ ಸಂದೇಹವುಂಟೋ?

# ೨ನೆಯ ಅಧ್ಯಾಯ.

## ಕರ್ತವ್ಯಸುಖ.

ತನ್ನ ತನ್ನ ಸುಕರ್ಮದಲಿ ಸಂ । ಪನ್ನ ವಿಷಯುವನುಳ್ಳ ಮಾನವ ।
ಸುನ್ನತೋನ್ನತ ಸತ್ವಶುದ್ಧಿಯ ಪಡೆಯುತಿಹನವನು ॥ —ನಾಗರಸ.

"स्वे स्वे कर्मण्यभिरतः संसिद्धिं लभते नरः ।" —भगवद्गीता.

(ಕರ್ತವ್ಯವನ್ನು ಮಾಡುವುದರಿಂದ ಪ್ರತಿಯೊಬ್ಬನಿಗೆ ಸಿದ್ಧಿಯಾಗುವುದು.)

"कर्मण्येवाधिकारस्ते मा फलेषु कदाचन ।
मा कर्मफलहेतुर्भूर्मा ते संगोऽस्त्वकर्मणि ॥" —भगवद्गीता.

ಕರ್ಮದಲ್ಲಧಿಕಾರಿ ನೀ ಸ । ತ್ಕರ್ಮವನು ಮಾಡುವುದು ಬಳಿಕಾ- ।
ಕರ್ಮನಿರ್ಮಿತದಿಂದ ಹೆಚ್ಚುತಲಿಹ ಫಲಂಗಳನು ॥
ನೆಮ್ಮದಿರು ಜನ್ಮವನು ಕೊಡುವ ವಿ । ಕರ್ಮಕಾರಣನಾಗದಿರು ಸ- ।
ತ್ಕರ್ಮದಲಿ ಸಂನ್ಯಾಸವನು ಮಾಡದಿರು ನೀನೆಂದ ॥ —ನಾಗರಸ.

ಕರ್ತವ್ಯ ಮಾಡುವುದೇ ನಿನ್ನ ಧರ್ಮವು. ಅದರಿಂದ ಉಂಟಾಗುವ ಲಾಭಹಾನಿಗಳ ಕಡೆಗೆ ಲಕ್ಷವಿಟ್ಟು ಕೆಲಸ ಮಾಡುವುದು ನಿನ್ನ ಧರ್ಮವಲ್ಲ. ಸರ್ವಥಾ ಫಲದ ಆಶೆಯಿಂದ ಕೆಲಸಮಾಡಬೇಡ. ಕರ್ತವ್ಯವನ್ನು ಮಾಡದೆ ಎಂದೂ ಬಿಡಬೇಡ.

ಕರ್ತವ್ಯವು ನಮ್ಮನ್ನು ನಿರ್ಬಂಧಿಸಿ ಕೆಲಸ ಮಾಡಿಸಿಕೊಳ್ಳುವ ಅತಿ-ಕ್ರೂರನಾದ ಯಜಮಾನನೆಂದು ನುಡಿಯಕೂಡದು. ಇಷ್ಟೇ ಅಲ್ಲ, ಮನಸ್ಸಿನಲ್ಲಿ ಸಹ ಹಾಗೆ ಎಣಿಸಕೂಡದು. ಅದು ನಮ್ಮನ್ನು ವಿಪತ್ತಿನಿಂದಲೂ ಸಂಕಟಗಳಿಂದಲೂ ಪಾರುಮಾಡಿ ಜೋಕೆಮಾಡುವ ಮಮತೆಯ ಮಾತೆ-ಯೆಂದೇ ತಿಳಿಯತಕ್ಕದ್ದು.

ಒಬ್ಬೊಂಟಿಗನಾಗಿರುವುದು ಅತಿ ಸ್ವಾರ್ಥಪರವಾದುದೂ ಔದಾಸೀನ್ಯ-ಜನಕವಾದುದೂ ಇರುತ್ತದೆ. ಪರರಿಗೆ ಕೈಯಿಂದಾದಷ್ಟು ಉಪಕಾರ-

ಮಾಡುವುದು ಪ್ರತಿಯೊಬ್ಬನ ಕರ್ತವ್ಯವು. ಮತ್ತು ಹಾಗೆ ಮಾಡುವುದ-ರಿಂದ ನಮ್ಮ ವ್ಯಸನ ಚಿಂತೆಗಳೆಲ್ಲವೂ ನಾಶವಾಗಿ ನಮಗೆ ನಿಜವಾದ ಸುಖವು ಪ್ರಾಪ್ತವಾಗುವುದು.

ಇದುವರೆಗೆ ಜಗತ್ತಿನಲ್ಲಿ ಎಷ್ಟೋ ಮಹಾಪುರುಷರು ಬೇರೆ ಬೇರೆ ವಸ್ತುಗಳಲ್ಲಿ ಸುಖವುಂಟೆಂದು ಭಾವಿಸಿ ಅವುಗಳ ಬೆನ್ನು ಹತ್ತಿದರು. ಆದರೆ ಅವುಗಳಿಂದ ಸುಖವು ಸಿಗುವದಂತೂ ಒತ್ತಟ್ಟಗಿರಲಿ. ಅವರು ಜಗತ್ತಿನಲ್ಲಿ ಅಪಕೀರ್ತಿಯನ್ನು ಹೊಂದಿ ತಮ್ಮ ಸಂಸಾರಯಾತ್ರೆಯನ್ನು ಮುಗಿಸಿದರು. ನಹುಷನೆಂಬ ರಾಜನು ಇಂದ್ರಪದವಿಯನ್ನಪೇಕ್ಷಿಸಿ ಅಶ್ವಮೇಧಯಜ್ಞ-ಗಳನ್ನು ಮಾಡಿ ಆ ಪದವಿಯನ್ನು ಸಂಪಾದಿಸಿದರೂ ಸ್ವಲ್ಪ ಕಾಲದಲ್ಲಿಯೇ ಇಂದ್ರಿಯಸುಖಕ್ಕೆ ಮೆಚ್ಚಿ ಹಾಳಾದನೆಂದು ಪುರಾಣಗಳಲ್ಲಿ ಹೇಳಲ್ಪಟ್ಟದೆ. ರಣಕಂಠೀರವರೆಂದು ಹೆಸರಾದ ಜ್ಯೂಲಿಯಸ್ ಸೀಝರನೂ ನೆಪೋಲಿ-ಯನ್ ಬೋನಾಪಾರ್ಟನೂ ರಾಜ್ಯವಿಸ್ತಾರದಲ್ಲಿಯೇ ಸುಖವಿದೆಯೆಂದು ಭಾವಿಸಿ ತಮ್ಮ ರಾಜ್ಯವನ್ನು ಮಿತಿಮೀರಿ ಬೆಳೆಸಲೆಳಸಿ ಕಟ್ಟಕಡೆಗೆ ದುಃಖ-ವನ್ನು ಹೊಂದಿ ಮೃತಪಟ್ಟರೆಂದು ಇತಿಹಾಸಗಳಲ್ಲಿ ಓದುತ್ತೇವೆ. ವೈಭವ-ದಿಂದಲೂ ಸಂಪತ್ತಿನಿಂದಲೂ ಸಹ ಇದೇ ಹಾಡಾಗುವುದು. ಆದರೆ ಪ್ರತಿಯೊಂದು ವಸ್ತುವಿನ ಸದುಪಯೋಗವನ್ನು ಮಾಡುವುದರಿಂದ ಸುಖ-ವಾಗುತ್ತದೆಂಬ ಮಾತನ್ನು ಅಲ್ಲಗಳೆಯಲಾಗದು.

ಹಾಗಾದರೆ ಜಗತ್ತಿನಲ್ಲಿ ಸುಖವಾಗುವ ಬಗೆ ಹೇಗೆ? ಸದಸದ್ವಿವೇಕ-ದಿಂದ ನಡೆದು ಜ್ಞಾನವನ್ನು ಸಂಪಾದಿಸುವುದೇ ಸುಖಪ್ರಾಪ್ತಿಯ ಮುಖ್ಯೋ-ಪಾಯವು. ಅದು ಸುಖಕ್ಕೆ ಸಂಜೀವನೀ ಕಡ್ಡಿಯಂತೆಯೂ ದುಃಖಕ್ಕೆ ರಾಮಬಾಣದಂಥ ಅಮೋಘ ಔಷಧದಂತೆಯೂ ಇರುವುದು.

ಇದಲ್ಲದೆ ಸದ್ವರ್ತನದ ನಿಯಮಗಳನ್ನು ಬಿಡದೆ ಪಾಲಿಸುವುದು ಸಹ ಅವಶ್ಯವು. ನಾವು ಮಾಡುವ ಕೆಲಸಗಳನ್ನು ಒಣಹೆಮ್ಮೆಯಿಂದಾಗಲಿ ಡಾಂಭಿಕತನದಿಂದಾಗಲಿ ಮಾಡಬಾರದು. ಮತ್ತು "ಬಂದದ್ದೆಲ್ಲ ಬರಲಿ ಮುಕುಂದನ ದಯೆಯೊಂದಿರಲಿ" ಎಂಬ ಪುರಂದರದಾಸರ ಉಕ್ತಿಯನ್ನನು-ಸರಿಸಿ ದೇವರ ಮೇಲೆ ಭಾರವನ್ನಿಟ್ಟು ನಮ್ಮ ಕರ್ತವ್ಯವನ್ನು ಫಲಾಪೇಕ್ಷೆ-

ಯಿಲ್ಲದೆ ಮನಮುಟ್ಟಿಮಾಡಿದರೆ ಸುಖಪ್ರಾಪ್ತಿಯಾಗುವುದು. "ಶರೀರ-ದೊಳಗಿನ ಪಂಚ ಮಹಾಭೂತಗಳು ಬೇರೆ ಬೇರೆಯಾಗುವುದೇ ಮರಣ-ವೆಂದು ತಿಳಿದು ಅದಕ್ಕೆ ಸ್ವಲ್ಪವೂ ಅಂಜದೆ ಆನಂದದಿಂದ ಮೃತ್ಯುವಿನ ಹಾದಿಯ ನೋಡುತ್ತಿರಬೇಕು."

—**ಮಾರ್ಕಸ್ ಅರೇಲಿಯಸ್.**

ಇದಕ್ಕೆ ವಿರುದ್ಧವಾಗಿ ಬೇಕನ್ನನು ಅನ್ನುವುದೇನಂದರೆ:—"ಮನು-ಷ್ಯನು ಮರಣಕ್ಕೆ ಅಂಜುವಷ್ಟು ದುರ್ಬಲಮನಸ್ಸಿನವನಲ್ಲ. ಸೇಡು ತೀರಿಸಿ-ಕೊಳ್ಳಬೇಕಾದರೆ ಅವನು ಮರಣವನ್ನು ಸಹ ಲೆಕ್ಕಿಸುವುದಿಲ್ಲ. ಶೂರರು ರಣಾಂಗಣದಲ್ಲಿ ಕಾದಿ ವೀರಸ್ವರ್ಗವನ್ನೈದಲಿಕ್ಕೆ ಹಾತೊರೆಯುತ್ತಿರುತ್ತಾರೆ. ಅತಿ ದುಃಖಿಗಳು ಮರಣವೇ ಲೇಸೆಂದು ಎಣಿಸುತ್ತಾರೆ."

ಪರೋಪಕಾರದ ದೆಸೆಯಿಂದ ನಮ್ಮ ದೇಹವನ್ನು ಸವೆಯಿಸಿ, ಪೃಥ್ವಿಯ ಮೇಲೆ ಶಾಂತತೆಯನ್ನೂ ಮನುಷ್ಯರಲ್ಲಿ ಪ್ರೇಮಭಾವವನ್ನೂ ಉಂಟು-ಮಾಡಲಿಕ್ಕೆ ಮನಃಪೂರ್ವಕವಾಗಿ ಉದ್ಯೋಗಮಾಡುವುದು ಸುಖ-ಪ್ರಾಪ್ತಿಯ ರಾಜಮಾರ್ಗವು. ನಮ್ಮ ಕೈಯಿಂದಾದಷ್ಟು ಸಾಹಸಮಾಡಿ, ಆಗುವುದನ್ನೆಲ್ಲ ಸಮಾಧಾನದಿಂದ ನಿರೀಕ್ಷಿಸುತ್ತಿರಬೇಕು. ಏಕೆಂದರೆ ವಿಶ್ವಚಾಲಕನಾದ ದೇವರು ಎಲ್ಲ ಕಾರ್ಯಗಳನ್ನು ಸದುದ್ದೇಶದಿಂದಲೂ ಹಿತಬುದ್ಧಿಯಿಂದಲೂ ಮಾಡುತ್ತಾನೆ.

ನಮ್ಮ ಇಚ್ಛೆಯಂತೆ ಎಲ್ಲ ಕಾರ್ಯಗಳು ಸೆರವೇರದಿದ್ದರೂ ನಮ್ಮ ಕೈಯಿಂದಾದಷ್ಟು ಸಾಹಸವನ್ನು ಮಾಡಲೇಬೇಕು. ಅದರಿಂದ ನಮ್ಮ ಮನ-ಸ್ಸಿನ ಮೇಲೆ ಸುಪರಿಣಾಮವಾಗದೆ ಇರದು. ಒಬ್ಬನೇ ಎಲ್ಲ ಕಾರ್ಯ-ಗಳನ್ನು ನೆರವೇರಿಸುವುದು ಅಸಾಧ್ಯವು. ಏಕೆಂದರೆ "ನಮಗೆ ಭೀಮಸೇನ-ನಷ್ಟು ಶಕ್ತಿಯೂ ಇಲ್ಲ. ಎರಡನೆಯವರ ಕುಬುದ್ಧಿಯನ್ನು ನಾಶಪಡಿಸಿ ಸುಬುದ್ಧಿಯನ್ನುಂಟುಮಾಡುವಷ್ಟು ಜ್ಞಾನವೂ ಇಲ್ಲ. ಆದರೆ ನಮ್ಮಲ್ಲಿದ್ದ ದುರ್ಗುಣಗಳನ್ನು ಒಂದರ ಹಿಂದೊಂದು ತೆಗೆದುಹಾಕುವ ಸಾಮರ್ಥ್ಯವು ನಮ್ಮಲ್ಲಿರುವುದು. ನಾವು ಖೇದ, ಭಯ, ಲೋಭ, ಮತ್ಸರ, ದ್ವೇಷಗಳಿಗೆ ಮನಸ್ಸಿನಲ್ಲಿ ಸ್ವಲ್ಪವಾದರೂ ಇಂಬುಗೊಡಬಾರದು. ದೇವರ ಮೇಲೆ

ಭಾರವನ್ನಿಟ್ಟು ಆತನ ಆಣತಿಯಂತೆ ನಡೆದರೆ ಅವಗುಣಗಳು ತಮ್ಮಷ್ಟಕ್ಕೆ ತಾವೇ ದೂರಾಗುವುವು." — **ಎಪಿಕ್ಟಿಟಸ್.**

ಸ್ವಚ್ಛಂದವೃತ್ತಿಯೇ ಸ್ವಾತಂತ್ರ್ಯವೆಂತಲೂ ಅದರಂಥ ಸುಖವು ಇಲ್ಲವೆಂತಲೂ ಎಷ್ಟೋ ಜನರು ತಿಳಿದುಕೊಳ್ಳುತ್ತಾರೆ. ಆದರೆ ನೀರಲ್ಲಿರುವ ಮೀನಗಳು ಮನುಷ್ಯರಿಗಿಂತ ಹೆಚ್ಚು ಸ್ವಚ್ಛಂದವೃತ್ತಿಯಿಂದಿರುತ್ತವೆ. ಅದರಂತೆ ಸೊಣಗಳಾದರೂ ಸ್ವಾತಂತ್ರ್ಯದ ಅವತಾರಗಳಾಗಿವೆ. ಆದರೆ ಅವು ಸುಖಿಗಳೆಂದೆನ್ನಬಹುದೋ? ಸೊಗಸುಗಾರಿಕೆಯಲ್ಲಿಯೂ ಇಂದ್ರಿಯಸುಖೋಪಭೋಗದಲ್ಲಿಯೂ ಆಯುಷ್ಯವನ್ನು ಕಳೆದರೆ ನಿಜವಾದ ಸುಖವೂ ಸ್ವಾತಂತ್ರ್ಯವೂ ಎಂದೂ ದೊರಕಲಾರವು. ಆದರೆ ಒಮ್ಮೆ ಇಂಥ ಉಪಭೋಗಕ್ಕೆ ಮನಸೋತರೆ ನಮ್ಮ ಪರಾಧೀನತೆಗೆ ಎಣೆಯೇ ಇಲ್ಲದಂತಾಗುವುದು. ಮದ್ಯಪಾನದ ವ್ಯಸನವು ಹೇಗೆ ಹತ್ತುವುದೋ ಹಾಗೆಯೇ ಉಳಿದ ವ್ಯಸನಗಳಾದರೂ ಹತ್ತುವುವು. ಮೊಟ್ಟಮೊದಲು ಮದ್ಯದಿಂದ ಆನಂದವಾದಂತೆ ಕಂಡುಬಂದರೂ ಕಟ್ಟಕಡೆಗೆ ಅದರ ಪರಿಣಾಮವು ವಿಷದಂತೆ ಘಾತುಕವಾಗದೆ ಇರದು. ಒಮ್ಮೆ ಅದನ್ನು ಸೇವಿಸಹತ್ತಿದರೆ ಪುನಃ ಪುನಃ ಅದನ್ನು ಸೇವಿಸುವ ಇಚ್ಛೆಯುಂಟಾಗುವುದು. ಉಳಿದ ವ್ಯಸನಗಳ ಹಾಡಾದರೂ ಹೀಗೆಯೇ ಸರಿ. ಆತ್ಮಸಂಯಮನದಿಂದ ಇಂತಹ ವ್ಯಸನಗಳನ್ನೆಲ್ಲ ನಾಶಪಡಿಸಬಹುದು. ಆರಂಭದಲ್ಲಿ ಇದು ಕಠಿಣವೆಂದು ಕಂಡುಬಂದರೂ ಕ್ರಮದಿಂದ ಸುಲಭವಾಗುತ್ತಹೋಗಿ ಕಟ್ಟಕಡೆಗೆ ಆನಂದವನ್ನು ಕೊಡುವುದು. ಚಿತ್ತವನ್ನು ಸ್ವಾಧೀನದಲ್ಲಿಟ್ಟುಕೊಳ್ಳುವುದರಿಂದುಂಟಾಗುವ ಆನಂದಕ್ಕೆ ಎಣೆಯೇ ಇಲ್ಲ.

ನಿಜವಾದ ದೊಡ್ಡಸ್ತಿಕೆಗೆ ಆತ್ಮಸಂಯಮನವೂ ಸ್ವಾಧೀನಚಿತ್ತವೂ ಬೇಕಾದಂತೆ ಅಧಿಕಾರವೂ ಸಾಮರ್ಥ್ಯವೂ ಬೇಡ. ಚಿತ್ತವು ಸ್ವಾಧೀನದಲ್ಲಿಲ್ಲದ ರಾಜರು ಮಹಾಪುರುಷರಲ್ಲ. ಆದುದರಿಂದಲೇ ಭಸ್ಮವನ್ನು ಬಳಿದುಕೊಂಡು ಭಿಕ್ಷುಕರಂತೆ ತಿರುಗುವ ಸಾಧುಸಂತರು ದೊಡ್ಡವರೆಂದು ಎಲ್ಲರೂ ಅವರನ್ನು ಪೂಜಿಸುತ್ತಾರೆ. ಯಾಕೆಂದರೆ ಅವರು ತಮ್ಮ ಚಿತ್ತವನ್ನು ಸ್ವಾಧೀನದಲ್ಲಿಟ್ಟುಕೊಂಡು ಜಗದುದ್ಧಾರವನ್ನೆಸಗುವರು. "ಪೃಥ್ವಿ-

ಯು ಸೂರ್ಯನ ಸುತ್ತಲೂ ತಿರುಗುವ ಒಂದು ಸಣ್ಣ ಗ್ರಹವಾಗಿದೆ. ಆ ಸೂರ್ಯನು ಸಹ ವಿಶ್ವದಲ್ಲಿ ಒಂದು ಪರಮಾಣುವಿನೋಪಾದಿಯಲ್ಲಿರು-ತ್ತಾನೆ. ಈ ದೃಷ್ಟಿಯಿಂದ ನೋಡಲು ರಾಜನಾಗಲಿ, ಅಮೀರನಾಗಲಿ, ಸುಲ್ತಾನನಾಗಲಿ ತಾನು ಆಳುವ ರಾಜ್ಯವು ವಿಶ್ವದ ಒಂದು ಸಣ್ಣ ಭಾಗವೆಂದು ತಿಳಿದು ತಾನು ಎಷ್ಟು ಅತ್ಯಲ್ಪ ಜಂತುವೆಂಬುದನ್ನು ಮನನ-ಮಾಡಿದರೆ ತಾನು ದೊಡ್ಡವನೆಂಬ ದುರಭಿಮಾನವೆಲ್ಲವೂ ನಾಶವಾಗು-ವುದು." — **ಹೆಲ್ಪ್ಸ್.**

"ರಾಜಪದಕ್ಕೇರುವುದು ಕಠಿಣವದೆ. ಗ್ರಹಗಳಂತೆ ರಾಜರು ಜಗತ್ತಿ-ನಲ್ಲಿ ಮನ್ನಿಸಲ್ಪಟ್ಟರೂ ಅವರಿಗೆ ವಿಶ್ರಾಂತಿಯಿಲ್ಲ." — **ಬೇಕನ್.**

"ನೃಪಂಗೆ ಪ್ರಜೆಯಂ ಪೊರೆವಂಗಿನಿತಿಲ್ಲವಿಶ್ರಮಂ"

— **ಶಾಕುಂತಲ.**

ಆದುದರಿಂದಲೇ ಜನಕ ಮೊದಲಾದ ರಾಜರು ಪರ್ಣಕುಟೀರಗಳಲ್ಲಿರ-ದಿದ್ದರೂ ಋಷಿಗಳಂತೆ ಜಗದುದ್ಧಾರವನ್ನೂ ಮೋಕ್ಷಸಂಪಾದನೆಯನ್ನೂ ಮಾಡಲಿಲ್ಲವೇ? ಇದೇ ಮಾದರಿಯ ಉದಾಹರಣೆಗಳು ಗ್ರೀಸದೇಶ-ದಲ್ಲಿಯ ಪುರಾಣಗಳಲ್ಲಿಯೂ ಇವೆ. "ಯುಲಿಸೆಸನೆಂಬ ಒಬ್ಬ ವಿಖ್ಯಾತ-ವೀರನು ಮರಣಹೊಂದಲು ಮುಂದಿನ ಜನ್ಮದಲ್ಲಿ ಬೇಕಾದುದೊಂದು ಶರೀರವನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯವು ಅವನ ಆತ್ಮಕ್ಕೆ ಇತ್ತು. ಆಗ ಅದು ಬಹಳ ಶೋಧಮಾಡಿ ಕಟ್ಟಕಡೆಗೆ (ಅದರ ಪೂರ್ವಜನ್ಮದ ಮಹತ್ವಾ-ಕಾಂಕ್ಷೆಯೆಲ್ಲ ಅಳಿದುಹೋದುದರಿಂದ) ಒಬ್ಬ ಸದ್‌ಗೃಹಸ್ಥನ ಜನ್ಮವನ್ನು ಆರಿಸಿಕೊಂಡಿತು." — **ಪ್ಲೇಟೊ.**

ಸಾಧುವರ್ತನದಿಂದಿದ್ದು ಆತ್ಮೋನ್ನತಿಯನ್ನು ಮಾಡಿಕೊಳ್ಳುವುದ-ರಲ್ಲಿ ನಿಜವಾದ ಸುಖವುಂಟೆಂಬ ಮಾತು ಮೇಲಿನ ಉದಾಹರಣೆಗಳಿಂದ ಸ್ಪಷ್ಟವಾಗುವುದು. ಜಗತ್ತಿನಲ್ಲಿಯ ಸುಖವೆಲ್ಲವೂ ಕ್ಷಣಿಕವಾದುದೂ ದುಃಖಮಿಶ್ರಿತವಾದುದೂ ಆಗಿದೆ.

" विहायकामान्यः सर्वान्पुमांश्चरति निस्पृहः ॥
निर्ममो निरहंकारः स शांतिमधिगच्छति ॥" —भगवद्गीता.

ವಿಷಯುವೆಲ್ಲವ ಬಿಟ್ಟು ನೆರೆ ನಿ । ರ್ವಿಷಯುವೆನಿಪಾಹಮ್ಮಮತೆಗಳ ।
ದೆಸೆಯು ಹೊದ್ದದೆ ಜ್ಞಾನಿ ತಾನಹೆನೆಂಬ ಹಮ್ಮಳಿದು ॥
ನಸಿಸೆ ಚಲಿಸದ ನಿಸ್ಪೃಹತೆಯಿಂ । ದೆಸೆಯುತಿಹಪರಯೋಗಿ ತಾನೆರೆ ।
ಹೊಸತೆನಿಪ ಮುಕ್ತಿಯನು ಪಡೆವನು ಪಾರ್ಥ ಕೇಳೆಂದ ॥ — ನಾಗರಸ.

(ಯಾವನು ಎಲ್ಲ ಇಚ್ಛೆಗಳನ್ನು ತೊರೆದು ನಿಸ್ಪೃಹನಾಗಿ ನಡೆಯು-ವನೋ ಯಾವನಲ್ಲಿ ಅಹಂಕಾರವೂ ಮಮತ್ವವೂ ಇಲ್ಲವೋ ಅವನಿಗೆ ಶಾಂತಿಯು ದೊರೆಯುವುದು.)

ಈ ಶಾಂತಿಯಿಂದಲೇ ಮುಂದೆ ಸುಖಪ್ರಾಪ್ತಿಯಾಗುವುದು. ಶಾಂತಿ-ಯಿಲ್ಲದವನಿಗೆ ಸುಖವು ಎಂದೂ ದೊರಕದು. (**अशांतस्य कुतः सुखम्**)

ನಮ್ಮ ದೊಡ್ಡಸ್ತಿಕೆಯು ನಾವು ಕೈಕೊಂಡ ಉದ್ಯೋಗದ ಮೇಲೆ ಅವಲಂಬಿಸಿರದೆ ಮನಸ್ಸಿನ ಔದಾರ್ಯದ ಮೇಲೆಯೇ ಅವಲಂಬಿಸಿಯದೆ. ಬಡವನು ಸಹ ತನ್ನ ಸದ್ಗುಣಗಳಿಂದ ಸನ್ಮಾನ್ಯನಾಗಬಹುದು. ಆದರೆ ಔದಾರ್ಯವಿಲ್ಲದ ಬಲಾಢ್ಯ ಅರಸನಾಗಲಿ ವಿನಯವಿಲ್ಲದ ಘನ ಪಂಡಿತ-ನಾಗಲಿ ತಿರಸ್ಕೃತನಾಗಬಹುದು.

ಪುರಾಣಗಳಲ್ಲಿ ಭೀಮ ಅರ್ಜುನ ಮೊದಲಾದ ವೀರರ ಪರಾಕ್ರಮ-ಗಳನ್ನು ಕೇಳಿ ನಾವು ಚಕಿತರಾಗುತ್ತೇವೆ. ಆದರೆ ನಾವಾದರೂ ಅಂತಹ ಪರಾಕ್ರಮಗಳನ್ನು ನಮ್ಮ ಆಯುಷ್ಯಕ್ರಮದಲ್ಲಿ ಪ್ರತಿದಿನ ಮಾಡಿದ ಹೊರತು ಗತ್ಯಂತರವೇ ಇಲ್ಲ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಷಡ್ರಿಪುಗಳ ಕೂಡ ನಾವು ಪ್ರತಿದಿನವೂ ಹೋ-ರಾಡಬೇಕಾಗುತ್ತದೆ. ಅವುಗಳನ್ನು ಸೋಲಿಸಿ ನಾವು ಜಯಶಾಲಿಗಳಾ-ದರೆ ನಮ್ಮ ಬಾಳುವೆಯು ಸುಖಪ್ರದವಾಗುವುದು. ಅದೇ ಅವುಗಳಿಂದ ಪರಾಜಿತರಾಗಿ ವಿವೇಕವನ್ನು ಕಳೆದುಕೊಂಡರೆ ಹಲವು ಪರಿಯಿಂದ ನಮ್ಮ ಅಧಃಪತನವಾಗುವುದು.

"**विवेकभ्रष्टानां भवति विनिपातः शतमुखः**"

ಈ ಕಾಲದಲ್ಲಿ ಜೀವನಕಲಹವು ಕಠಿಣವಾದುದರಿಂದ ಸಂಸಾರವು ದುಸ್ತರವಾದುದೂ ಕ್ಲೇಶಮಯವಾದುದೂ ಆಗಿದೆ. ವಿಶ್ರಾಂತಿಯು

ಸಿಗುವುದಿಲ್ಲ. ಸಿಕ್ಕರೂ ಅತಿಸ್ವಲ್ಪ. ಪ್ರತಿಯೊಬ್ಬನು ಶ್ರಮಬಟ್ಟು ಕೆಲಸ ಮಾಡಿದ ಹೊರತು ನಿರ್ವಾಹವಿಲ್ಲ. ಉದ್ಯೋಗಮಾಡುವುದರಿಂದ ನಮ್ಮ ಆನಂದವೃತ್ತಿಯು ಸ್ಥಿರವಾಗಿ ಉಳಿಯುವುದಲ್ಲದೆ ಪ್ರತಿಫಲವೂ ನಿಶ್ಚಯ-ವಾಗಿ ದೊರಕುವುದು.

ಕೈಕೊಂಡ ಕೆಲಸವು ಬೇಗನೆ ಕೈಗೂಡದೆ ಹೋದರೆ ನಾವು ಹತಾಶ-ರಾಗಬಾರದು. ಮತ್ತು ಬೇಗನೆ ಕೈಗೂಡಿದರೆ ಸೊಕ್ಕಿನಿಂದ ಉಬ್ಬ-ಬಾರದು. ನಮ್ಮ ತಪ್ಪುಗಳಿಂದ ಕೆಲಸವು ಕೈಗೂಡದೆ ಹೋದರೆ ನಾವೇ ದುರ್ದೈವಿಗಳೆಂದು ತಿಳಿದುಕೊಳ್ಳುತ್ತೇವೆ. ಆದರೆ ಹಾಗೆ ಭಾವಿಸದೆ ನಮ್ಮ ತಪ್ಪುಗಳನ್ನು ತಿದ್ದಿಕೊಳ್ಳಲಿಕ್ಕೆ ಯತ್ನಿಸಬೇಕು.

"ಸಂತೋಷವು ಸತತೋದ್ಯೋಗದಿಂದ ಲಭಿಸುವುದು."

ಸಂಸಾರದಲ್ಲಿ ಮಾರ್ಗದರ್ಶಕನಿಲ್ಲದೆ ನಡೆಯಕೂಡದು. ಪ್ರತಿ-ಯೊಬ್ಬನಲ್ಲಿಯೂ ಸದಸದ್ವಿವೇಕವೆಂಬ ಮಾರ್ಗದರ್ಶಕನು ಇದ್ದೇ ಇರು-ವನು. ಅವನು ನಮ್ಮನ್ನು ಸನ್ಮಾರ್ಗಕ್ಕೆ ಹಚ್ಚುವನೇ ಹೊರತು ದುರ್ಮಾ-ರ್ಗಕ್ಕೆ ಎಂದೂ ನೂಕನು. ನಾವು ಸೋಮಾರಿಗಳೂ ಸ್ವಚ್ಛಂದ ವೃತ್ತಿಯವರೂ ಆಗದಂತೆ ಎಚ್ಚರಪಡುವುದಲ್ಲದೆ ಮನೋದೇವತೆಯ ಆಜ್ಞೆಯಂತೆ ನಡೆದು ಧರ್ಮವನ್ನು ಪಾಲಿಸಿದರೆ ಸುಖಪ್ರಾಪ್ತಿಯಾಗದೆ ಇರದು.

" **मनसि वचसि काये पुण्यपीयूषपूर्णा ।**
**स्त्रिभुवनमुपकारश्रेणिभिः प्रीणयन्तः ॥**
**परगुणपरमाणून्पर्वतीकृत्य नित्यम् ।**
**निजहृदि विकसन्तः सन्ति सन्तः कियन्तः ॥** " –भर्तृहरि.

"ಮನಸ್ಸಿನಲ್ಲಿಯೂ, ಮಾತಿನಲ್ಲಿಯೂ, ಕೃತಿಯಲ್ಲಿಯೂ, ಪುಣ್ಯ-ವೆಂಬ ಅಮೃತದಿಂದ ಪೂರ್ಣರಾಗಿ, ತಮ್ಮ ಅಗಣಿತ ಉಪಕಾರಗಳಿಂದ ಮೂಜಗವನ್ನೆಲ್ಲ ಸಂತೋಷಬಡಿಸುವಂತಹ ಮತ್ತು ಪರರ ಗುಣಗಳು ಅಲ್ಪವಾದರೂ ಅವು ದೊಡ್ಡವೆಂದು ತಿಳಿದು ತಮ್ಮಷ್ಟಕ್ಕೆ ತಾವೇ ಆನಂದ-ಹೊಂದುವಂತಹ ಸಂತರು ಎಷ್ಟು ಜನರಿರುವರು?"

ಆದರೂ ಇಂತಹ ಸಂತರು ಪ್ರತಿಯೊಂದು ದೇಶದ ಅವನತಿಯ ಕಾಲಕ್ಕೆ ಅವತರಿಸಿ ತಮ್ಮ ಸದುಪದೇಶದಿಂದ ಜನರನ್ನೆಲ್ಲ ಸನ್ಮಾರ್ಗಕ್ಕೆ ಹಚ್ಚಿದ ಉದಾಹರಣೆಗಳು ಹೇರಳವಾಗಿವೆ. ಹೀಗೆ ದೇವರು ಪೃಥ್ವಿಯಲ್ಲಿ ಅವತರಿಸಿ ಶಿಷ್ಟರ ಪರಿಪಾಲನೆಯನ್ನೂ ದುಷ್ಟರ ನಿಗ್ರಹವನ್ನೂ ಮಾಡುವುದರಿಂದ ಜನರಿಗೆ ಅನುಪಮ ಸುಖವುಂಟಾಗುವುದು.

ಸಜ್ಜನರುಗಳ ಸಲಹಲೋಸುಗ । ದುರ್ಜನರ ನೆರೆಮುಡುಪಲೋಸುಗ । ಮೂರ್ಜಿತದ ಧರ್ಮಂಗಳನು ನೆಲೆಗೊಳಿಸಲೋಸುಗರ । ಕಜ್ಜವೆನಗಿದು ಪ್ರತಿಯುಗಂಗಳ । ಪಜ್ಜೆವಿಡಿದುದಯಿಸುವೆ ಫಲವನು । ವರ್ಜಿಸುತ ಕರ್ಮವನು ಮಾಡುವೆನೆಂದನಸುರಾರಿ ॥ —ನಾಗರಸ.

“ परित्राणाय साधूनां विनाशाय च दुष्कृताम् ।
धर्मसंस्थापनार्थाय संभवामि युगे युगे ॥” —भगवद्गीता.

ಶ್ರೀಕೃಷ್ಣನು ಅರ್ಜುನನಿಗೆ ಗೀತೆಯ ತತ್ವಗಳನ್ನು ಉಪದೇಶ ಮಾಡಿದ ಮೇಲೆ ತನ್ನ ಮನಸ್ಸಿನ ಮೇಲೆ ಆದ ಪರಿಣಾಮವನ್ನು ಅರ್ಜುನನು ಹೀಗೆ ವರ್ಣಿಸಿದ್ದಾನೆ.

“ नष्टो मोहः स्मृतिर्लब्धा त्वत्प्रसादान्मयाच्युत ।
स्थितोऽस्मि गतसंदेहः करिष्ये वचनं तव ॥” —भगवद्गीता.

ದೇವ ಬಿನ್ನಹ ನಿಮ್ಮ ಕಾರು । ಣ್ಯಾವಲೋಕನದಿಂದಲೆನ್ನಗು- ।
ಣಾವಲಂಬನದಜ್ಞತನ ನೆರೆಕೆಟ್ಟುದದರಿಂದ ॥
ಜೀವಭಾವವನುಳಿದು ನಿಜಸಂ । ಭಾವಿಸಿತು ಸಂದೇಹ ಬೀತುದು ।
ದೇವ ನೀ ಹೇಳಿದುದ ಮಾಡುವೆನೆಂದನಾ ಪಾರ್ಥ ॥ —ನಾಗರಸ.

(ಅಚ್ಯುತನೇ ನಿನ್ನ ಪ್ರಸಾದದಿಂದ ನನ್ನ ಮೋಹವೆಲ್ಲ ನಾಶವಾಯಿತು. ನನಗೆ ಸ್ಮೃತಿಯುಂಟಾಯಿತು. ಸಂದೇಹವೆಲ್ಲ ಅಳಿದುಹೋಯಿತು ಆದುದರಿಂದ ನಿನ್ನ ಅಪ್ಪಣೆಯಂತೆ ಮಾಡಲು ಸಿದ್ಧನಾಗಿ ನಿಂತಿರುವೆನು.)

ಏನಾದರೊಂದು ಕೆಲಸ ಮಾಡುವಾಗ ನಮಗೆ ಸಂಶಯವುಂಟಾದರೆ ನಮ್ಮಿಷ್ಟಕ್ಕೆ ನಾವೇ ಅದರ ನಿವೃತ್ತಿಯನ್ನು ಮಾಡಿಕೊಳ್ಳಬಹುದು. ನಾವು ಕೈಕೊಳ್ಳತಕ್ಕ ಉಜ್ಜುಗವು ತಕ್ಕುದೋ ಅಲ್ಲವೋ ಎಂಬುದನ್ನು ನಮ್ಮ

ಮನೋದೇವತೆಯ ಆಣತಿಯ ಮೇಲಿಂದ ಗೊತ್ತುಮಾಡಬೇಕು. ಮತ್ತು ಅದರಂತೆ ನಡೆದರೆ ನಮಗೆ ಕಲ್ಯಾಣವಾಗುವುದೆಂಬುದರಲ್ಲಿ ಸಂದೇಹವಿಲ್ಲ. ಈ ಮಾತಿನ ವಿಷಯವಾಗಿ ಕಾಲಿದಾಸನು ಹೇಳುವುದೇನೆಂದರೆ:—

"**सतां हि संदेहपदेषु वस्तुषु ।**
**प्रमाणमन्तः करणप्रवृत्तयः ॥**" —शाकुंतल.

(ಒಳ್ಳೆಯ ಜನರಿಗೆ ಸಂಶಯ ಉಂಟಾದಲ್ಲಿ ಮನೋದೇವತೆಯ ನಿರೂಪವೇ ಪ್ರಮಾಣವು.)

ಪರೋಪಕಾರದ ಕೆಲಸಮಾಡುವುದಕ್ಕೆ ಒಮ್ಮೆ ನಿಶ್ಚಯಮಾಡುವುದರಿಂದಾಗಲಿ ಅಂಥ ಒಂದು ಕೆಲಸಮಾಡುವುದರಿಂದಾಗಲಿ ಜನ್ಮವು ಸಫಲವಾಗದು. ಅದು ಸಫಲವಾಗಬೇಕಾದರೆ ನಮ್ಮ ವರ್ತನವು ನಿಷ್ಕಲಂಕವಾಗಿರಬೇಕು. ಮತ್ತು ನಮ್ಮ ಆಚರಣೆಯಲ್ಲಿ ಅತಿ ಸಣ್ಣ ಸಂಗತಿಗಳ ಕಡೆಗೆ ಸಹ ದುರ್ಲಕ್ಷ್ಯಮಾಡಕೂಡದು. ಆಚಾರವಿಚಾರಗಳು ನಮ್ಮ ಅಂಕಿತವಾಗಿದ್ದರೆ ನಾವು ಷಡ್ರಿಪುಗಳನ್ನು ಗೆಲ್ಲಬಹುದು.

ಆರಂಭದಲ್ಲಿ ಅತಿಕ್ಷುಲ್ಲಕನೆಂದು ಕಂಡುಬರುವ ಸಂಗತಿಗಳು ಕಾಲಹೋದಂತೆ ಬೆಳೆದು ಕಟ್ಟಕಡೆಗೆ ಮಹತ್ವದ ಪರಿಣಾಮವನ್ನುಂಟುಮಾಡುತ್ತವೆ. ಕಸಕಸಿಕಾಳಿಗಿಂತ ಸಣ್ಣದಾದ ಆಲದ ಬೀಜದಿಂದ ವಿಶಾಲವಾದ ಮರವುಂಟಾಗುವುದಿಲ್ಲವೇ?

ಸೃಷ್ಟಿಕರ್ತನ ದೃಷ್ಟಿಯಲ್ಲಿ ಸಣ್ಣದೂ ದೊಡ್ಡದೂ ಎಂಬ ವಿಚಾರವೇ ಇಲ್ಲ. ಸಣ್ಣ ಕಾರಣಗಳು ಸಹ ಕಾಲಾಂತರದಿಂದ ದೊಡ್ಡ ಕಾರ್ಯಗಳನ್ನುಂಟುಮಾಡುತ್ತವೆ.

ಸಜ್ಜನರು ಎಲ್ಲಿದ್ದರೂ ಏಕಾಂತವಾಸದಲ್ಲಿದ್ದಂತೆ ಶಾಂತರೂ ಪ್ರಸನ್ನಮನಸ್ಕರೂ ಆಗಿರುವರು. ಅವರಂತೆ ನಾವಾದರೂ ಮನಶ್ಶಾಂತಿಯನ್ನು ಸಂಪಾದಿಸಲು ಯತ್ನಿಸಬೇಕು. "ಎಷ್ಟೋ ಜನರು ಏಕಾಂತವಾಸದಲ್ಲಿರಬೇಕೆಂಬ ಉದ್ದೇಶದಿಂದ ಪರ್ವತಶಿಖರಗಳ ಮೇಲೆಯೂ, ಸಮುದ್ರತೀರದಲ್ಲಿಯೂ, ಅಡವಿಗಳಲ್ಲಿಯೂ ಆಶ್ರಮಗಳನ್ನು ಕಟ್ಟಿಕೊಂಡು ಅಲ್ಲಿಯೇ ವಾಸಿಸುತ್ತಾರೆ. ಇಂತಹ ಪ್ರದೇಶಗಳಲ್ಲಿ ಮನಶ್ಶಾಂತಿಯುಂಟಾಗ-

ಬಹುದೆಂಬ ಮಾತು ಸಹಜವು; ಆದರೆ ಪ್ರತಿಯೊಬ್ಬನು ತನ್ನ ಮನದಲ್ಲಿಯೇ ನಿಜವಾದ ಶಾಂತಿಯನ್ನುಂಟುಮಾಡಿಕೊಳ್ಳಬಹುದು. ಅವನು ಆತ್ಮೋನ್ನತಿಯ ವಿಚಾರದಲ್ಲಿ ಮಗ್ನನಾದರೆ ಪೂರ್ಣ ಶಾಂತಿಯನ್ನು ಹೊಂಪುವನೆಂದು ಧಾರಾಳವಾಗಿ ಹೇಳಬಹುದು. —**ಮಾರ್ಕಸ್ ಅರೇಲಿಯಸ್**.

ಇದೇ ಮಾತು ಮಹಾಭಾರತದಲ್ಲಿ ವಿಶದವಾಗಿ ಹೇಳಲ್ಪಟ್ಟಿದೆ.

"**दान्तस्य किमरण्येन तथाऽदान्तस्य भारत ।**
**यत्रैव निवसेद्दान्तस्तदरण्यं सचाश्रमः ॥**" –महाभारत.

(ಆತ್ಮದಮನವನ್ನು ಮಾಡಿದವನಿಗೂ ಮಾಡದವನಿಗೂ ಅರಣ್ಯವಾಸವೇತಕ್ಕೆ? ಯಾಕಂದರೆ ಆತ್ಮದಮನಮಾಡಿದವನಿಗೆ ಅವನಿರುವ ಸ್ಥಳವೇ ಅರಣ್ಯವು; ಅದೇ ಆಶ್ರಮವು.)

"ಸದ್ಗುಣಿಯಾದವನು ಜಾಣನು. ಜಾಣನೇ ಸಜ್ಜನನು. ಸಜ್ಜನನೇ ಸುಖಿಯು" ಎಂದು ಪ್ರಾಚೀನಕಾಲದ ಆಂಗ್ಲಪ್ರಭುವಾದ ಆಲಫ್ರೆಡ್ಡನು ಹೇಳಿರುವನು. ಇದಕ್ಕೆ ಸರಿಯಾದುದೊಂದುಕ್ತಿಯು ಹಿತೋಪದೇಶದಲ್ಲಿ ಕಂಡುಬರುವುದು.

"**विद्या ददाति विनयं विनयाद्याति पात्रतां ।**
**पात्रत्वाद्धनमाप्नोति धनाद्धर्मं ततः सुखम् ॥**"

(ವಿದ್ಯೆಯಿಂದ ವಿನಯವೂ, ವಿನಯದಿಂದ ಪಾತ್ರತೆಯೂ, ಪಾತ್ರತೆಯಿಂದ ಧನವೂ, ಧನದಿಂದ ಧರ್ಮವೂ, ಧರ್ಮದಿಂದ ಸುಖವೂ ದೊರಕುವುವು.)

ಆದಕಾರಣ ಶುದ್ಧಾಚರಣೆಯೂ ಪರೋಪಕಾರಬುದ್ಧಿಯೂ ನಮ್ಮಲ್ಲಿರದಿದ್ದರೆ ನಮಗೆ ಎಂದೂ ಸುಖಪ್ರಾಪ್ತಿಯಾಗದೆಂಬುದು ವಿಶದವಾಗುತ್ತದೆ. ನಮ್ಮ ಮನಸ್ಸಿನಲ್ಲಿ ಆತ್ಮೋನ್ನತಿಯ ವಿಚಾರಗಳು ಬರಹತ್ತಿದ ಮೇಲೆ ಹೊತ್ತುಹೋಗಬೇಕೆಂದು ಎರಡನೆಯವರ ಸಹವಾಸವನ್ನು ಹಾರೈಸುವ ಅಗತ್ಯವು ಬೀಳದು. ಏಕೆಂದರೆ ಆ ವಿಚಾರಗಳಿಂದ ಮನಸ್ಸಿಗೆ ಅನುಪಮವಾದ ಶಾಂತಿಯುಂಟಾಗುವುದು. ಆದರೆ ಅದು ಪ್ರತಿಯೊಂದು ಮಾನವಪ್ರಾಣಿಗೆ ಸಾಧ್ಯವಲ್ಲ. ಆದುದರಿಂದ ಪ್ರತಿಯೊಬ್ಬನು ದುಷ್ಟ-

ವಿಚಾರಗಳನ್ನು ಚದರಿಸುತ್ತ ವಾಸನೆಗಳನ್ನು ಅಂಕೆಯೊಳಗಿಡುತ್ತ ಸೌಜನ್ಯವೃತ್ತಿಯನ್ನು ಬೆಳಿಸುವುದೇ ಸುಖಪ್ರಾಪ್ತಿಯ ಸುಮಾರ್ಗ-ವಾಗಿದೆ.

"ನಮ್ಮಲ್ಲಿ ಮನಶ್ಶಾಂತಿಯುಂಟಾಗಬೇಕಾದರೆ ಕಾಲಾವಧಿಯು ಅವ-ಶ್ಯವು. ಮಳೆಗಾಲದಲ್ಲಿ ರಾಡಿಯಾದ ನದಿಯ ನೀರು ಕಾಲಾವಧಿಯಿಂದ ತಿಳಿಯಾಗುವಂತೆ ಮನಸ್ಸಾದರೂ ಕಾಲಾವಧಿಯಿಂದ ಶಾಂತವೂ ಸ್ಥಿರವೂ ಆಗುವುದು. ಸೋಸಿ ಅದನ್ನು ಶುದ್ಧಮಾಡಲಾಗದು. ನೀರು ತಿಳಿ-ಯಾಗಬೇಕಾದರೆ ಅದನ್ನು ಹಾಗೆಯೇ ನಿಲ್ಲಗೊಡಬೇಕಲ್ಲದೆ ಅದರಲ್ಲಿ ಕಲ್ಲು ಒಗೆದು ರಾಡಿಯನ್ನೆಬ್ಬಿಸಕೂಡದು. ಅದರಂತೆಯೇ ಮನಸ್ಸು ಸ್ಥಿರವಾಗಬೇಕಾದರೆ ಶೋಕಾನುತಾಪಗಳ ವಿಚಾರದಿಂದ ಅದನ್ನು ವ್ಯಗ್ರ-ವಾಗಗೊಡಬಾರದು." —**ರಸ್ಕಿನ್.**

"ಏನಾದರೊಂದು ಘೋರವಾದ ಅಪರಾಧವನ್ನು ಮಾಡಿದವನಿಗೆ ಕಾರಾಗೃಹವಾಸವಾಗಲಿ ದೇಹಾಂತಶಿಕ್ಷೆಯಾಗಲಿ ಸರಿಯಾದ ಶಾಸನ-ವಲ್ಲ. ಆದರೆ ತಪ್ಪುಗಳಿಂದುಂಟಾಗುವ ದೋಷಪರಂಪರೆಯೂ ತದನು-ವರ್ತಿಯಾದ ಅಧೋಗತಿಯೂ ತಕ್ಕ ಶಾಸನಗಳು."

—**ಸಾಕ್ರೆಟೀಸ್.**

ಝೆನೋಫೂನನೆಂಬ ಇತಿಹಾಸಕರ್ತನು ಸಾಕ್ರೆಟೀಸನ ವಿಷಯ-ವಾಗಿ ಬರೆದಿಟ್ಟದ್ದೇನೆಂದರೆ:—"ಸಾಕ್ರೆಟೀಸನು ದೇವರ ಪ್ರೇರಣೆಯಿಲ್ಲದೆ ಯಾವ ಕಾರ್ಯವನ್ನೂ ಮಾಡದಷ್ಟು ಧರ್ಮನಿಷ್ಠನೂ, ಕ್ಷುಲ್ಲಕಸಂಗತಿ-ಯಲ್ಲಿ ಸಹ ಎರಡನೆಯವರಿಗೆ ಅನ್ಯಾಯವಾಗದಂತೆ ನಡೆಯುವಷ್ಟು ನಿಷ್ಪಕ್ಷಪಾತಿಯೂ, ಇಂದ್ರಿಯಸುಖಕ್ಕಿಂತ ಸದ್ಗುಣವೇ ಲೇಸೆಂದು ಎಣಿ-ಸುವಷ್ಟು ದೃಢವ್ರತನೂ, ಒಳಿತು ಯಾವುದು ಹೀನವಾವುದು ಎಂಬು-ದನ್ನು ತಪ್ಪದೆ ಹೇಳುವಷ್ಟು ಜಾಣನೂ, ಎರಡನೆಯವರ ಉಪದೇಶವನ್ನು ಅಪೇಕ್ಷಿಸದಷ್ಟು ಸ್ವಾವಲಂಬಿಯೂ, ಗೂಢಪ್ರಶ್ನಗಳನ್ನು ವಿಶದವಾಗಿ ತಿಳಿಸಿ ಹೇಳುವಷ್ಟು ಬುದ್ಧಿವಂತನೂ, ಎರಡನೆಯವರ ಸದ್ಗುಣಗಳನ್ನು ತಪ್ಪದೆ ಪರೀಕ್ಷಿಸುವಷ್ಟು ಚತುರನೂ, ಜನರ ಮನಸ್ಸನ್ನು ಪಾಪಕೃತ್ಯ-

ಗಳಿಂದ ತಿರುಗಿಸಿ ಪುಣ್ಯಕರ್ಮಗಳಿಗೆ ಹಚ್ಚುವಷ್ಟು ಹಿತಬುದ್ಧಿಯುಳ್ಳವನೂ ಆದುದರಿಂದ ಅವನು ಪರಮಶ್ರೇಷ್ಠನೂ ಸುಖಿಯೂ ಆಗಿದ್ದನು."

ಅಂಟೋನೈನೆಸ್ ಎಂಬವನ ಬಗ್ಗೆ ಮಾರ್ಕಸ ಅರೇಲಿಯುಸನು ಬರೆದ ಮಾತುಗಳನ್ನು ಲಕ್ಷ್ಯದಲ್ಲಿಟ್ಟು ಅದರಂತೆ ವರ್ತಿಸಿದರೆ ಮನಃಸ್ವಾಸ್ಥ್ಯ ವುಂಟಾಗದೆ ಇರದು. "ಸಯುಕ್ತಿಕವಾಗಿ ವಾದಗಳನ್ನು ಮಾಡುವ ದೃಢಪ್ರವೃತ್ತಿಯೂ, ಎಲ್ಲವಸ್ತುಗಳಲ್ಲಿ ಸಮದೃಷ್ಟಿಯೂ, ಧರ್ಮನಿಷ್ಠೆಯೂ, ಒಣಪ್ರಶಂಸೆಯ ತಿರಸ್ಕಾರವೂ, ಸಂಗತಿಗಳ ನಿಜತ್ವವನ್ನು ಅರಿತುಕೊಳ್ಳುವ ಸ್ಥಿರಪ್ರಯತ್ನವೂ, ಪೂರ್ಣ ವಿಚಾರಮಾಡದೆ ಯಾವ ಕೆಲಸವನ್ನೂ ಮಾಡದ ನಿಶ್ಚಯವೂ, ನಿಂದೆಯನ್ನು ಸಹಿಸಿಕೊಳ್ಳುವಷ್ಟು ಸಮಾಧಾನವೂ ಅವನಲ್ಲಿದ್ದುದರಿಂದ ಅವನು ಸದಾ ಸಂತುಷ್ಟನೂ, ಉದ್ಯೋಗಿಯೂ, ಮಿತಾ-ಹಾರಿಯೂ, ಪರೋಪಕಾರಿಯೂ, ಪರೋತ್ಕರ್ಷ-ಸಹಿಷ್ಣುವೂ, ಮೂಢಶ್ರದ್ಧೆ-ಯಿಲ್ಲದಂಥ ಧಾರ್ಮಿಕನೂ ಆಗಿದ್ದನು."

ಹೀಗೆ ಜಗತ್ತಿನಲ್ಲಿ ಆಗಿಹೋದ ಮಹಾಪುರುಷರೆಲ್ಲರು ತಮ್ಮ ಸುಪ್ರ-ಸನ್ನವಾದ ಮನಶ್ಶಾಂತಿಯಿಂದ ಮೋಕ್ಷವನ್ನು ಹೊಂದಿದರು. ರಾಮ-ದಾಸ, ತುಕಾರಾಮ, ಏಕನಾಥ, ಪುರಂದರದಾಸ, ಕಬೀರ ಮೊದಲಾದ ಸಾಧುಸಂತರು ಇದೇ ರೀತಿಯಿಂದಲೇ ವೈಕುಂಠಪ್ರಾಪ್ತಿಯನ್ನು ಮಾಡಿ-ಕೊಳ್ಳಲಿಲ್ಲವೇ?

ಅಂಥ ಮನಶ್ಶಾಂತಿಯನ್ನು ಹೊಂದಲಿಚ್ಛಿಸುವವನು ತನ್ನ ಕರ್ತವ್ಯ-ವನ್ನು ಸರಿಯಾಗಿ ಪೂರೈಸಬೇಕು. ಹಾಗೆ ಮಾಡುವುದರಿಂದ ಸುಖವು ಪ್ರಾಪ್ತವಾಗದೆ ಇರದು. ಆದುದರಿಂದ ಪ್ರತಿಯೊಬ್ಬನು ತನ್ನ ಕರ್ತವ್ಯ-ವನ್ನು ದಕ್ಷತೆಯಿಂದ ಮಾಡಿ ಸುಖವನ್ನು ಹೊಂದಲಿ. **ಇದೇ ಹಾರೈಕೆ!**

# ೩ನೆಯ ಅಧ್ಯಾಯ.

## ಗ್ರಂಥಪ್ರಶಂಸೆ.

"काव्यशास्त्रविनोदेन कालो गच्छति धीमताम्" —हितोपदेश.

ಜಾಣರು ಕಾವ್ಯಶಾಸ್ತ್ರಗಳನ್ನು ಓದುವುದರಿಂದ ಉಂಟಾಗುವ ಆನಂದದಲ್ಲಿ ಕಾಲಕಳೆಯುತ್ತಾರೆ.

"ಏತರಿಂದ ವೈರಾಗ್ಯವುಂಟಾಗುವುದೋ, ದುರ್ಗುಣಗಳೆಲ್ಲವೂ ನಾಶವಾಗುವುವೋ, ದುರ್ಗತಿಯು ತಪ್ಪುವುದೋ, ಅದೇ ಗ್ರಂಥವು. ಏತರಿಂದ ಧೈರ್ಯವು ಹೆಚ್ಚಾಗುವುದೋ, ಪರೋಪಕಾರವು ಸಂಭವಿಸುವುದೋ, ವಿಷಯೇಚ್ಛೆಯು ದೂರವಾಗುವುದೋ, ಅದೇ ಗ್ರಂಥವು."

—**ರಾಮದಾಸ.**

ಈ ಕಾಲದ ಸುಖಸಾಧನಗಳೊಳಗೆ ಪುಸ್ತಕಗಳು ಮುಖ್ಯವಾದುವುಗಳು. ಪ್ರಾಚೀನಕಾಲದಲ್ಲಿ ಅಚ್ಚುಹಾಕುವ ಯಂತ್ರಗಳು ಇಲ್ಲದ್ದರಿಂದ ಪುಸ್ತಕಗಳು ಅಪರೂಪವಾಗಿದ್ದುವು; ಹಸ್ತಲಿಖಿತ ಪ್ರತಿಗಳೇ ಪ್ರಚಾರದಲ್ಲಿದ್ದುವು. ಆದಕಾರಣ ಪುಸ್ತಕಗಳನ್ನು ಸಾದ್ಯಂತವಾಗಿ ಬರೆದಿಡುವುದು ಶ್ರಮಸಾಧ್ಯವಾದುದೂ ಬೇಸರಿಕೆಯನ್ನುಂಟುಮಾಡುವುದೂ ಆಗಿತ್ತು. ಆದುದರಿಂದ ಅಂತಹ ಪುಸ್ತಕಗಳು ಎಲ್ಲರಿಗೂ ದೊರಕುವ ಸಂಭವವು ಕಡಿಮೆಯಾಗಿತ್ತು. ಆದರೆ ಅಚ್ಚುಕೂಟಗಳು ಪ್ರಚಾರದಲ್ಲಿ ಬಂದುದಿನಿಂದ ಗ್ರಂಥಗಳು ಬಹಳ ಅಗ್ಗವಾಗಿವೆ. ಈಗ ಎಂತಹ ಬಡವನಾದರೂ ಗ್ರಂಥಗಳನ್ನು ಸಂಗ್ರಹಿಸಬಹುದು.

ಇನ್ನು ಪುಸ್ತಕಗಳ ಉಪಯೋಗಗಳೇನೆಂಬುದನ್ನು ನೋಡುವ! "ಗ್ರಂಥಗಳು ಗುರುಗಳಂತೆ ನಮಗೆ ಶಿಕ್ಷಣವನ್ನು ಕೊಟ್ಟರೂ ನಮ್ಮನ್ನು ಎಂದೂ ದಂಡಿಸುವುದಿಲ್ಲ; ನಮಗೆ ಎಂದೂ ಬಿರುನುಡಿಗಳನ್ನಾಡುವುದಿಲ್ಲ;

ನಮ್ಮ ಮೇಲೆ ಸಿಟ್ಟಗೇಳುವುದಿಲ್ಲ; ನಮ್ಮಿಂದ ದ್ರವ್ಯವನ್ನಪೇಕ್ಷಿಸುವುದಿಲ್ಲ. ಯಾವಾಗಲೂ ಅವು ಉಪದೇಶಿಸಲಿಕ್ಕೆ ಸಿದ್ಧವಾಗಿರುವುವು. ಯಾವು ದಾದರೊಂದು ವಿಷಯದ ಅಧ್ಯಯನ ಮಾಡುವಾಗ ನಮಗೆ ಶಂಕೆಯುಂಟಾ ದರೆ ಅವು ಏನೂ ಬಚ್ಚಿಡದೆ ಸ್ಪಷ್ಟವಾಗಿ ತಿಳಿಸಿಹೇಳುವುವು. ಅವುಗಳ ಅಭಿಪ್ರಾಯವು ನಮಗೆ ತಿಳಿಯದೆ ಹೋದರೆ ಅವುಗಳಿಗೆ ಅಸಮಾಧಾನ ವಾಗುವುದಿಲ್ಲ. ನಾವು ದಡ್ಡರೆಂದು ಅವು ನಮ್ಮನ್ನು ನೋಡಿ ಹಾಸ್ಯ ಮಾಡುವುದಿಲ್ಲ. ಆದುದರಿಂದ ಜ್ಞಾನಪೂರಿತವಾದ ಗ್ರಂಥಸಂಗ್ರಹವು ಪೃಥ್ವಿಯಲ್ಲಿ ಎಲ್ಲ ಸಂಪತ್ತಿಗಿಂತಲೂ ಶ್ರೇಷ್ಠವಾದುದು. ಸತ್ಯ, ಸುಖ, ಜ್ಞಾನ, ಭಕ್ತಿ ಇವುಗಳ ಸಂಪಾದನೆಯನ್ನು ಮಾಡಲೆಳಸುವ ಮನುಷ್ಯರು ಗ್ರಂಥಾವಲೋಕನವನ್ನು ಮಾಡುವುದು ಅವಶ್ಯವು."

—**ರಿಚರ್ಡ್‌ಬರಿ.**

(ಇ. ಸ. ೧೩೪೪.)

ವಾಚನದ ಅಭಿರುಚಿಯುಳ್ಳ ಜನರು ಪುಸ್ತಕಗಳನ್ನು ಗೆಳೆಯರೆಂದು ಭಾವಿಸುತ್ತಾರೆ. ಈ ಸಂದರ್ಭದಲ್ಲಿ ಪೆಟ್ರಾರ್ಕನೆಂಬ ವಿದ್ವಾಂಸನು ಹೇಳುವುದೇನಂದರೆ:—"ನನ್ನ ಮನೆಯಲ್ಲಿದ್ದ ಗೆಳೆಯರ ಸಹವಾಸವು ನನಗೆ ತುಂಬ ಆನಂದವನ್ನುಂಟುಮಾಡುತ್ತದೆ. ಅವರು ಬೇರೆ ಬೇರೆ ದೇಶಗಳಿಂದ ಬಂದಿರುವರು. ವಯೋಮಾನದಿಂದಾದರೂ ಬೇರೆ ಬೇರೆ ಅವಸ್ಥೆಗಳಲ್ಲಿರುವರು. ಅವರಲ್ಲಿ ಕೆಲವರು ರಾಜಕರಣಧುರಂಧರ ರೆಂದು ಹೆಸರಾಗಿದ್ದಾರೆ. ಕೆಲವರು ವೀರರೆಂದು ಕೀರ್ತಿಯನ್ನು ಹೊಂದಿ ದ್ದಾರೆ. ಕೆಲವರು ಶಾಸ್ತ್ರಕೋವಿದರೆಂದು ಮಾನವನ್ನು ಪಡೆದಿದ್ದಾರೆ. ಅವರ ಸಮಾಗಮವು ಬೇಕಾದಾಗ ನನಗೆ ದೊರಕುವುದು. ನನಗೆ ಬೇಡಾದ ಕೂಡಲೆ ಅವರನ್ನು ಕಳುಹಿಸಿಬಿಡುವೆನು. ನಾನು ಕೇಳಿದ ಪ್ರತಿ- ಯೊಂದು ಪ್ರಶ್ನೆಗೆ ಅವರು ಸಮರ್ಪಕವಾದ ಉತ್ತರಗಳನ್ನು ಸಮಾಧಾನ- ದಿಂದ ಹೇಳುವರು. ಕೆಲವರು ಪ್ರಾಚೀನಕಾಲದ ಇತಿಹಾಸವನ್ನು ಬೋಧಿಸುವರು. ಕೆಲವರು ಸೃಷ್ಟಿವೈಚಿತ್ರ್ಯದ ಗುಟ್ಟುಗಳನ್ನು ತಿಳಿಸಿ- ಹೇಳುವರು. ಕೆಲವರು ನಮ್ಮ ಜೀವನಕ್ರಮವನ್ನು ಹೇಗಿಡಬೇಕೆಂಬು-

ದನ್ನೂ, ಮರಣಬಂದಾಗ ಎಷ್ಟು ಶಾಂತರಿರಬೇಕೆಂಬುದನ್ನೂ ಉಪ-ದೇಶಿಸುವರು. ಕೆಲವರು ತಮ್ಮ ಆನಂದವೃತ್ತಿಯಿಂದ ನನ್ನ ಚಿಂತೆಗಳ-ನ್ನೆಲ್ಲ ದೂರಮಾಡಿ ನನ್ನಲ್ಲಿ ಉತ್ಸಾಹವನ್ನುಂಟುಮಾಡುವರು. ಕೆಲವರು ವಿಧವಿಧದ ಶಾಸ್ತ್ರಗಳ ಜ್ಞಾನವನ್ನು ನನಗೆ ಅನುಗ್ರಹಿಸುವರು. ಕೆಲವರು ನನಗೆ ಧೈರ್ಯವನ್ನು ಕೊಡುವರು; ಕೆಲವರು ಷಡ್ರಿಪುಗಳನ್ನು ಗೆಲ್ಲುವ ಮಾರ್ಗವನ್ನು ತೋರಿಸುವರು; ಮತ್ತೆ ಕೆಲವರು ವಿಚಿತ್ರವಾದ ಕಲೆ-ಗಳನ್ನು ಕಲಿಸುವರು. ಅವರ ಅನುಮತಿಯಂತೆ ನಡೆದರೆ ಎಂತಹ ಬಿಕ್ಕಟ್ಟಿನ ಪ್ರಸಂಗದೊಳಗಿಂದಾದರೂ ಪಾರಾಗಬಹುದು. ಈ ಎಲ್ಲ ಉಪಕಾರದ ಬದಲು ನಾನು ಅವರಿಗೆ ನನ್ನ ಮನೆಯಲ್ಲಿ ಶಾಂತವಾದ ಸ್ಥಳವನ್ನು ಕೊಟ್ಟರೆ ತೀರಿತು. ಹೆಚ್ಚಿನದನ್ನೇನೂ ಅವರು ಬೇಡು-ವುದಿಲ್ಲ."

"ಪುಸ್ತಕಗಳನ್ನು ಪ್ರೀತಿಸುವವರ ಕೂಡ ಅವು ನಂಬಿಗೆಯ ಗೆಳೆಯ-ನಂತೆಯೂ, ಪಥ್ಯವಾದುದನ್ನೇ ಉಪದೇಶಿಸುವವನಂತೆಯೂ, ಆನಂದ-ವೃತ್ತಿಯುಳ್ಳ ಜೊತೆಗಾರನಂತೆಯೂ, ನಿಜವಾದ ಹಿತಚಿಂತಕನಂತೆಯೂ ವರ್ತಿಸುವವು. ವಾಚನ, ಮನನ, ನಿದಿಧ್ಯಾಸಗಳಿಂದ ಎಂಥ ಕಾಲ-ದಲ್ಲಿಯೂ ಎಂತಹ ಸ್ಥಿತಿಯಲ್ಲಿಯೂ ಆನಂದವನ್ನು ಹೊಂದದವರು ವಿರಳ" ಎಂದು ಒಬ್ಬ ಆಂಗ್ಲ ಪಂಡಿತನು ಹೇಳುತ್ತಾನೆ.

"ಪೃಥ್ವಿಯಲ್ಲಿ ಇದುವರೆಗೆ ಪ್ರಸಿದ್ಧರಾಗಿ ಹೋದ ಗ್ರಂಥಕಾರರ ಜತೆಯಲ್ಲಿ ನಾನು ಕಾಲಕ್ಷೇಪ ಮಾಡುತ್ತೇನೆ. ನಾನು ನೋಡಿದಲ್ಲೆಲ್ಲ ಪ್ರಾಸಾದಿಕ ಕವಿಗಳೂ ತತ್ವಜ್ಞಾನಿಗಳೂ ನಿಂತಿರುವರು. ಅವರನ್ನು ನನ್ನ ಜೀವದ ಗೆಳೆಯರೆಂದು ಭಾವಿಸುತ್ತೇನೆ" ಎಂದು ಸೌದೇ ಎಂಬ ಆಂಗ್ಲ ಕವಿಯು ಹೇಳಿದ್ದಾನೆ.

"ಜಗತ್ತಿನಲ್ಲಿ ಆಗಿ ಹೋದ ಗ್ರಂಥಕರ್ತರು ವಿವಿಧ ವಿಷಯಗಳನ್ನು ನಮಗೆ ಬೋಧಿಸಿರುವರು. ಇದು ನಮ್ಮ ಭಾಗ್ಯವೇ ಸರಿ. ನಾವು ರಂಭಾಶುಕಸಂವಾದವನ್ನೂ, ವಿದುರನ ನೀತಿಯನ್ನೂ, ಕನಕದಾಸ, ಪುರಂದರದಾಸ ಮೊದಲಾದ ಸಾಧುಸಂತರ ಉಪದೇಶಗಳನ್ನೂ ಕೀರ್ತನ-

ಗಳನ್ನೂ ಕೇಳಬಹುದು. ಮಹಾತ್ಮರ ಉದಾತ್ತ ವಿಚಾರಗಳು ಗ್ರಂಥ-ಗಳಲ್ಲಿ ಮಿನುಗುತ್ತಿರುತ್ತವೆ."

ಪುಸ್ತಕಗಳಿಂದ ಯೌವನಾವಸ್ಥೆಯಲ್ಲಿ ಉಪದೇಶವೂ ವೃದ್ಧಾಪ್ಯದಲ್ಲಿ ಮನೋರಂಜನೆಯೂ ಆಗುವುವು. ಉದಾಸೀನತೆಯನ್ನುಂಟುಮಾಡುವ ಅರಣ್ಯವಾಸದಲ್ಲಿ ಸಹ ಅವು ನಮಗೆ ಉತ್ಸಾಹವನ್ನುಂಟುಮಾಡುವುವು. ಪುಸ್ತಕವಾಚನವು ನಮಗೆ ಒದಗುವ ತೊಂದರೆಗಳನ್ನು ಮರೆಸಿಬಿಡುತ್ತದೆ; ಸಿಟ್ಟು ಇಳಿಯುವಂತೆ ಮಾಡುತ್ತದೆ; ಮತ್ತು ನಿರಾಶೆಯನ್ನು ಹೋಗಲಾ-ಡಿಸುತ್ತದೆ. ನಮ್ಮ ಗೆಳೆಯರಲ್ಲಿ ಸಿಡುಕುತನವೂ, ಗರ್ವವೂ, ಕಾಪ-ಟ್ಯವೂ ಕಂಡುಬರುವುದರಿಂದ ನಮಗೆ ಅವರ ಸಹವಾಸದಿಂದ ಒಮ್ಮೊಮ್ಮೆ ಬೇಸರಿಕೆಯುಂಟಾಗುತ್ತದೆ. ಆದರೆ ಪುಸ್ತಕಗಳೆಂಬ ಗೆಳೆಯರ ಸಹ-ವಾಸದಿಂದ ಬೇಸರಿಕೆಯುಂಟಾಗದೆ ಆನಂದವೇ ಆಗುವುದು.

ವಾಚನಾಭಿರುಚಿಯುಳ್ಳ ಜನರ ಮನಸ್ಸಿನ ಮೇಲೆ ಬೇರೆ ಬೇರೆ ಗ್ರಂಥ-ಗಳ ವಾಚನದಿಂದ ಬೇರೆ ಬೇರೆ ಪ್ರಕಾರದ ಪರಿಣಾಮವುಂಟಾಗುವುದು.

ಪುಸ್ತಕಾಲಯುವು ಒಂದು ವಿಶ್ವವಿದ್ಯಾಲಯವೆಂದು ಕಾರ್ಲಾಯಿಲ್-ನೆಂಬ ಆಂಗ್ಲ ತತ್ವಜ್ಞನು ಅನ್ನುತ್ತಾನೆ. ಸಿಸಿರೊ ಎಂಬ ಗ್ರೀಸದೇಶದ ಪ್ರಸಿದ್ಧ ವಾಗ್ಮಿಯು ಪುಸ್ತಕಗಳಿಲ್ಲದ ಮನೆಯನ್ನು ಆತ್ಮರಹಿತವಾದ ದೇಹಕ್ಕೆ ಹೋಲಿಸಿರುವನು. ಪುಸ್ತಕಗಳನ್ನು ಪಂಡಿತರೇ ಓದಬೇ-ಕೆಂತಲ್ಲ. ಪಾಮರರು ಸಹ ಅವುಗಳನ್ನು ಓದಿ ಆನಂದವನ್ನು ಹೊಂದ-ಬಹುದು.

ವಾಚನವೆಂದರೆ ವಿದ್ಯಾಭ್ಯಾಸವಲ್ಲ. ಗದ್ಯಪದ್ಯಗ್ರಂಥಗಳನ್ನೋದು ವುದು ನಿತ್ಯವ್ಯವಹಾರಕ್ಕೆ ಅತ್ಯುಪಯುಕ್ತವಾದುದೆಂದು ಫ್ರೆಡರಿಕ್ ಹಾರಿ ಸನನೆಂಬ ವಿದ್ವಾಂಸನು ಹೇಳುತ್ತಾನೆ.

ಭರತವರ್ಷದಲ್ಲಿ ಆಂಗ್ಲವಿದ್ಯೆಯ ಪ್ರವರ್ತಕನಾದ ಮೆಕಾಲೆ ಎಂಬ 'ಮುತ್ಸದ್ದಿ'ಯು ಹಿಂದುಸ್ತಾನದ ಗವ್ಹರ್ನರ ಜನರಲ್ಲರ ಕಾರ್ಯನಿರ್ವಾ-ಹಕ ಸಭೆಯ ಸಭಾಸದನೂ, ಕಾಯಿದೆ ಪಂಡಿತನೂ ಆಗಿದ್ದನು. ಅವನು ಆಂಗ್ಲಭಾಷೆಯಲ್ಲಿ ಅನೇಕ ಗದ್ಯಪದ್ಯ ಗ್ರಂಥಗಳನ್ನೂ ಇತಿಹಾಸಗಳನ್ನೂ

ಬರೆದಿದ್ದಾನೆ. ಆಗಿನ ಕಾಲಕ್ಕೆ ಅವನು ವಾಗ್ಮಿಯೆಂದು ಸಹ ಹೆಸರಾಗಿದ್ದನು. ಸಂಪತ್ತು, ಅಧಿಕಾರ, ಕೀರ್ತಿ, ಬುದ್ಧಿಗಳಲ್ಲಿ ಅವನಿಗೆ ಏನೂ ಕೊರತೆ ಇಲ್ಲದಿದ್ದರೂ ಪುಸ್ತಕವಾಚನದಿಂದಲೇ ಅವನಿಗೆ ಅನುಪಮವಾದ ಆನಂದವಾಗುತ್ತಿತ್ತೆಂದು ಅವನ ಚರಿತ್ರಲೇಖಕನು ಬರೆದಿದ್ದಾನೆ. ಪ್ರಾಚೀನಕಾಲದ ವಿದ್ವಾಂಸರ ವಿಷಯಕ್ಕೆ ಅವನು ಎಷ್ಟು ಪೂಜ್ಯ ಬುದ್ಧಿಯುಳ್ಳವನಿದ್ದನೆಂಬುದನ್ನು ವರ್ಣಿಸುವುದು ಅಸಾಧ್ಯವು. ತನ್ನ ಮೇಲೆ ಅವರ ಅಗಣಿತ ಉಪಕಾರವಾಯಿತೆಂತಲೂ, ಅವರ ಉದಾಹರಣೆಯಿಂದ ಸತ್ಯಾನ್ವೇಷಣದ ಅಭ್ಯಾಸವು ತನಗೆ ಪ್ರಾಪ್ತವಾಯಿತೆಂತಲೂ, ಅವರ ಉದಾತ್ತವಿಚಾರಗಳಿಂದ ತನ್ನ ಮನಸ್ಸು ಸುಸಂಸ್ಕೃತವಾಯಿತೆಂತಲೂ ಮೆಕಾಲೆಯು ಸರಸವಾಗಿ ಹೇಳಿದ್ದಾನೆ. ಅವನು ಅಧಿಕಾರವನ್ನೂ ಸಂಪತ್ತನ್ನೂ ಕೆಲವುಬ್ಬಗೆ ಗ್ರಂಥಲೇಖನದಿಂದ ಸಂಪಾದಿಸಿದ್ದರೂ ಎರಡನೆಯವರ ಗ್ರಂಥಗಳನ್ನು ಓದುವುದರಿಂದ ತನಗಾಗುವ ಆನಂದವು ಎಲ್ಲಕ್ಕೂ ಶ್ರೇಷ್ಠವಾದುದೆಂದು ಅವನು ಬರೆದಿದ್ದಾನೆ.

ಗಿಬನ್ನನೆಂಬ ಪ್ರಸಿದ್ಧ ಇತಿಹಾಸಕರ್ತನು "ರೋಮಸಾಮ್ರಾಜ್ಯದ ಅಪಕರ್ಷವೂ ಪತನವೂ" ಎಂಬ ಇತಿಹಾಸವನ್ನು ಬರೆದಿದ್ದಾನೆ. ಪುಸ್ತಕವಾಚನದಿಂದ ತನಗಾಗುವ ಆನಂದವು ಹಿಂದುಸ್ತಾನದಂಥ ಸಂಪತ್ತುಳ್ಳ ರಾಜ್ಯದ ಒಡೆತನದಿಂದುಂಟಾಗುವ ಸಂಭ್ರಮಕ್ಕಿಂತ ಮಿಗಿಲಾದುದೆಂದು ಅವನು ಅಭಿಪ್ರಾಯಪಡುತ್ತಿದ್ದನು.

§ "ಬೇರೆ ಬೇರೆ ಪುಸ್ತಕಗಳನ್ನು ಓದುವುದರಿಂದ ಬುದ್ಧಿಗೆ ಬೇರೆ ಬೇರೆ ಪ್ರಕಾರದ ಸಂಸ್ಕಾರವಾಗುತ್ತದೆ. ಇತಿಹಾಸವನ್ನೋದುವುದರಿಂದ ಜಗತ್ತಿನಲ್ಲಿಯ ಅನುಭವವು ಅನಾಯಾಸವಾಗಿ ದೊರೆಯುತ್ತದೆ. ಗಣಿತಶಾಸ್ತ್ರದಿಂದ ಬುದ್ಧಿಯು ತೀಕ್ಷ್ಣವಾಗುತ್ತದೆ. ನೀತಿಶಾಸ್ತ್ರದಿಂದ ಕರ್ತವ್ಯಾಕರ್ತವ್ಯಗಳ ಜ್ಞಾನವುಂಟಾಗುತ್ತದೆ. ತರ್ಕಮೀಮಾಂಸಾಶಾಸ್ತ್ರಗಳ ಜ್ಞಾನದಿಂದ ವಾದವಿವಾದ ಮಾಡುವ ಸಾಮರ್ಥ್ಯವುಂಟಾಗುತ್ತದೆ. ಕಾವ್ಯಗಳನ್ನೋದುವುದರಿಂದ ಆನಂದವುಂಟಾಗಿ ಮನಸ್ಸು ಕೋಮಲವಾಗುತ್ತದೆ.

§ ಈ ಭಾಗವು ಬೇಕನ್ನನ ಗ್ರಂಥಗಳ ಆಧಾರದಿಂದ ಬರೆಯಲ್ಪಟ್ಟಿದೆ.

ಜ್ಞಾನವು ಮಾರ್ಪಡುತ್ತದೆ. ಪದಾರ್ಥವಿಜ್ಞಾನ, ರಸಾಯನ, ವನಸ್ಪತಿ, ಶಾರೀರ ಮೊದಲಾದ ಭೌತಿಕ ಶಾಸ್ತ್ರಗಳ ಅಭ್ಯಾಸದಿಂದ ವಿಚಾರಶಕ್ತಿಯೂ ನಿರೀಕ್ಷಣಶಕ್ತಿಯೂ ವೃದ್ಧಿಂಗತವಾಗುತ್ತವೆ."

"ಆಹಾರದ ಬೇರೆ ಬೇರೆ ಪದಾರ್ಥಗಳನ್ನು ಬೇರೆ ಬೇರೆ ವಿಧವಾಗಿ ಸೇವಿಸುತ್ತೇವೆ. ಕೆಲವೊಂದರ ಆಸ್ವಾದವನ್ನು ಮಾತ್ರ ತೆಗೆದುಕೊಂಡು ಚಲ್ಲಿಬಿಡುತ್ತೇವೆ. ಕೆಲವು ಪದಾರ್ಥಗಳನ್ನು ಹಾಗೆಯೇ ನುಂಗಿಬಿಡುತ್ತೇವೆ. ಮತ್ತೆ ಕೆಲವನ್ನು ಸಣ್ಣಾಗಿ ಅರೆದು ಸ್ವಲ್ಪ ಸ್ವಲ್ಪವಾಗಿ ತಿಂದು ಜೀರ್ಣಿಸುತ್ತೇವೆ. ಅದರಂತೆಯೇ ವಾಚನಪದ್ಧತಿಯಲ್ಲಾದರೂ ಅನೇಕ ಪ್ರಕಾರಗಳು ಇರುವುವು. ಕೆಲವು ಪುಸ್ತಕಗಳಲ್ಲಿರುವ ರಮ್ಯವಾದ ಭಾಗಗಳನ್ನಷ್ಟೇ ಓದಿದರೆ ಸಾಕು; ಉಳಿದ ಭಾಗಗಳನ್ನೋದುವ ಆವಶ್ಯಕತೆಯಿಲ್ಲ ಬೇರೆ ಕೆಲವನ್ನು ಸಾದ್ಯಂತವಾಗಿ ಓದಿ ಮುಗಿಸಬೇಕು. ಮತ್ತೆ ಕೆಲವನ್ನು ವಿಚಾರಪೂರ್ವಕವಾಗಿಯೂ ಸಾವಕಾಶವಾಗಿಯೂ ವಿಮರ್ಶೆಮಾಡುತ್ತ ಸಂಪೂರ್ಣವಾಗಿ ಓದಬೇಕು. ಮೊದಲನೆಯ ವರ್ಗಕ್ಕೆ ಕಟ್ಟುಕಥೆಗಳೂ, ಕಾದಂಬರಿಗಳೂ ಒಳಪಡುತ್ತವೆ. ಎರಡನೆಯದರಲ್ಲಿ ಇತಿಹಾಸಾದಿ ಗ್ರಂಥಗಳ ಸಮಾವೇಶವಾಗುತ್ತವೆ. ಮೂರನೆಯದರಲ್ಲಿ ತತ್ವಜ್ಞಾನವನ್ನು ಬೋಧಿಸುವ ಗ್ರಂಥಗಳನ್ನು ಸೇರಿಸಬಹುದು."

"ಬೇರೆ ಬೇರೆ ವ್ಯಾಧಿಗಳು ಬೇರೆ ಬೇರೆ ಪ್ರಕಾರದ ವ್ಯಾಯಾಮದಿಂದ ಪರಿಹಾರವಾಗುತ್ತವೆ. ಬಾಣಹೊಡೆಯುವುದರಿಂದ ಎದೆಗೂ ಫುಪ್ಪುಸಕ್ಕೂ ಹಿತವಾಗುವುದು. ತಲೆಶೂಲಿಗೆ ಕುದುರೆಯಮೇಲೆ ಕೂತುಕೊಂಡು ತಿರುಗುವುದು ಗುಣಕಾರಿಯು. ಅದರಂತೆ ಬೇರೆ ಬೇರೆ ವಿಷಯಗಳ ಅಭ್ಯಾಸದಿಂದ ಮನಸ್ಸಿನ ಬೇರೆ ಬೇರೆ ಶಕ್ತಿಗಳಿಗೆ ಬಲವುಂಟಾಗುವುದು. ಯಾವುದಾದರೊಂದು ವಿಷಯದಲ್ಲಿ ಮನಸ್ಸು ಸ್ಥಿರವಾಗಲಿಕ್ಕೆ ಗಣಿತವಿಷಯದ ಅಭ್ಯಾಸವು ಬೇಕು. ಯಾಕೆಂದರೆ ವ್ಯಗ್ರಚಿತ್ತನಾಗಿ ಗಣಿತದ ಉದಾಹರಣೆಗಳನ್ನು ಬಿಡಿಸಹೋದರೆ ಒಂದನ್ನಾದರೂ ಕೊನೆಗಾಣಿಸಲಾಗದೆ ಪುನಃ ಪುನಃ ಮಾಡಿದ್ದನ್ನೇ ಮಾಡಬೇಕಾಗುವುದು. ಆದುದರಿಂದ ಅವನು ತನ್ನ ಮನಸ್ಸನ್ನು ಅತ್ತಿತ್ತ ಹರಿಯಗೊಡ-

ದಂತೆ ಎಚ್ಚರದಿಂದ ಏಕಾಗ್ರಚಿತ್ತನಾಗಲು ಯತ್ನಿಸುವನು. ಊಹಾಶಕ್ತಿಯನ್ನು ಬೆಳೆಸಬೇಕಾದರೆ ತರ್ಕಶಾಸ್ತ್ರದ ಅಭ್ಯಾಸವು ಅವಶ್ಯವು. ಅಸಂಬದ್ಧ ಭಾಷಣಗಳನ್ನು ಮಾಡುವವನು ಕಾಯಿದೆಪಂಡಿತರ ಅನುವಾದಗಳನ್ನು ಓದುವುದು ಅಗತ್ಯವು."

"ಗ್ರಂಥವಾಚನದ ಉದ್ದೇಶಗಳಾವುವೆಂಬುದನ್ನು ನೋಡುವ. ಶುಷ್ಕವಾದವನ್ನು ಮಾಡುವ ಉದ್ದೇಶದಿಂದಾಗಲಿ, ಗ್ರಂಥಗಳಲ್ಲಿ ಬರೆದುದೆಲ್ಲ ನಿಜವೆಂದು ಗ್ರಹಿಸುವುದಕ್ಕಾಗಲಿ, ಒಣಹರಟೆಯ ವೃತ್ತಾಂತದಿಂದ ಮನೋರಂಜನೆ ಮಾಡಿಕೊಳ್ಳುವುದಕ್ಕಾಗಲಿ ಓದಕೂಡದು. ಆದರೆ ಓದಿದ ಸಂಗತಿಗಳನ್ನು ಸತ್ಯವೆಂಬ ಒರೆಗಲ್ಲಿಗೆ ಹಚ್ಚಿ ತಥ್ಯಾಂಶವನ್ನು ತಿಳಿದುಕೊಳ್ಳಬೇಕು."

"ವಾಚನದಿಂದ ಜ್ಞಾನಾಭಿವೃದ್ಧಿಯೂ ಮನೋರಂಜನವೂ ಆಗುತ್ತವೆ. ಒಬ್ಬನೇ ಇದ್ದಾಗ ಪುಸ್ತಕಗಳಿಂದ ಮನೋರಂಜನೆಯಾಗುವುದು. ಕಾರ್ಯವನ್ನು ನಿರ್ವಹಿಸುವಾಗ ಜ್ಞಾನದ ಪರೀಕ್ಷೆಯಾಗುವುದು. ಮಹತ್ವವಾದ ಕಾರ್ಯಗಳು ವಿದ್ವಾಂಸರ ನೆರವಿಲ್ಲದೆ ಎಂದೂ ಕೈಗೂಡವು."

§"ವಿಚಾರಗಳು ಶಾಶ್ವತವಾಗಿ ಉಳಿಯಬೇಕೆಂಬ ಉದ್ದೇಶದಿಂದ ಬರೆದಿಟ್ಟ ಲೇಖಗಳೇ ಪುಸ್ತಕಗಳು. ಅವುಗಳಲ್ಲಿ ತಾತ್ಕಾಲಿಕವೆಂದೂ, ಶಾಶ್ವತವೆಂದೂ ಎರಡು ಪ್ರಕಾರಗಳು. ಪ್ರವಾಸದ ವೃತ್ತಾಂತಗಳೂ, ಮನೋರಂಜಕ ಭಾಷಣಗಳೂ, ವಾದವಿವಾದಗಳೂ, ಕಾದಂಬರಿಗಳೂ, ಚಿಕ್ಕ ಪುಟ್ಟ ಕಟ್ಟುಕಥೆಗಳೂ, ಸದ್ಯಕ್ಕೆ ವರ್ತಿಸುತ್ತಿದ್ದ ಸಂಗತಿಗಳ ವರ್ಣನೆಗಳೂ, ಮೊದಲನೆಯ ವರ್ಗದಲ್ಲಿ ಸಮಾವೇಶವಾಗುತ್ತವೆ. ಇವುಗಳಿಗೆ ತಾತ್ಕಾಲಿಕ ಪುಸ್ತಕಗಳೆನ್ನಬಹುದು. ಎರಡನೆಯ ವರ್ಗದ ಲೇಖಗಳಿಗೆ ಶಾಶ್ವತ ಪುಸ್ತಕಗಳೆಂದೆನ್ನುವರು. ಜ್ಞಾನವನ್ನು ಕೊಟ್ಟು ಬುದ್ಧಿಯನ್ನು ಬೆಳೆಸುವ ಲೇಖಗಳು ಎರಡನೆಯ ವರ್ಗಕ್ಕೆ ಒಳಪಡುತ್ತವೆ."

ಗ್ರಂಥಕಾರನ ಲೇಖವನ್ನು ಶಬ್ದಶಃ ಪರೀಕ್ಷಿಸಿ ಅದರ ತಾತ್ಪರ್ಯವನ್ನೂ ಗ್ರಂಥಕಾರನ ಹೃದ್ಗತವನ್ನೂ ಊಹಿಸುವುದೇ ವಾಚನವು.

§ ಜಾನ್ ರಸ್ಕಿನ್‌ನ ಗ್ರಂಥಗಳ ಆಧಾರದಿಂದ ಬರೆದದ್ದು.

ಪುಸ್ತಕಗಳನ್ನು ಪುನಃ ಪುನಃ ಓದಿ, ಮಹತ್ವದ ಭಾಗಗಳಿದ್ದಲ್ಲಿ ಗುರುತು-ಹಾಕಬೇಕು. ಹೀಗೆ ಮಾಡಿದರೆ ಬೇಕಾದಾಗ ಆ ಭಾಗಗಳನ್ನು ಕೂಡಲೇ ಕಂಡುಹಿಡಿಯುಬಹುದು.

ಮನುಷ್ಯನು ಎಂತಹ ಏಕಾಂತವಾಸದಲ್ಲಿದ್ದರೂ, ಎಂತಹ ಅರಣ್ಯ-ದಲ್ಲಿದ್ದರೂ, ವಾಚನಾಭಿರುಚಿಯೊಂದಿದ್ದರೆ ಸುಖಿಯಾಗಬಹುದು. ಯಾಕೆಂದರೆ ಪುಸ್ತಕಗಳು ಆಹ್ಲಾದವನ್ನುಂಟುಮಾಡುವುವು; ಬೇಸರಿಕೆ-ಯನ್ನು ನೀಗಿಸುವುವು; ಖೇದವೆಂಬುದನ್ನೇ ಮರೆಯಿಸಿ ಬಿಡುವುವು. ಆಪ್ತೇಷ್ಟರ ಸಹವಾಸಕ್ಕಿಂತ ಜ್ಞಾನಿಗಳ ಸಮಾಗಮವು ಹೆಚ್ಚು ಸುಖ-ಕರವು. ಮತ್ತು ಅಂಥ ಜ್ಞಾನಿಗಳಿಂದ ಬರೆಯಲ್ಪಟ್ಟ ಪುಸ್ತಕಗಳೇ ಓದ-ಲಿಕ್ಕೆ ದೊರೆತ ಮೇಲೆ ಅವನ ಆನಂದಕ್ಕೇನೂ ಕೊರತೆಯಿಲ್ಲ. ಅಂತಹ ಪುಸ್ತಕಗಳೆಂಬ ದರ್ಪಣಗಳಲ್ಲಿ ಅವರ ಉದಾತ್ತವಿಚಾರಗಳು ಪ್ರತಿಬಿಂಬ ರೂಪದಿಂದ ಕಂಡುಬರುವುವು. ಓದದೆ ಬಿಟ್ಟಾಗ ಅವು ಮೂಕರಾದ ಸಂಗ-ಡಿಗರಂತೆಯೂ ಓದಲಿಕ್ಕೆ ಪ್ರಾರಂಭಿಸಿದ ಕೂಡಲೆ ಕುಶಲವಾಗ್ಮಿಗಳಂತೆ-ಯೂ ಇರುವುವು. ಹೀಗಿದ್ದರೂ ಎಷ್ಟೋ ಜನರಿಗೆ ವಾಚನಾಭಿರುಚಿಯೇ ಇರುವುದಿಲ್ಲ. ಅಂತಹವರು ವಾಚನಾಭಿರುಚಿಯನ್ನು ವೃದ್ಧಿಗೊಳಿಸಿ ಗ್ರಂಥಗಳಲ್ಲಿಯ ಸತ್ಯಾಮೃತವನ್ನು ಸವಿದು ಸುಖಿಗಳಾಗಲೆಂದು ಕೋರುತ್ತೇವೆ.

# ೪ನೆಯ ಅಧ್ಯಾಯ.

---

## ಕನ್ನಡ ಭಾಷೆಯಲ್ಲಿಯ ಉತ್ತಮ ಗ್ರಂಥಗಳು.

ಪ್ರಾಚೀನಕಾಲದಲ್ಲಿ ಪುಸ್ತಕಗಳು ಬಹು ಅಪರೂಪವಾದುದರಿಂದ ಉತ್ತಮವಾದ ಗ್ರಂಥಗಳು ಆವುವು, ಕನಿಷ್ಠವಾದುವುಗಳು ಆವುವು ಎಂಬುದನ್ನು ಅರಿತುಕೊಳ್ಳುವ ಆವಶ್ಯಕತೆಯು ಇದ್ದಿಲ್ಲ. ಆದರೆ ಅಚ್ಚುಕೂಟಗಳು ಪ್ರಚಾರದಲ್ಲಿ ಬಂದಂದಿನಿಂದ ಪುಸ್ತಕಗಳು ಭರದಿಂದ ಪ್ರಸಿದ್ಧವಾಗಹತ್ತಿವೆ. ಕನ್ನಡ ಭಾಷೆಯಲ್ಲಿಯ ಗ್ರಂಥಸಮೂಹವು ಅಷ್ಟು ವಿಸ್ತೃತವಾಗದಿದ್ದರೂ ಇದ್ದವುಗಳಲ್ಲಿಯೇ ಉತ್ತಮವಾದ ಗ್ರಂಥಗಳು ಆವುವೆಂಬುದನ್ನು ನಮ್ಮ ವಾಚಕರಿಗೆ ಗೊತ್ತುಮಾಡಿಕೊಡುವುದು ನಮ್ಮ ಕರ್ತವ್ಯವು. ಅಂಥ ಗ್ರಂಥಗಳ ವಾಚನದಿಂದ ಅವರಿಗೆ ಆನಂದವಾಗದೆ ಇರದು.

ಕನ್ನಡ ಭಾಷೆಯಲ್ಲಿ, ಹಳಗನ್ನಡ, ಹೊಸಗನ್ನಡವೆಂದು ೨ ಪ್ರಕಾರ-ಗಳು. ಹಳಗನ್ನಡವು ೧೪ನೆಯ ಶತಕದ ವರೆಗೂ ರೂಢಿಯಲ್ಲಿತ್ತು. ಆ ಮೇಲೆ ಈಗ ಪ್ರಚಾರದಲ್ಲಿರುವ ಹೊಸಗನ್ನಡವು ರೂಢವಾಯಿತು. ಹಳ-ಗನ್ನಡದಿಂದ ಬರೆದ ಗ್ರಂಥಗಳು ಅನೇಕವಾಗಿದ್ದರೂ ಅವುಗಳನ್ನು ಓದಿ ಅರ್ಥವನ್ನು ಅರಿತುಕೊಳ್ಳುವುದು ಸಾಧಾರಣ ಕಲಿತವರಿಂದಾಗದು. ಹೊಸಗನ್ನಡದಲ್ಲಿ ರಚಿತವಾದ ಕೆಲವು ಗದ್ಯಪದ್ಯಗ್ರಂಥಗಳಲ್ಲಿ ಹಳಗನ್ನಡ ಶಬ್ದಗಳೂ ಸಂಸ್ಕೃತಸಮಾಸಗಳೂ ಹೇರಳವಾಗಿರುವುದರಿಂದ ಸಾಮಾ-ನ್ಯಜನಕ್ಕೆ ಅವು ದುರ್ಬೋಧವಾಗಿರುವುವು. ಇನ್ನು ಸುಲಭವಾದ ಭಾಷೆ-ಯಲ್ಲಿ ಬರೆಯಲ್ಪಟ್ಟ ಪುಸ್ತಕಗಳು ಆವುವೆಂಬುದನ್ನು ಸೂಚಿಸಿದರೆ ಕನ್ನಡಿ-ಗರು ಆ ಗ್ರಂಥಗಳನ್ನು ಓದಿ ತಮ್ಮ ವಿಶ್ರಾಂತಿಯ ಕಾಲವನ್ನು ಆನಂದ-ದಲ್ಲಿ ಕಳೆಯುವುದಲ್ಲದೆ ಬಹುಶ್ರುತರೂ ಆಗಬಹುದು. ಆದುದರಿಂದ

ಬೇರೆ ಬೇರೆ ವಿಷಯಗಳ ಮೇಲೆ ಸುಲಭವಾದ ಭಾಷೆಯಲ್ಲಿ ಬರೆದ ಗ್ರಂಥಗಳ ಪಟ್ಟಿಯನ್ನು ಯಥಾಮತಿಯಾಗಿ ಮುಂದೆ ಕೊಟ್ಟಿದ್ದೇವೆ.

ದುರ್ದೈವದಿಂದ ಕನ್ನಡದಲ್ಲಿ ಅಂಥ ಗ್ರಂಥಸಮೂಹವು ಈಗ ದೊಡ್ಡ-ದಿರದಿದ್ದರೂ ಪ್ರತಿವರ್ಷ ಕರ್ನಾಟಕದ ಎಲ್ಲ ಭಾಗಗಳಲ್ಲಿ ಪ್ರಸಿದ್ಧವಾ-ಗುವ ಪುಸ್ತಕಗಳಿಂದ ಆ ಕೊರತೆಯು ಕೆಲಕಾಲದಲ್ಲಿ ದೂರವಾಗುವು-ದೆಂಬ ಚಿಹ್ನಗಳು ತೋರಹತ್ತಿವೆ. ಈ ಗ್ರಂಥಲೇಖನದ ಕೆಲಸವನ್ನು ವಿದ್ಯಾವಂತರಾದ ಪಂಡಿತರೂ ಪದವೀಧರರೂ ಶಿಕ್ಷಕರೂ ಕೈಕೊಂಡಿ-ದ್ದಾರೆ. ಅವರನ್ನು ಪ್ರೋತ್ಸಾಹಿಸುವ ಕೆಲಸದಲ್ಲಿ ಕರ್ನಾಟಕ-ವಿದ್ಯಾ-ವರ್ಧಕ-ಸಂಘವೂ, ಕರ್ನಾಟಕ ಸಾಹಿತ್ಯ ಪರಿಷತ್ತೂ, ಕೈಲಾದಷ್ಟು ಪ್ರಯತ್ನ ಮಾಡುತ್ತಲಿವೆ. ಆದುದರಿಂದ ಕರ್ನಾಟಕಭಾಷೆಯ ಶೋಚ-ನೀಯವಾದ ಸ್ಥಿತಿಯು ಬೇಗನೇ ಸುಧಾರಿಸಬಹುದೆಂದು ಆಶಿಸಬಹುದು.

ಪ್ರಾಚೀನಕಾಲದಲ್ಲಿ ಕದಂಬಕುಲದ ಅರಸರು ಬನವಾಸಿಯಲ್ಲಿ ಆಳು-ತ್ತಿದ್ದರು. ಅವರು ವಿದ್ಯಾಭಿಮಾನಿಗಳಾದುದರಿಂದ ಕವಿಗಳಿಗೆ ಪ್ರೋತ್ಸಾ-ಹವನ್ನು ಕೊಡುತ್ತಿದ್ದರು. ಅದರಿಂದ ಅಲ್ಲಿ ಉಗಮವನ್ನು ಹೊಂದಿದ ಗ್ರಂಥಪ್ರವಾಹವು ಕೆಲಕಾಲದ ವರೆಗೆ ಭರದಿಂದ ಹರಿಯುತ್ತಹೋಯಿತು. ಸನ್ ೧೨೫೦ನೆಯ ಇಸವಿಯ ವರೆಗೆ ಆಗಿಹೋದ ಗ್ರಂಥಕಾರರೆಲ್ಲರು ಬಹುಶಃ ಜೈನರು. ಅವರ ತರುವಾಯ ಸಾಧಾರಣವಾಗಿ ಎರಡು ಶತಕ-ಗಳ ವರೆಗೆ ಲಿಂಗಾಯತ ಗ್ರಂಥಕಾರರು ಪ್ರಸಿದ್ಧಿಗೆ ಬಂದರು. ೧೫೦೦-ರಿಂದ ಮುಂದೆ ಬ್ರಾಹ್ಮಣರು ಗ್ರಂಥಗಳನ್ನು ಬರೆಯಹತ್ತಿದರು. ಜೈನರು ಚಂಪೂಕಾವ್ಯಗಳನ್ನು ಬರೆದರು. ಲಿಂಗಾಯತರು ರಗಳೆ ಷಟ್ಪದಿಗಳಲ್ಲಿ ಕಾವ್ಯಗಳನ್ನು ರಚಿಸಿದರು. ಅನಂತರ ರಚಿತವಾದ ಗ್ರಂಥಗಳಲ್ಲಿ ಕೆಲವು ಯಕ್ಷಗಾನರೂಪವಾಗಿಯೂ ಕೆಲವು ಗದ್ಯವಚನರೂಪವಾಗಿಯೂ ಬರೆ-ಯಲ್ಪಟ್ಟಿವೆ.

ಕನ್ನಡಿಗರಲ್ಲಿ ವಾಚನಾಭಿರುಚಿಯು ಇಲ್ಲೆಂದರೆ ಅನೇಕರು ಕೋಪಿಸಿ-ಕೊಳ್ಳಬಹುದು. ಆದರೆ ವಸ್ತುಸ್ಥಿತಿಯನ್ನು ಮುಚ್ಚಿಡುವುದು ಹೇಗೆ? ಗ್ರಂಥ-ಸಮೂಹವಾದರೂ ವಿಸ್ತೃತವಾದದ್ದಿಲ್ಲ. ಅದರಿಂದ ಬರಿಯ ಕನ್ನಡವನ್ನು

ಬಲ್ಲವರಲ್ಲಿ ಬಹುಶ್ರುತರಾದವರು ಕಡಿಮೆ. ಈ ಪ್ರಕಾರ ಜನರಲ್ಲಿ ನೆಲೆಗೊಂಡ ಅಜ್ಞಾನದಿಂದ ನಮ್ಮ ಪ್ರಾಂತವು ಉಳಿದ ಪ್ರಾಂತಗಳಿಗಿಂತ ತೀರ ಹಿಂದುಳಿದದೆ. ಅದನ್ನು ಮುಂದಕ್ಕೆ ತರಲು ಜನರಲ್ಲಿ ವಾಚನಾಭಿರುಚಿಯುಂಟಾಗುವಂತೆ ಗ್ರಂಥಗಳನ್ನು ಬರೆಯುವುದು ಅವಶ್ಯವು. ಅಂಥ ಗ್ರಂಥಗಳೆಂದರೆ ಗದ್ಯಗ್ರಂಥಗಳು. ಅವುಗಳಲ್ಲಿ ಪುರಾಣ, ಕಾದಂಬರಿಗಳು, ವರ್ತಮಾನಪತ್ರ, ಮಾಸಪತ್ರಿಕೆಗಳು ಸಮಾವೇಶವಾಗುತ್ತವೆ.

पुराणमित्येव न साधुसर्वं ।
न चापिकाव्यं नवमित्यवद्यम् ॥
सन्तः परीक्ष्यान्यतरद्भजन्ते ।
मूढः परप्रत्ययनेयबुद्धिः ॥ —कालिदास.

ಯಾವುದಾದರೊಂದು ಕಾವ್ಯವು ಪ್ರಾಚೀನ ಕಾಲದ್ದೆಂದು ಮಾನ್ಯವಲ್ಲ; ಅಥವಾ ಹೊಸದೆಂದು ತ್ಯಾಜ್ಯವಲ್ಲ. ಹೆಡ್ಡರು ಗ್ರಂಥ ಪರೀಕ್ಷಣದ ವಿಷಯದಲ್ಲಿ ಎರಡನೆಯವರ ಅಭಿಪ್ರಾಯದಂತೆ ನಡೆಯುತ್ತಾರೆ. ಆದರೆ ಸಮಂಜಸರಾದವರು ತಾವೇ ಪರೀಕ್ಷಿಸಿ ಚೆಲೋದು ಯಾವುದು ಕೆಟ್ಟದು ಯಾವುದು ಎಂಬುದನ್ನು ನಿರ್ಣಯಿಸುತ್ತಾರೆ.

ಮೇಲೆ ಹೇಳಿದ ಕಾಳಿದಾಸನ ಉಕ್ತಿಯಂತೆ ಎಲ್ಲ ಭಾಷಾಭಿಮಾನಿಗಳು ಉದಾರಮನಸ್ಸಿನಿಂದಲೂ ಶೋಧಕ ಬುದ್ಧಿಯಿಂದಲೂ ಗ್ರಂಥಗಳನ್ನು ಓದುವುದು ಭಾಷೋನ್ನತಿಯ ಸಾಧನಗಳಲ್ಲಿ ಒಂದಾಗಿರುವುದು. ಓದತಕ್ಕ ಗ್ರಂಥಗಳು ಏಕದೇಶೀಯವಾಗಿರದೆ ವಿವಿಧವಿಷಯಗಳ ಸಂಬಂಧದಿಂದಿದ್ದರೆ ವಿಶೇಷಲಾಭವಾಗುವುದು. ಅಂಥ ವಿವಿಧ ಜ್ಞಾನವನ್ನುಂಟುಮಾಡಿಕೊಡುವ ಗ್ರಂಥಗಳು ಕನ್ನಡದಲ್ಲಿ ಅತಿಸ್ವಲ್ಪವು. ಆದರೂ ಇದ್ದದ್ದರೊಳಗೆ ಸಮಾಧಾನಹೊಂದಬೇಕೆಂಬ ಮಾತನ್ನು ನೆನಪಿನಲ್ಲಿಟ್ಟುಕೊಂಡು, ಸಾಧಾರಣ ಕಲಿತ ಕನ್ನಡಿಗರು ಸಹ ಆವಾವ ಗ್ರಂಥಗಳನ್ನು ಓದಿ ಬಹುಶ್ರುತರಾಗಬೇಕೆಂಬ ಉದ್ದೇಶದಿಂದ ನಾವು ಈ ಪುಸ್ತಕಗಳ ಪಟ್ಟಿಯನ್ನು ಗೊತ್ತುಪಡಿಸಿದ್ದೇವೆ. ಸಾಮಾನ್ಯವಾಗಿ ಬೇರೆ ಬೇರೆ ಜನರ ವಿಚಾರಗಳು ಬೇರೆ ಬೇರೆಯಾಗಿವೆ. ಜನರು ಭಿನ್ನಭಿನ್ನ ಅಭಿಪ್ರಾಯವುಳ್ಳ-

ವರಾಗಬಹುದು. **भिन्नरुचिर्हिलोकः** ಆದುದರಿಂದ, ಈ ಪಟ್ಟಿಯೇ ಎಲ್ಲ-
ರಿಗೂ ಮಾನ್ಯವಾಗಬೇಕೆಂಬ ದುರಾಗ್ರಹವನ್ನು ನಾವು ಸರ್ವಥಾ ಹಿಡಿಯು-
ವುದಿಲ್ಲ. ಯಾಕೆಂದರೆ ಇದರಲ್ಲಿ ಎಂಥ ಗ್ರಂಥಗಳನ್ನು ಓದಬೇಕೆಂಬುದನ್ನು
ಮಾತ್ರ ಸೂಚಿಸಿದ್ದೇವೆ.

ಸಾಂಪ್ರತಕ್ಕೆ ಕನ್ನಡದಲ್ಲಿ ಯಾವ ಪ್ರಕಾರದ ಗ್ರಂಥಗಳು ಇರುತ್ತ-
ವೆಂಬುದನ್ನು ನೋಡುವ! ನಮ್ಮಲ್ಲಿ ಪದ್ಯಗ್ರಂಥಗಳು 'ಓದಿ ಓದಿ ಕಟ್ಟರೆ
ಹಿಡಿಯುವಷ್ಟು' ಇರುತ್ತವೆ. ಅವುಗಳಲ್ಲಿ ವಿವೇಚಿಸಿದ ವಿಷಯಗಳೆಂದರೆ
ಪುರಾಣದೊಳಗಿನ ಕಥೆಗಳೂ ಅಧ್ಯಾತ್ಮ ವಿಷಯವೂ. ವಿವಿಧ ವಿಷಯಗಳ
ಜ್ಞಾನವನ್ನು ಮಾಡಿಕೊಡುವ ಗದ್ಯಗ್ರಂಥಗಳೂ ಸೃಷ್ಟಿಶಾಸ್ತ್ರಗಳನ್ನು ಬೋ-
ಧಿಸುವ ಪುಸ್ತಕಗಳೂ ಹೊಸದಾಗಿ ಹುಟ್ಟಬೇಕಾಗಿದೆ. ಅದರಂತೆಯೇ
ಈಗೀಗ ಅಭಿವೃದ್ಧಿಗೆ ಬಂದಿರುವ ಬಂಗಾಲಿ, ಗುಜರಾಥಿ, ಮರಾಠಿ
ಮುಂತಾದ ಭಾಷೆಗಳಲ್ಲಿರತಕ್ಕ ನೂತನ ವಿಷಯಗಳನ್ನು ಬೋಧಿಸುವ
ಗ್ರಂಥಗಳನ್ನು ಕನ್ನಡಕ್ಕೆ ಪರಿವರ್ತನೆಮಾಡಬೇಕಾಗಿದೆ. ಮುಖ್ಯವಾಗಿ
ಇಂಗ್ಲಿಷ್ ಭಾಷೆಯಲ್ಲಿಯ ಉತ್ತಮ ಗ್ರಂಥಗಳನ್ನು ಪರಿವರ್ತಿಸಿ ಅಚ್ಚು-
ಹಾಕಿಸುವುದು ಅತ್ಯವಶ್ಯವು. ಕನ್ನಡ ಭಾಷೆಯಲ್ಲಿ ಗ್ರಂಥಸಂಗ್ರಹವು
ಕಡಿಮೆಯೆಂಬುವುದನ್ನು ಮೇಲೆ ವಿವರಿಸಿರುವುದಷ್ಟೇ! ಹಾಗಾದರೆ ಅದ-
ರೊಳಗಿನ ಗ್ರಂಥಗಳನ್ನು ಆರಿಸುವ ಆವಶ್ಯಕತೆ ಏನು? ಎಂದು ಯಾರಾ-
ದರೂ ಆಕ್ಷೇಪಿಸಬಹುದು. ಅದಕ್ಕೆ ಉತ್ತರವೇನಂದರೆ:— ಅವುಗಳಲ್ಲಿ
ಎಷ್ಟೋ ಗ್ರಂಥಗಳ ಭಾಷೆಯೂ ವಿಷಯವೂ ಸಮರ್ಪಕವಾಗಿರುವುದಿಲ್ಲ.
ಕೆಲವುಗಳ ಭಾಷೆ ಸರಿಯಾಗಿದ್ದರೆ ವಿಷಯವಿಲ್ಲ; ವಿಷಯವಿದ್ದರೆ ಭಾಷೆ-
ಯಿಲ್ಲ; ಈ ಸ್ಥಿತಿಯಾಗಿದೆ. ಆದುದರಿಂದ ಉತ್ತಮ ಗ್ರಂಥಗಳನ್ನು ಆರಿಸಿ,
ಅವುಗಳನ್ನು ಉಲ್ಲೇಖಿಸುವ ಆವಶ್ಯಕತೆಯುಂಟಾಯಿತು. ಮತ್ತು ಪ್ರಕೃ-
ತಕ್ಕೆ ಅಷ್ಟು ಉಪಯೋಗವಲ್ಲದಂಥ ಪುಸ್ತಕಗಳನ್ನು ಓದುವುದರಲ್ಲಿ ತಮ್ಮ
ಅಮೌಲ್ಯವಾದ ವೇಳೆಯನ್ನು ಕನ್ನಡಿಗರು ಕಳೆಯಬಾರದೆಂಬ ಸದುದ್ದೇಶ-
ದಿಂದಲೂ, ಗಹನವಿಚಾರದ ಪುಸ್ತಕಗಳನ್ನು ದುರ್ಬೋಧವೆಂದೂ
ರುಕ್ಷವೆಂದೂ ಭಾವಿಸಿ ಓದುವುದನ್ನು ಬಿಟ್ಟುಬಿಡುವ ಜನರ ತಪ್ಪು ತಿಳಿ-

ವಳಿಕೆಯನ್ನು ದೂರಮಾಡಬೇಕೆಂತಲೂ, ಈ ಕೆಲಸವನ್ನು ಕೈಕೊಂಡಿದ್ದೇವೆ.

ಶಿಕ್ಷಕರಾಗಲಿ ಕಾಯದೆಪಂಡಿತರಾಗಲಿ ವೈದ್ಯರಾಗಲಿ ನಿತ್ಯಶಃ ಮಾನಸಿಕಶ್ರಮವನ್ನು ವಿಶೇಷಮಾಡಬೇಕಾಗುವುದರಿಂದ ಅವರು ವಿಶ್ರಾಂತಿಯ ಕಾಲವನ್ನು ವ್ಯಾಯಾಮದಲ್ಲಿಯೂ ಆಟನೋಟಗಳಲ್ಲಿಯೂ ಕಳೆಯುವುದು ಹಿತಕರವು. ಆದರೆ, ನಿತ್ಯದಲ್ಲಿ ಶಾರೀರಿಕಶ್ರಮವನ್ನು ಮಾಡುವ ಶಿಲ್ಪಿಗರೂ ಒಕ್ಕಲಿಗರೂ ವರ್ತಕರೂ ತಮ್ಮ ವಿಶ್ರಾಂತಿಯ ಕಾಲವನ್ನು ವಾಚನದಲ್ಲಿ ಕಳೆಯುವುದು ಯೋಗ್ಯವು. ಯಾಕೆಂದರೆ ನಿತ್ಯದ ವ್ಯವಸಾಯದಲ್ಲಿ ಅವರಿಗೆ ಮಾನಸಿಕ ಶ್ರಮವು ಆಗತಕ್ಕಷ್ಟು ಆಗುವುದಿಲ್ಲ. ಆದಕಾರಣ ಅವರಿಗೆ ಓದಲಿಕ್ಕೆ ತಕ್ಕಂಥ ಪುಸ್ತಕಗಳನ್ನು ಕೆಳಗೆ ಕೊಟ್ಟ ಪಟ್ಟಿಯಲ್ಲಿ ಸಮಾವೇಶ ಮಾಡಿದ್ದೇವೆ.

ಇಂಗ್ಲಂಡದ ಪ್ರಸಿದ್ಧ ಜ್ಯೋತಿರ್ವಿದನಾದ ಸರ್‌ಜಾನ್ ಹರ್ಶಲನು ವಾಚನದ ವಿಷಯವಾಗಿ ಅಭಿಪ್ರಾಯಪಟ್ಟದ್ದೇನಂದರೆ: "ಪರಮೇಶ್ವರನು ನನಗೆ ಅಖಂಡ ಸುಖವನ್ನುಂಟುಮಾಡುವಂಥ, ಯಾವಾಗಲೂ ನನ್ನ ಸಮಾಧಾನವೃತ್ತಿಯನ್ನು ಕಾದಿಡುವಂಥ, ಎಲ್ಲ ಸಂಕಟಗಳಿಂದ ರಕ್ಷಣೆಮಾಡುವಂಥ ಒಂದು ವರವನ್ನು ಕೊಡುವ ಅಭಿವಚನವನ್ನು ಕೊಟ್ಟರೆ ವಾಚನಾಭಿರುಚಿಯನ್ನು ಕೊಡೆಂದು ಬೇಡಿಕೊಳ್ಳುವೆನು. ಆ ಮೇಲೆ ಎಂಥ ಸಂಕಟಗಳೂ, ಅನಿಷ್ಟಗಳೂ ನನಗೆ ಒದಗಿದರೂ ನನ್ನ ಸಮಾಧಾನವು ತಿಲಮಾತ್ರವಾದರೂ ಕಡಿಮೆಯಾಗದು. ದೇವರಲ್ಲಿ ವಾಚನಾಭಿರುಚಿಯನ್ನು ಬೇಡುವೆನೆಂದು ಅಂದದ್ದರಿಂದ ಪಾರಮಾರ್ಥಿಕಜ್ಞಾನದ ಮಹತ್ವವು ಕಡಿಮೆಯೆಂದು ನಾನು ಎಂದೂ ತಿಳಿಯುವುದಿಲ್ಲ. ವಾಚನಾಭಿರುಚಿಯಿಂದ ಇಹಲೋಕದಲ್ಲಿ ಸಮಾಧಾನವೂ ಆನಂದವೂ ಲಭಿಸುವಂತೆ ಮೋಕ್ಷಪ್ರಾಪ್ತಿಯ ಮಾರ್ಗವಾದರೂ ಗೊತ್ತಾಗುವುದು."

ನಮ್ಮ ಹತ್ತರ ಗ್ರಂಥ ಭಾಂಡಾರವಿದ್ದರೆ ತೀರಲಿಲ್ಲ. ಅದರ ಸದುಪಯೋಗವನ್ನು ಮಾಡುವುದು ವಿಶೇಷಮಹತ್ವದ ಕೆಲಸವಾಗಿದೆ. ಓದತಕ್ಕ ಗ್ರಂಥಗಳು ಯಾವುವು? ' ಸುಮ್ಮನೆ ಸಂಗ್ರಹದಲ್ಲಿಡತಕ್ಕ ಗ್ರಂಥಗಳು

ಯಾವುವು? ಎಂಬುದನ್ನು ಮೊದಲು ಗೊತ್ತುಮಾಡಿಕೊಳ್ಳಬೇಕು. ಎಷ್ಟೋ ಜನರು ಕೈಗೆ ಸಿಕ್ಕ ಪುಸ್ತಕವನ್ನು ಓದುವುದುಂಟು. ಆದರೆ ಇದು ಸರಿಯುಲ್ಲವೆಂದು ಹೇಳಬಹುದು. ಇನ್ನು ಚೆಲೋಗ್ರಂಥಗಳು ಆವುವೆಂಬುದನ್ನು ಆರಿಸುವುದು ಸಹ ಸುಲಭವಲ್ಲ. ಭಾಷಾಕೋವಿದರು ಅಂಥ ಗ್ರಂಥಗಳನ್ನು ಸೂಚಿಸಿದ್ದರೆ ನೆಟ್ಟಗಾಗುತ್ತಿತ್ತು. ಆದರೆ ಅಂಥ ಸೂಚನೆಯನ್ನು ಯಾರೂ ಮಾಡಿದಂತೆ ಕಂಡುಬರುವುದಿಲ್ಲ. ಆದಕಾರಣ ಅಂಥ ಸೂಚನೆಯನ್ನು ಮಾಡುವ ಸೂಕ್ಷ್ಮ ಕೆಲಸವನ್ನು ನಾವು ಕೈಕೊಳ್ಳಬೇಕಾಗಿದೆ. ಅದರಲ್ಲಿ ಉತ್ತಮವೆಂದು ಹೆಸರಾದ ಗ್ರಂಥಗಳನ್ನು ಸೇರಿಸಿದ್ದೇವೆ.

"ಉರಿಯಲಿಕ್ಕೆ ಹಳೇ ಕಟ್ಟಿಗೆಯು, ಕುಡಿಯಲಿಕ್ಕೆ ಹಳೇ ಮದ್ಯವು, ಓದಲಿಕ್ಕೆ ಹಳೇ ಪುಸ್ತಕಗಳು" ಎಂಬ ಉಕ್ತಿಯು ಪಾಶ್ಚಾತ್ಯರಾಷ್ಟ್ರಗಳಲ್ಲಿ ಪ್ರಚಾರದಲ್ಲಿದೆ. ಆದರೆ ಪುಸ್ತಕಗಳ ಸಂಬಂಧದಿಂದ ಆ ಮಾತು ಅಂಶತಃ ಮಾತ್ರ ನಿಜವು. ಯಾಕೆಂದರೆ ಹಳೇ ಗ್ರಂಥಗಳು ಎಷ್ಟು ಮಾನ್ಯವಾದರೂ ಇತಿಹಾಸ, ಶಾಸ್ತ್ರ ಮೊದಲಾದ ನೂತನ ವಿಷಯಗಳ ಮೇಲೆ ಬರೆದ ಹೊಸ ಪುಸ್ತಕಗಳೂ ಓದಲಿಕ್ಕೆ ಅವಶ್ಯವಾಗಿರುವುವು.

ಇನ್ನು ನಾವು ಆರಿಸಿದ ಪುಸ್ತಕಗಳ ಯೋಗ್ಯತೆಯನ್ನು ಪರೀಕ್ಷಿಸುವ, ಇವುಗಳಲ್ಲಿ ೮ ಭಾಗಗಳನ್ನು ಕಲ್ಪಿಸಿದ್ದೇವೆ. ಮೊದಲನೆಯ ಭಾಗದಲ್ಲಿ ವೇದಾಂತ ಗ್ರಂಥಗಳು ಸಮಾವೇಶವಾಗಿವೆ. ಅವುಗಳಲ್ಲಿ ಭಗವದ್ಗೀತೆ, ಯೋಗವಾಸಿಷ್ಠಗಳಷ್ಟು ಗಹನವಾದುವುಗಳೂ ಜಗತ್ಪ್ರಸಿದ್ಧವಾದುವುಗಳೂ ಯಾವುವೂ ಇಲ್ಲ. ಜಗತ್ತಿನ ಎಲ್ಲ ಮುಖ್ಯ ಭಾಷೆಗಳಲ್ಲಿಯೂ ಭಗವದ್ಗೀತೆಯು ಪರಿವರ್ತಿಸಲ್ಪಟ್ಟದೆ. ಕನ್ನಡದಲ್ಲಿ ಈ ಮಹತ್ತರವಾದ ಗ್ರಂಥವನ್ನು ನಾಗರಸನೆಂಬ ಕವಿಯು ಸರಸಾಗಿ ಭಾಷಾಂತರಿಸಿದ್ದಾನೆ. ಭಾಮಿನೀಷಟ್ಪದಿಯಲ್ಲಿ ರಚಿತವಾದ ಈ ಗೀತೆಯ ಪದ್ಯಗಳು ಮನೋಹರವಾಗಿರುವುವು. ಗೀತೆಯ ಇನ್ನೊಂದು ಅನುವಾದವನ್ನು ಶರಾವತೀ ತೀರದ ಹರಿದಾಸನೆಂಬ ಹವ್ಯಕ ಬ್ರಾಹ್ಮಣನು ಭಾ. ಷಟ್ಪದಿಯಲ್ಲಿ ಬರೆದಿದ್ದಾನೆ. ಕನ್ನಡಯೋಗವಾಸಿಷ್ಠವು ತೊರವೆರಾಮಾಯಣದಂತೆ ಸುಲಭ ಶೈಲಿಯಲ್ಲಿ ಬರೆಯಲ್ಪಟ್ಟದೆ. ಇದು ಪದ್ಯಕಾವ್ಯ. ಈ ಗ್ರಂಥದಲ್ಲಿ

ವಸಿಷ್ಠಮುನಿಗಳು ಶ್ರೀರಾಮನಿಗೆ ಜ್ಞಾನಯೋಗದ ತತ್ವಗಳನ್ನು ವಿವರಿಸಿ ಹೇಳಿದ್ದಾರೆ. ಅನುಭವಾಮೃತವು ಶ್ರೀಮನ್ಮಹಲಿಂಗರಂಗನೆಂಬ ಅದ್ವೈತ-ಪಂಡಿತನಿಂದ ಬರೆದ ಗ್ರಂಥವಾಗಿದೆ. ಅದರಲ್ಲಿ ವೈರಾಗ್ಯ, ತ್ವಂಪದ, ತತ್ಪದ, ಅಸಿಪದ, ಮಾಯಾ, ಮಿಥ್ಯಾ ಮೊದಲಾದ ೧೧ ಅಧ್ಯಾಯಗಳಲ್ಲಿ ಅದ್ವೈತ-ಮತವು ಪ್ರತಿಪಾದಿಸಲ್ಪಟ್ಟದೆ. ಪುರಂದರದಾಸರು ರಚಿಸಿದ ಹರಿಭಜನದ ಹಾಡುಗಳು ಪ್ರತಿಯೊಂದು ಮನೆಯಲ್ಲಿ ಇನ್ನೂ ಕೇಳ ಬರುತ್ತವೆ. ಅದ-ರಂತೆಯೇ ಕಾಗಿನೆಲ್ಲಿಯ ಕನಕದಾಸರು ರಚಿಸಿದ ಪದ್ಯಗಳು ಸಹ ಬಹು-ಜನ ಸಮಾಜಕ್ಕೆ ಅವಗತವಾಗಿರುವುವು. ಅದರಿಂದ ಪುರಂದರದಾಸರ ಹರಿಭಜನ ಹಾಗೂ ಕನಕದಾಸರ ಭಕ್ತಿಸಾರ ಎಂಬ ಪುಸ್ತಕಗಳನ್ನು ಈ ಭಾಗದಲ್ಲಿ ಸೇರಿಸಿದ್ದೇವೆ. ಹಳಕಟ್ಟಯವರಿಂದ ಶೋಧಿಸಿ ಮುದ್ರಿಸಲ್ಪಟ್ಟ ವಚನಶಾಸ್ತ್ರಸಾರವು ಪಾಮರರಿಗೂ ವೇದಾಂತ ತತ್ವಗಳನ್ನು ಬೋಧಿಸು-ವುದು.

ಎರಡನೆಯ ಭಾಗದಲ್ಲಿ ಪೌರಾಣಿಕ ಪದ್ಯಕಾವ್ಯಗಳು ಸಮಾವೇಶವಾ-ಗಿವೆ. ಇವುಗಳಲ್ಲಿ ಜೈಮಿನಿಭಾರತ, ತೊರವೆರಾಮಾಯಣ, ಬಸವ-ಪುರಾಣ, ಕುಮಾರವ್ಯಾಸನ ಭಾರತ ಇವು ಬಲು ಸುಲಭವಾಗಿರುವುವು. ಹಳ್ಳಿಪಳ್ಳಿಗಳಲ್ಲಿ ಸಹ ಎಷ್ಟೋ ಜನರು ಇವುಗಳನ್ನು ಓದುತ್ತಿರುವರು. ಇದಲ್ಲದೆ ಸ್ತ್ರೀಧರ್ಮವನ್ನು ಉಪದೇಶಿಸುವ ಹದಿಬದೆಯ ಧರ್ಮವೆಂಬ ಪುಸ್ತಕವು ನಮ್ಮ ಸ್ತ್ರೀಸಮಾಜಕ್ಕೆ ಬೋಧಪರವಾಗಿರುವುದು. ಇತ್ತಿತ್ತಲಾಗಿ ಬಸಪ್ಪಶಾಸ್ತ್ರಿಗಳಿಂದ ಬರೆಯಲ್ಪಟ್ಟ "ನಳದಮಯಂತೀ ಸ್ವಯಂವರ"ವಾ-ಗಲಿ, ಎಸ್. ಜಿ. ನರಸಿಂಹಾಚಾರ್ಯಕೃತ, "ದಿಲೀಪಚರಿತೆ"ಯಾಗಲಿ, "ಅಜನೃಪಚರಿತೆ"ಯಾಗಲಿ, ಸುಲಭವಾಗಿಯೂ ಮನೋಹರವಾಗಿಯೂ ಇವೆ. ಕನ್ನಡದಲ್ಲಿ ಪದ್ಯಗ್ರಂಥಗಳು ವಿಪುಲ. ಆದುದರಿಂದ ಅವುಗಳೊಳ-ಗಿನ ಅನೇಕ ಗ್ರಂಥಗಳನ್ನು ಇಲ್ಲಿ ಸಮಾವೇಶಮಾಡದೆ ಬಿಡಬೇಕಾಯಿತು. ಅವುಗಳಲ್ಲಿ ಎಷ್ಟೋ ಗ್ರಂಥಗಳು ಕ್ಲಿಷ್ಟವಾಗಿಯೂ, ಹಳಗನ್ನಡ ಪೂರಿತ-ವಾಗಿಯೂ, ಸಂಸ್ಕೃತಮಯವಾಗಿಯೂ ಇರುವುದರಿಂದ ಬಹು ಜನ-ರಿಗೆ ಓದಲಿಕ್ಕೆ ಅಸಾಧ್ಯವಾಗಿರುವುವು. ನೇಮಿನಾಥಪುರಾಣ, ಲೀಲಾ-

ವತಿ, ದುರ್ಗಸಿಂಹನ ಪಂಚತಂತ್ರ, ಕಬ್ಬಿಗರಕಾವ ಮೊದಲಾದುವುಗಳು ಈ ಮಾತಿಗೆ ಉದಾಹರಣೆಗಳಾಗಿವೆ.

ಗದ್ಯಗ್ರಂಥಗಳಲ್ಲಿ ಪುರಾಣಗಳೂ ಕಾದಂಬರಿಗಳೂ ನೀತಿಯ ಕಥೆಗಳೂ ಒಳಪಡುತ್ತವೆ. ನಾವು ಕೊಟ್ಟ ಪಟ್ಟಿಯಲ್ಲಿ ಅವುಗಳ ಸಂಖ್ಯೆಯು ಹೆಚ್ಚಾಗಿರುವುದೆಂದು ಕೆಲವರು ಆಕ್ಷೇಪಿಸಬಹುದು. ಆದರೆ ಬಹುಜನ ಸಮಾಜಕ್ಕೆ ಈ ಗ್ರಂಥಗಳಷ್ಟು ಇಷ್ಟವಾದುವುಗಳು ಯಾವುವೂ ಅಲ್ಲ. ಪುರಾಣಗ್ರಂಥಗಳಲ್ಲಿ ಶ್ರೀಕೃಷ್ಣರಾಜವಾಣೀವಿಲಾಸ ಪುಸ್ತಕಗಳು ಮುಖ್ಯ. ಕೆಂಪು ನಾರಾಯಣನು ಬರೆದ ಮುದ್ರಾಮಂಜೂಷವು ಸಹ ಬಹುಜನಪ್ರಿಯವಾಗಿರುವುದು. ಕಥಾಸಂಗ್ರಹದ ಹಾಗು ತೂರಮರಿಕೃತ ಕಾದಂಬರಿಯ ಭಾಷೆಯು ಬಲುಮನೋಹರವಾಗಿದೆ. ಕಾದಂಬರಿಗಳಲ್ಲಿ ಬಿ. ವೆಂಕಟಾಚಾರ್ಯರು ಬರೆದ ಆನಂದಮಠ, ದುರ್ಗೇಶನಂದಿನಿ, ಮೊದಲಾದುವುಗಳು, ಪ್ರಸಿದ್ಧ ಬಂಗಾಲೀ ಕಾದಂಬರಿಕಾರನಾದ ಬಂಕಿಮ ಚಂದ್ರಚಟ್ಟೋಪಾಧ್ಯಾಯನ ಕಾದಂಬರಿಗಳ ಭಾಷಾಂತರಗಳಾಗಿವೆ. ಇನ್ನು ಇಂಗ್ಲಿಷ್ ಭಾಷೆಯಲ್ಲಿ ಉತ್ತಮವೆಂದು ನಿರ್ಣಯಿಸಲ್ಪಟ್ಟ ಕೆಲವು ಗ್ರಂಥಗಳು ಭಾಷಾಂತರರೂಪದಿಂದ ಇಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ರಾಸೆಲಾಸ, ಗಲಿವ್ಹರನ ದೇಶಸಂಚಾರ, ಇಸೋಪನ ನೀತಿಸಂಗ್ರಹ ಮೊದಲಾದುವುಗಳು ಮುಖ್ಯವಾಗಿರುವುವು.

ಇತಿಹಾಸದಲ್ಲಿ ಅರಸು ಅರಸಿಯರ ಗುಣಗಳಾಗಲಿ ವ್ಯಸನಗಳಾಗಲಿ ಯುದ್ಧಗಳ ಇಸವಿಗಳಾಗಲಿ ಮಹತ್ವವಾದ ಸಂಗತಿಗಳಲ್ಲ. ಆದರೆ ಮನುಷ್ಯನ ವಿಚಾರವೂ ಕಲ್ಪನೆಯೂ ಹೇಗೆ ಬೆಳೆಯುತ್ತ ಹೋದವೆಂಬುದನ್ನು ವಿವರಿಸುವ ಗ್ರಂಥಗಳೇ ಇತಿಹಾಸಗಳು. ಇದಲ್ಲದೆ ಕಲೆ, ಶಾಸ್ತ್ರ ಮೊದಲಾದುವುಗಳ ವೃದ್ಧಿಯೂ ಹೇಗೆ ಆಯಿತೆಂಬುದನ್ನು ಗೊತ್ತುಮಾಡಿಕೊಡುವುದು ಸಹ ಇತಿಹಾಸದ ಕಾರ್ಯವು. ಆ ವಿಚಾರದಿಂದ ಬರೆಯಲ್ಪಟ್ಟ ಗ್ರಂಥಗಳು ಕನ್ನಡದಲ್ಲಿ ಇಲ್ಲೆಂದರೂ ಅಡ್ಡಿಯಿಲ್ಲ. ಆದರೂ ನಮ್ಮ ದೇಶದ ಹಾಗೂ ಇಂಗ್ಲಂಡದ ಇತಿಹಾಸವನ್ನು ಗೊತ್ತುಮಾಡಿಕೊಡುವ ಪುಸ್ತಕಗಳನ್ನು ಈ ಸಂಗ್ರಹದಲ್ಲಿ ಸಮಾವೇಶಮಾಡಿದ್ದೇನೆ.

ಶಾಸ್ತ್ರೀಯ ವಿಷಯದ ಸಂಬಂಧದಿಂದಾದರೂ ಇದೇ ಹಾಡು. ಆದರೂ ಇದ್ದ ಪುಸ್ತಕಗಳಲ್ಲಿ ಆರಿಸಿ ಎಲ್ಲ ಶಾಸ್ತ್ರಗಳ ಮೇಲೆ ಬರೆಯಲ್ಪಟ್ಟ ಕೆಲವು ಗ್ರಂಥಗಳನ್ನು ಸೇರಿಸಿದ್ದೇವೆ.

ಚರಿತ್ರಗ್ರಂಥಗಳಲ್ಲಿ ಕವಿಚರಿತೆ, ಗ್ಲಾಡಸ್ಟನ್ನನ ಚರಿತ್ರೆ, ಅಶೋಕನ ಚರಿತ್ರೆ, ಝಾಸಿ ಲಕ್ಷ್ಮೀಬಾಯಿಯವರ ಚರಿತ್ರೆ ಮೊದಲಾದುವುಗಳು ಮುಖ್ಯ.

ನಾಟಕಗಳಲ್ಲಿ ಶಾಕುಂತಲನಾಟಕವು ಜಗತ್‌ಪ್ರಸಿದ್ಧವಾಗಿರುವುದು. ಇದಲ್ಲದೆ ಮೃಚ್ಛಕಟಿಕ, ವೇಣೀಸಂಹಾರ ಮೊದಲಾದುವುಗಳು ಪುರಾತನ ನಾಟಕಗಳು. ಹೊಸದಾಗಿ ರಚಿತವಾದ ಸರೋಜಿನಿ, ಸುಭದ್ರಾವಿಜಯ, ವಿಜಯನಗರದ ಸಾಮ್ರಾಜ್ಯ ಮೊದಲಾದುವುಗಳು ಸಹ ಚೆನ್ನಾಗಿರುವುವು. ನವೀನವಾದ ಸ್ತ್ರೀಧರ್ಮರಹಸ್ಯವೆಂಬುದು ಈಗಿನ ಸಮಾಜದ ಗುಣದೋಷಗಳನ್ನು ಚೆನ್ನಾಗಿ ತೋರಿಸುವುದು.

ಪ್ರಬಂಧ ಗ್ರಂಥಗಳು ಕನ್ನಡದಲ್ಲಿ ತೀರ ಕಡಿಮೆ. ಅವುಗಳಲ್ಲಿ ನೀತಿಗಳ ನೆಲೆಗಟ್ಟನಲ್ಲಿಯ ವಿಷಯವಿವೇಚನವು ಚೆನ್ನಾಗಿರುವುದು. ಕರ್ನಾಟಕ ಗತವೈಭವವು ಕರ್ನಾಟಕ ಇತಿಹಾಸದಲ್ಲಿಯ ಸ್ವಾದವನ್ನು ಜನರಿಗೆ ತಿಳಿಸಿ ಅಭಿಮಾನವನ್ನು ಹುಟ್ಟಿಸುವುದು.

---

## ಅಗತ್ಯವಾಗಿ ಸಂಗ್ರಹಿಸತಕ್ಕ ಕನ್ನಡ ಪುಸ್ತಕಗಳು.

### ೧. ವೇದಾಂತ ಗ್ರಂಥಗಳು.

೧. ಭಗವದ್ಗೀತೆ—ಪದ್ಯ (ನಾಗರಸ)
೨. ಗೀತಾರಹಸ್ಯ (ಟಿಳಕ)
೩. ಯೋಗವಾಸಿಷ್ಠ
೪. ಅನುಭವಾಮೃತ (ಮಹಲಿಂಗರಂಗ)
೫. ದಾಸರಪದಗಳು

೬. ಹರಿಭಜನ (ಪುರಂದರದಾಸ)
೭. ಭಕ್ತಿಸಾರ (ಕನಕದಾಸ)
೮. ಪಂಚರತ್ನ (ನಿಜಗುಣ ಶಿವಯೋಗಿ)
೯. ವಿವೇಕ ಚಿಂತಾಮಣಿ (ನಿಜಗುಣ ಶಿವಯೋಗಿ)
೧೦. ಅಧ್ಯಾತ್ಮ ರಾಮಾಯಣ—ಗದ್ಯ
೧೧. ಕೈವಲ್ಯಕಲ್ಪವಲ್ಲರಿ (ಸರ್ಪಭೂಷಣ)
೧೨. ವಚನಶಾಸ್ತ್ರಸಾರ (ಹಳಕಟ್ಟಿ)

## ೨. ಪದ್ಯಕಾವ್ಯಗಳು.

೧. ಜೈಮಿನಿಭಾರತ (ಲಕ್ಷ್ಮೀಶ)
೨. ಜಯನೃಪಕಾವ್ಯ (ಮಂಗರಸ)
೩. ಗಿರಿಜಾಕಲ್ಯಾಣ (ಹರಿಹರದೇವ)
೪. ಧರ್ಮಾಮೃತಂ (ನಯಸೇನ)
೫. ಚೆನ್ನಬಸವ ಪುರಾಣ
೬. ಕುಮಾರವ್ಯಾಸನ ಭಾರತ
೭. ತೊರವೆರಾಮಾಯಣ (ಕುಮಾರವಾಲ್ಮೀಕಿ)
೮. ನಳದಮಯಂತೀ ಸ್ವಯಂವರ
೯. ರಾಜಶೇಖರ ವಿಲಾಸ
೧೦. ಶಬರಶಂಕರ ವಿಲಾಸ
೧೧. ಪಂಪರಾಮಾಯಣ
೧೨. ಹರಿಶ್ಚಂದ್ರ ಕಾವ್ಯ
೧೩. ನಳಚರಿತ್ರೆ
೧೪. ಜಗನ್ನಾಥ ವಿಜಯ (ರುದ್ರಭಟ್ಟ)
೧೫. ಹದಿಬದೆಯ ಧರ್ಮ (ಸಂಚಿಹೊನ್ನಮ್ಮ)
೧೬. ದಿಲೀಪಚರಿತೆ (ಎಸ್. ಜಿ. ನರಸಿಂಹಾಚಾರ್ಯ)
೧೭. ಸೋಮೇಶ್ವರ ಶತಕ

೧೮. ಸರ್ವಜ್ಞ ವಚನಗಳು (ಉತ್ತಂಗಿ)
೧೯. ರಾಮಾಯಣ ಸಂಗ್ರಹ (ಲಿಂಗರಾಜ ಅರಸರು)
೨೦. ಕವಿತಾಕುಸುಮ ಮಂಜರಿ (ಕುರಡಿ)
೨೧. ವಿದ್ಯಾರಣ್ಯಕಾವ್ಯ (ಚಿದಂಬರಯ್ಯ)

## ೩. ಗದ್ಯಗ್ರಂಥಗಳು.

೧. ಮುದ್ರಾಮಂಜೂಷ (ಕೆಂಪು ನಾರಾಯಣ)
೨. ಬಿ. ವೆಂಕಟಾಚಾರ್ಯರ ಗ್ರಂಥಗಳು
೩. ನೀತಿಮಂಜರಿ (ಗದಿಗೆಯ್ಯಾ ಹೊನ್ನಾಪುರಮಠ)
೪. ಇಂದಿರಾ (ವಾಸುದೇವಾಚಾರ್ಯ ಕೆರೂರ)
೫. ಕಾದಂಬರಿ (ತೂರಮರಿ)
೬. ರಾಬಿನ್‌ಸನ್ ಕ್ರೂಸೊ
೭. ಗಲಿವ್ಹರನ ದೇಶಸಂಚಾರ
೮. ರಾಸೆಲಾಸ (ಗೋಕೆ)
೯. ಕುರಹಿನ ಬಕುಳಹಾರ (ಹುನಗುಂದ ಕೃಷ್ಣರಾವ)
೧೦. ಇಸೋಪನ ನೀತಿಸಂಗ್ರಹ
೧೧. ಶ್ರೀಕೃಷ್ಣರಾಜವಾಣೀ ವಿಲಾಸವೆಂಬ ಮಹಾಭಾರತದ ೧೮ ಪರ್ವಗಳು.
೧೨. " ರಾಮಾಯಣದ ೭ ಕಾಂಡಗಳು.
೧೩. ಅಳಸಿಂಗರಾಚಾರ್ಯರ ಭಾಗವತದ ೧೨ ಸ್ಕಂದಗಳು.
೧೪. ಕಥಾಸಂಗ್ರಹ ೧. ೨. ೩. ಭಾಗಗಳು.
೧೫. ಭರತಖಂಡದ ಜೀವಜ್ಯೋತಿಗಳು.
೧೬. ನಗೆಗಡಲು (ನರಸಿಂಹಾಚಾರ್ಯರು)
೧೭. ಸತ್ಯರಾಜಾ ಪೂರ್ವದೇಶದ ಯಾತ್ರೆಗಳು (ಬಿ. ರಾಮರಾವ)
೧೮. ಮಾಧವ ಕರುಣಾವಿಲಾಸ (ಗಳಗನಾಥ)
೧೯. ರಾಜಶೇಖರ ಚರಿತ್ರೆ (ಬೇಲ್ಹಾವೆ ಸೋಮನಾಥಯ್ಯ)
೨೦. ನೀತಿ ಚಿಂತಾಮಣಿ ೧. ೨. ೩. ಭಾಗಗಳು.

೨೧. ಸ್ತ್ರೀಧರ್ಮನೀತಿ (ಪಂಡಿತಾರಮಾಬಾಯಿ)
೨೨. ಶ್ರೀರಾಮಾಶ್ವಮೇಧಸಾರ (ಪೂಜಾರ)
೨೩. ಅದ್ಭುತ ರಾಮಾಯಣ
೨೪. ರಾಜಾಮಲಯ ಸಿಂಹ (ಎಂ. ಎ. ಶ್ರೀನಿವಾಸಾಚಾರ್ಯ)
೨೫ ಭಾಗವತಾಮೃತ (ಗಳಗನಾಥ)
೨೬. ಆರ್ಯಧರ್ಮ ಪ್ರದೀಪ (ಎಚ್. ಚಿದಂಬರಯ್ಯ)
೨೭. ಭಕ್ತವಿಜಯ (ಸೀತಾರಾಮ ಶಾಸ್ತ್ರಿ)
೨೮. ಸಾವಿತ್ರೀ ಸತ್ಯವಾನ (ಕುರಡಿ)

## ೪. ಇತಿಹಾಸ.

೧. ವಿಜಯನಗರದ ಇತಿಹಾಸ
೨. ಮೈಸೂರ ಸಂಸ್ಥಾನದ ಚರಿತ್ರೆ
೩. ಆರ್ಯಕೀರ್ತಿ ೧. ೨. ಭಾಗಗಳು (ವಾಸುದೇವಯ್ಯ)
೪. ಕರ್ನಾಟಕ ಸಾಮ್ರಾಜ್ಯ (ರಾ. ಹ. ದೇಶಪಾಂಡೆ)
೫. ಆಂಗ್ಲೇಯ ಚರಿತ್ರಸಂಗ್ರಹ (ಚಂದ್ರಶೇಖರ ಶಾಸ್ತ್ರಿ)
೬. ಪಾಳಯಗಾರರು (ಎಂ. ಎಸ್. ಪುಟ್ಟಣ್ಣ)
೭. ಶಿವಾಜಿ (ರಾ. ಹ. ದೇಶಪಾಂಡೆ)
೮. ರಾಷ್ಟ್ರಸಭೆಯ ಇತಿಹಾಸ (ಭಾರದ್ವಾಜ)
೯. ದಕ್ಷಿಣ ಕನ್ನಡಾ ಜಿಲ್ಲೆಯ ಇತಿಹಾಸ
೧೦. ಕರ್ನಾಟಕ ಕೈಪಿಡಿ (ಭಾರದ್ವಾಜ)

## ೫. ಶಾಸ್ತ್ರ.

೧. ವನಸ್ಪತಿಶಾಸ್ತ್ರ (ಲಕ್ಕೂರ ಸುಬ್ಬರಾವ)
೨. ಖನಿಜಶಾಸ್ತ್ರ (ದಾಸಪ್ಪಾ)
೩. ಶಾರೀರಶಾಸ್ತ್ರ (ಕೆ. ದೇಶಿಕಾಚಾರಿ)
೪. ಗರ್ಭಿಣೀ ಶಿಶು ಸಂಗೋಪನ (ಬೋಧರಾಚಾರ್ಯ ಮಹಿಷಿ)

೫. ಮನಃಶಾಸ್ತ್ರ (ಎಸ್. ವೆಂಕೋಬರಾವ)
೬. ಪಾಶ್ಚಿಮಾತ್ಯದರ್ಶನ ಸಂಗ್ರಹ (ಕರ್ನಾಟಕ ಗ್ರಂಥಮಾಲೆ)
೭. ಆರ್ಯವಿದ್ಯಾದರ್ಶ (ಗು. ವೆ. ಕಿತ್ತೂರ)
೮. ಶಿಕ್ಷಣ ಮೀಮಾಂಸೆ (ಆಲೂರ ಮತ್ತು ಮಗದಾಲ)
೯. ಆರೋಗ್ಯಶಾಸ್ತ್ರ (ದೇಶಮುಖ)
೧೦. ಕರ್ನಾಟಕ ಕೈಪಿಡಿ (ಮೈಸೂರ ವಿಶ್ವವಿದ್ಯಾಲಯ)

## ೬. ಚರಿತ್ರೆ.

೧. ಕವಿಚರಿತ್ರೆ (ಎಸ್. ಜಿ. ನರಸಿಂಹಾಚಾರ್ಯ)
೨. ಗ್ಲ್ಯಾಡಸ್ಟನ್ನನ ಚರಿತ್ರೆ (ಹಳಕಟ್ಟಿ)
೩. ಪುರಾತನ ಗ್ರೀಕರ ಕಥೆಗಳು (ರಾಮಾನುಜ ಅಯ್ಯಂಗಾರ)
೪. ಅಶೋಕ (ಪೂಜಾರ)
೫. ಚರಿತ್ರಸಂಗ್ರಹ ೧. ೨. ಭಾಗಗಳು (ರಾ. ಹ. ದೇಶಪಾಂಡೆ)
೬. ಬಾಜೀರಾವ ಬಲ್ಲಾಳನ ಚರಿತ್ರೆ (ಅಮ್ಮಿನಭಾವಿ)
೭. ಅಕಬರ ಚರಿತ್ರೆ (ರಾ. ಹ. ದೇಶಪಾಂಡೆ)
೮. ಚಾಮರಾಜೇಂದ್ರ ಒಡೆಯರವರ ಚರಿತ್ರೆ (ಸಿಂಗ್ರಯ್ಯ)
೯. ಚೈತನ್ಯ ಚರಿತ್ರ
೧೦. ಮಹಾರಾಣಿ ಲಕ್ಷ್ಮೀಬಾಯಿ (ಕುರಡಿ)
೧೧. ಭಾರತಮಹಿಳಾ (ಬಿ. ವೆಂಕಟಾಚಾರ್ಯ)
೧೨. ವಿದುಷಿಯರಾದ ಭಾರತ ಲಲನೆಯರು (ಅವಕಾಶತೋಷಿಣಿ)
೧೩. ಅಹಲ್ಯಾಬಾಯಿ (ಬಿ. ವೆಂಕಟಾಚಾರ್ಯ)
೧೪. ರಾಮದಾಸ ಸ್ವಾಮಿಗಳ ಚರಿತ್ರೆ (ಗದಿಗೆಯ್ಯಾ ಹೊನ್ನಾಪುರ ಮಠ)
೧೫. ಗೋಖಲೆಯವರ ಚರಿತ್ರೆ (ಡಿ. ವಿ. ಗುಂಡಪ್ಪ)

## ೭. ನಾಟಕಗಳು.

೧. ಶಕುಂತಲೆ (ಚುರಮರಿ)
೨. ಮೃಚ್ಛಕಟಿಕ (ಮುಳಬಾಗಲ)

೩. ಚಂಡಕೌಶಿಕ (ಬಸಪ್ಪಶಾಸ್ತ್ರಿ)
೪. ವೇಣೀಸಂಹಾರ (ಮುಳಬಾಗಲ)
೫. ನಿರುಪಮಾ (ಎಸ್. ಶ್ರೀಕಂಠಶಾಸ್ತ್ರಿ)
೬. ಸಾವಿತ್ರಿ (ವೆಂಕಟರಮಣಯ್ಯ)
೭. ಮದಾಲಸಾ ಪರಿಣಯ } (ಕರ್ನಾಟಕ ಗ್ರಂಥಮಾಲೆ)
೮. ಶಿವಾಜಿಬಾಳು }
೯. ಸುಭದ್ರಾವಿಜಯ (ಬಿ. ರಾಮರಾವ್)
೧೦. ಶಿಕ್ಷಣಸಂಭ್ರಮ (ಹುಯಿಲಗೋಳ)
೧೧. ಪಾದುಕಾಪಟ್ಟಾಭಿಷೇಕ (ಗರುಡ)

## ೮. ಪ್ರಬಂಧಗಳು.

೧. ಭಗವದ್ಗೀತಾಸಾರ ವಿಚಾರ (ಮಹಾಭಾಗವತ)
೨. ಕರ್ನಾಟಕ ಗತವೈಭವ (ಆಲೂರ)
೩. ಧರ್ಮಪದ (ಅಶ್ವತ್ಥನಾರಾಯಣಶಾಸ್ತ್ರಿ)
೪. ನೀತಿಗಳ ನೆಲೆಗಟ್ಟು ಭಾಗ ೧. ೨. (ಚಿದಂಬರಯ್ಯ)



---

# ೫ನೆಯ ಅಧ್ಯಾಯ.

## ಸುಹೃತ್ಸಮಾಗಮಸುಖ.

**शोकारातिभयत्राणं प्रीतिविश्रंभभाजनम् ।**
**केन रत्नमिदं सृष्टं मित्रमित्यक्षरद्वयम् ॥**

ಶೋಕವನ್ನೂ ಶತ್ರುಗಳನ್ನೂ ನಾಶಮಾಡಿ ಭಯದ ನಿವಾರಣೆಯನ್ನು ಮಾಡುವಂಥ, ಪ್ರೀತಿ ವಿಶ್ವಾಸಗಳಿಗೆ ಪಾತ್ರವಾದ ಮಿತ್ರನೆಂಬೆರಡಕ್ಕರದ ರತ್ನವು ಯಾರಿಂದ ನಿರ್ಮಿಸಲ್ಪಟ್ಟಿರಬಹುದು?

ಈ ಜಗತ್ತಿನಲ್ಲಿ ಎಲ್ಲಕ್ಕೂ ಹೆಚ್ಚಿನ ಪುಣ್ಯವಂತನು ಯಾರೆಂದು ಪ್ರಶ್ನೆ ಮಾಡಿದರೆ ಮೇಲೆ ವರ್ಣಿಸಿದ ಗುಣಗಳಿಂದ ಯುಕ್ತನಾದ ಮಿತ್ರನಿದ್ದವನೆಂದು ಉತ್ತರ ಕೊಟ್ಟರೆ ತಪ್ಪಾಗದು.

"ಇಹಸುಖದೊಳಗಿಂದ ಸುಹೃತ್ಸಮಾಗಮಸುಖವನ್ನು ತೆಗೆದು ಹಾಕಲೆಳಸುವವರು ಪೃಥ್ವಿಯಿಂದ ಸೂರ್ಯನನ್ನು ಮರೆಮಾಡಲಿಚ್ಛಿಸುವಂತೆ ತೋರುತ್ತದೆ. ಅಮರರು ಮರ್ತ್ಯರಿಗೆ ಅದಕ್ಕಿಂತ ಹೆಚ್ಚು ಸುಖಪ್ರದವಾದ ವಸ್ತುವನ್ನೇ ಕೊಡಲಿಲ್ಲ." — **ಸಿಸಿರೊ.**

"ಜನರಲ್ಲಿ ಬೇರೆ ಬೇರೆ ವಸ್ತುಗಳನ್ನು ಸಂಪಾದಿಸುವ ಮಹತ್ವಾಕಾಂಕ್ಷೆಯು ಕಂಡುಬರುವುದು. ಕೆಲವರು ದ್ರವ್ಯಗಳಿಸಬೇಕೆಂದೂ, ಮತ್ತೆ ಕೆಲವರು ಬಹುಮಾನಗಳನ್ನು ದೊರಕಿಸಬೇಕೆಂದೂ, ಉಳಿದವರು ವೈಭವಶಾಲಿಗಳಾಗಬೇಕೆಂದೂ ಅಪೇಕ್ಷಿಸುತ್ತಾರೆ. ನನಗೆ ಮಾತ್ರ ಅವೆಲ್ಲವುಗಳಿಂದ ಏನೂ ಆನಂದವಾಗದು. ಆದರೆ ಸುಹೃತ್ಸಮಾಗಮವೊಂದು ದೊರಕಿದರೆ ನನ್ನ ಸುಖಕ್ಕೆ ಎಣೆಯೇ ಇಲ್ಲದಂತಾಗುವುದು."

— **ಅರಿಸ್ಟಾಟಲ್.**

"ಒಂದೊಂದು ಪದಾರ್ಥದ ಮಹತ್ವದ ವಿಷಯವಾಗಿ ಒಬ್ಬೊಬ್ಬರ ಮತವು ಒಂದೊಂದು ರೀತಿಯಾಗಿರುವುದು. ಆದರೆ ಮಿತ್ರತ್ವದ ವಿಷಯ-ವಾಗಿ ಮತಭೇಧವಿದ್ದಂತೆ ಕಂಡುಬರುವುದಿಲ್ಲ; ಸರ್ವರ ಮತಗಳಲ್ಲಿ ಐಕ್ಯವಿರುವುದು. ಐಹಿಕ ಸುಖಸಾಧನಗಳಲ್ಲಿ ಮಿತ್ರತ್ವವು ಶ್ರೇಷ್ಠ-ವಾದುದು." — **ಸಿಸಿರೊ.**

ನಮ್ಮ ಹತ್ತರ ಕೆಲವು ಕಾಲ ಮಾತ್ರ ಇರುವ ಕುದುರೆಯನ್ನು ಕೊಳ್ಳಬೇಕಾದರೆ ಅದರ ಸುಳಿಯನ್ನೂ ಲಕ್ಷಣವನ್ನೂ ನಡಿಗೆಯನ್ನೂ ಜಾತಿಯನ್ನೂ ಪರೀಕ್ಷಿಸುತ್ತೇವೆ. ಆದರೆ ಯಾರ ಸಹವಾಸದಿಂದ ನಮಗೆ ಶಾಶ್ವತವಾದ ಹಿತಾಹಿತಗಳಾಗುವುವೊ ಅಂಥ ಮಿತ್ರರನ್ನು ಆರಿಸುವಾಗ ಇಷ್ಟು ಲಕ್ಷವನ್ನು ಸಹ ಪೂರೈಸುವುದಿಲ್ಲೆಂಬುದು ಆಶ್ಚರ್ಯ-ಕರವು. ಗುಣಗಳನ್ನು ಪರೀಕ್ಷಿಸದೆ ಸಲಿಗೆ ಬಳಸುವುದು ಸರಿಯಲ್ಲ.

ಸದ್ವರ್ತನದ ಪೋಷಣೆಗೂ ಸುಖದ ಅಭಿವೃದ್ಧಿಗೂ ಸದ್ಗುಣಿಗಳಾದ ಸ್ನೇಹಿತರ ಸಹವಾಸವು ಅವಶ್ಯವಾದುದು. ನೀಚರ ಗೆಳೆತನದಿಂದ ಎಷ್ಟು ಹಾನಿಯಾಗುವುದೆಂಬುದನ್ನು ಏನು ಹೇಳುವುದು? ಆದುದರಿಂದ ವಿಶೇಷ ಪರಿಚಯವಿಲ್ಲದವರ ಕೂಡ ಒಮ್ಮೆಲೆ ಸಲಿಗೆ ಮಾಡಕೂಡದು. ಇನ್ನು ಪ್ರತಿಯೊಬ್ಬರ ಕೂಡ ಸೌಜನ್ಯದಿಂದ ವರ್ತಿಸುವುದು ಲೇಸು. ವ್ಯವ-ಸಾಯಬಂಧುಗಳ ಕೂಡಾಗಲಿ, ನೆರೆಹೊರೆಯವರ ಕೂಡಾಗಲಿ ಪ್ರೀತಿ-ಯಿಂದಿರುವುದು ಹಿತಕರವು.

ಮಿತ್ರನಲ್ಲಿ ಅವಶ್ಯವಾಗಿರತಕ್ಕ ಗುಣಗಳು ಯಾವುವೆಂದು ಪರೀಕ್ಷಿ-ಸಿದರೆ ಸಚ್ಛೀಲ, ಔದಾರ್ಯ, ಶೌರ್ಯ, ಸುಖದುಃಖಗಳಲ್ಲಿ ಸಮಾನ ವರ್ತನ, ದಯೆ, ಸತ್ಯ ಪ್ರೀತಿ, ಇವೇ ಎಂದು ಕಂಡುಬರುವುದು.

**शुचित्वं त्यागिता शौर्य सामान्यं सुखदुःखयोः ।**
**दाक्षिण्यमनुरक्तिश्च सत्यता च सुहृद्गुणाः** —हितोपदेश.

ಇನ್ನು ಸನ್ಮಿತ್ರರ ಲಕ್ಷಣವೇನೆಂಬುದನ್ನು ನೋಡುವ ಭರ್ತೃ-ಹರಿಯು ನೀತಿಶತಕದೊಳಗಿನ ಒಂದು ಶ್ಲೋಕದಲ್ಲಿ ಅದನ್ನು ಸ್ಫುಟವಾಗಿ ವಿವರಿಸಿದ್ದಾನೆ.

ಮತ್ತೇಭವಿಕ್ರೀಡಿತ.

ದುರಿತದಕೃತ್ಯದಿಂ ತೊಲಗಿಸಲ್ ಹಿತಕಾರ್ಯದೆ ಯೋಜಿಸಲ್ಗುಣೋ ।
ತ್ಕರವ ವಿಕಾಸಿಸಲ್ಮರಿಸತಕ್ಕುದ ತಾಂ ಮರಿಸಲ್ವಿಪತ್ತಿನೊಳ್ ॥
ಪೊರೆಯಲುಮೀಯಲುಂ ಸಮಯದೊಳ್ಪಿರೆದಿರ್ದಪನಾವನಾ ಮಹಾ ।
ಪುರುಷನೆ ಮಿತ್ರನೆಂದುಸಿರ್ದಪರ್ನಯ ಶಾಸ್ತ್ರವ ಬಲ್ಲ ಸಜ್ಜನರ್ ॥

ಜಗತ್ತಿನಲ್ಲಿ ಸ್ವಾರ್ಥಬುದ್ಧಿಯೂ ಕೃತಘ್ನತೆಯೂ ತುಂಬಿಹೋಗಿವೆಯೆಂದು ಕೆಲವರು ಹೇಳುತ್ತಾರೆ. ಆದರೆ ಅವುಗಳ ಅನುಭವವು ಸ್ವಲ್ಪ ಜನರಿಗೆ ಮಾತ್ರ ಒದಗುತ್ತದೆ. ಇಡೀ ಮಾನವ ಕುಟುಂಬಕ್ಕೆ ಸೃಷ್ಟಿಕರ್ತನಾದ ದೇವರು ತಂದೆಯಾದುದರಿಂದ ನಾವೆಲ್ಲರೂ ಅಣ್ಣ-ತಮ್ಮಂದಿರಾಗಲಿಲ್ಲವೋ? ಅದುಕಾರಣ ನಾವು ಒಬ್ಬರಕೂಡೊಬ್ಬರು ಭ್ರಾತೃಭಾವದಿಂದಿದ್ದು ಸ್ನೇಹವನ್ನು ಪರಸ್ಪರವಾಗಿ ಬೆಳಿಸತಕ್ಕದ್ದು.

"ಜಗತ್ತಿನಲ್ಲಿ ನಿಜವಾದ ಮಿತ್ರರು ಸಿಗುವುದು ಪ್ರಾಯಶಃ ಅಸಂಭವ ಆದುದರಿಂದ ಪರಲೋಕದಲ್ಲಿ ನಮ್ಮನ್ನು ಪ್ರೀತಿಸುವ ಜೀವಾತ್ಮಗಳಿರುತ್ತವೆಂಬ ಕಲ್ಪನೆಯಿಂದ ನಮಗೆ ಸ್ವಲ್ಪ ಸಮಾಧಾನವೆನಿಸುತ್ತದೆ"ಂಬ ಇಮರ್ಸನ್ನನ ಅಭಿಪ್ರಾಯವು ಸರ್ವಸಮ್ಮತವಲ್ಲ.

"ಏಕಾಂತವಾಸದಲ್ಲಿ ಆನಂದ ಹೊಂದುವವರು ಶ್ವಾಪದಗಳಂತೆ ಕ್ರೂರರಿರಬೇಕು; ಇಲ್ಲವೆ ಋಷಿಗಳಂತೆ ಮುಮುಕ್ಷುಗಳಾಗಿರಬೇಕು" —

— **ಅರಿಸ್ಟಾಟಲ್.**

"ಜಗತ್ತಿನಲ್ಲಿ ನರರಾಕ್ಷಸರಾಗಲಿ ಮುಮುಕ್ಷುಗಳಾಗಲಿ ಮಿತ್ರರನ್ನು ಅಪೇಕ್ಷಿಸುವುದಿಲ್ಲ. ಕೊಲೆಸುಲಿಗೆಗಳಿಂದ ಉಪಜೀವಿಸುವವರು ನರರಾಕ್ಷಸರು. ಈ ಜಗತ್ತಿನ ಆನಂದವು ಕ್ಷಣಿಕವೆಂಬುದನ್ನು ಮನಗಂಡು ಪ್ರಾಪಂಚಿಕ ಸುಖವನ್ನು ತ್ಯಜಿಸಿ ಬ್ರಹ್ಮಾನಂದವನ್ನು ಪಡೆಯಲಿಚ್ಛಿಸುವವರು ಮುಮುಕ್ಷುಗಳು. ಜಗತ್ತಿನಲ್ಲಿ ಅಂಥ ನರರಾಕ್ಷಸರಾಗಲಿ, ಮುಮುಕ್ಷುಗಳಾಗಲಿ ಅತಿಸ್ವಲ್ಪ ಜನರು. ಉಳಿದ ಪ್ರಾಪಂಚಿಕರೆಲ್ಲರೂ ಮಿತ್ರರ ಸಮಾಗಮವನ್ನು ಹಾರೈಸುತ್ತಾರೆ."

**ಬೇಕನ್.**

ನಮ್ಮ ಸುಖದುಃಖಗಳನ್ನೂ ಮನೋರಥಗಳನ್ನೂ ತಿಳಿಸಿ ದುಃಖ-ನಿವಾರಣೆಯನ್ನು ಮಾಡಿಕೊಳ್ಳುವುದೂ ನಮ್ಮ ಇಚ್ಛೆಯು ಕೈಗೂಡುವಂತೆ ಉಪಾಯಗಳನ್ನು ಯೋಜಿಸುವುದೂ ಮಿತ್ರನ ಸಹಾಯವಿಲ್ಲದೆ ಸಾಧಿಸು-ವುದು ಕಷ್ಟ. ಆದುದರಿಂದ ಐಶ್ವರ್ಯಬಲಾನ್ವಿತರಾದ ಸಾರ್ವಭೌಮರು ಸಹ ಮಿತ್ರರನ್ನಪೇಕ್ಷಿಸುತ್ತಾರೆ.

ಉಪದೇಶದಿಂದ ಸ್ನೇಹಿತರನ್ನು ದುರ್ಮಾರ್ಗದಿಂದ ನಿವರ್ತಿಸಿ ಸನ್ಮಾರ್ಗದಲ್ಲಿ ಪ್ರವರ್ತಿಸುವುದೂ ಕಠಿಣ ಪ್ರಸಂಗಗಳಲ್ಲಿ ಧೈರ್ಯ ಕೊಟ್ಟು ಹಂಚಿಕೆಯಿಂದ ಅವರನ್ನು ಪಾರುಮಾಡುವುದೂ ಮಿತ್ರರ ಕರ್ತವ್ಯವು. ಏನಾದರೂ ಘೋರ ಪ್ರಸಂಗ ಒದಗಿದಾಗ ಬುದ್ಧಿಭ್ರಮವಾಗಿ ಮುಂದೆ ಉಪಾಯವೇ ತೋಚದ ಹಾಗೆ ಆದಾಗ ಮಿತ್ರರ ಪ್ರೋತ್ಸಾಹದಿಂದ ನಮಗೆ ಧೈರ್ಯವುಂಟಾಗುವುದು; ಅವರ ಹಿತೋಪದೇಶದಂತೆ ವರ್ತಿಸಿದರೆ ಚಿಂತೆಯು ಹಿಂಗುವುದು; ಅವರ ನೆರವಿನಿಂದ ವಿಘ್ನಗಳೆಲ್ಲ ಬಯಲಾಗು-ವುವು. ಅವರ ಕೂಡ ನಿರ್ಬಂಧವಿಲ್ಲದೆ ವಾದವಿವಾದ ಮಾಡಬಹು-ದಾದುದರಿಂದ ಕಲ್ಪನಾತರಂಗಗಳು ಅವ್ಯಾಹತವಾಗಿ ನಡೆದು ನಮ್ಮ ವಿಚಾರಪದ್ಧತಿಯು ಸುಧಾರಿಸುವುದು. ಏಕಾಂತದಲ್ಲಿ ಇಡೀ ದಿನ ಕುಳಿತು ಮನನ ಮಾಡಿದಷ್ಟು ಜ್ಞಾನವು ಮಿತ್ರನ ಅರಗಳಿಗೆಯ ವಿವೇಚನ-ದಿಂದ ಲಭಿಸಬಹುದು. ಸ್ನೇಹಭಾವದ ಆವಶ್ಯಕತೆಯೇನೆಂಬುವುದು ನಾವು ಯಾವ ಕೆಲಸಗಳನ್ನು ಮಿತ್ರರ ನೆರವಿಲ್ಲದೆ ನೆರವೇರಿಸಬಹುದೆಂಬು-ದನ್ನು ಆಲೋಚಿಸಿದರೆ ತಾನೇ ಗೊತ್ತಾಗುವುದು. ಗೆಳೆಯನು ಆತ್ಮದ ಪ್ರತಿರೂಪವೆಂದು ಪ್ರಾಚೀನರು ತಿಳಿಯುತ್ತಿದ್ದರು. ಎಷ್ಟೋ ಸಾರೆ ನಮಗೆ ಮಾಡಲಸಾಧ್ಯವಾದ ಕಾರ್ಯಗಳು ಗೆಳೆಯರಿಂದ ಸುಲಭವಾಗಿ ಜರುಗಿಸಲ್ಪಡುವುವು. ಈ ಜಗತ್ತಿನಲ್ಲಿ ಪ್ರತಿಯೊಬ್ಬನ ಆಯುರ್ಮರ್ಯಾ-ದೆಯು ನಿಯಮಿತವಾಗಿರುವುದರಿಂದ ತಾವು ಕೈಕೊಂಡ ಕಾರ್ಯಗಳನ್ನು ಕೊನೆಗಾಣಿಸುವ ಭಾರವನ್ನು ತಮ್ಮ ಮರಣದ ತರುವಾಯ ಯಾರಾದರೂ ವಹಿಸಿದರೆ ತಾವು ಈ ಲೋಕಯಾತ್ರೆಯನ್ನು ಸಮಾಧಾನದಿಂದ ಮುಗಿಸ-ಬಹುದೆಂದು ಪರೋಪಕಾರಿಗಳಾದವರಿಗೆ ತೋರುತ್ತದೆ. ಅಂಥ ಕಾರ್ಯ-

ಗಳನ್ನು ನೆರವೇರಿಸುವ ಭಾರವನ್ನು ಗೆಳೆಯರಲ್ಲದೆ ಯಾರು ವಹಿಸುವರು? ನಾವು ಎಲ್ಲ ಕಡೆಯಲ್ಲಿಯೂ ಏಕ ಕಾಲಕ್ಕಿದ್ದು ನಮ್ಮ ಕೆಲಸಗಳನ್ನು ಕೊನೆಗಾಣಿಸುವುದು ಅಸಂಭವವು. ಆದರೆ ಆ ಸ್ಥಳಗಳಲ್ಲಿ ಮಿತ್ರರಿದ್ದರೆ ನಾವೇ ಅಲ್ಲಿದ್ದಂತೆ ಆ ಕಾರ್ಯಗಳು ನೆರವೇರುವುವು. ಮರ್ಯಾದೆಗೆ ಭಂಗ ಬಾರದಂತೆ ಹೇಳಲಿಕ್ಕಾಗದ ಮಾತುಗಳೂ ಮಾಡಲಿಕ್ಕಾಗದ ಕೆಲಸಗಳೂ ಎಷ್ಟಿರುವುವು? ನಮ್ಮ ಸದ್ಗುಣಗಳನ್ನೂ ನಾವು ಸಾಧಿಸಿದ ಸತ್ಕಾರ್ಯಗಳನ್ನೂ ವರ್ಣಿಸಲಿಕ್ಕೆ (ಆತ್ಮಪೌರುಷವಂತೂ ಒತ್ತಿಟ್ಟಿಗಿರಲಿ) ಆತಂಕವೆನಿಸುವುದಿಲ್ಲವೋ? ನಮ್ಮ ದೆಸೆಯಿಂದ ಎರಡನೆಯವರಲ್ಲಿ ಯಾಚನೆ ಮಾಡುವುದಾಗಲಿ ವಿಜ್ಞಾಪನೆ ಮಾಡುವುದಾಗಲಿ ನಮ್ಮಿಂದಾಗದು. ಅಂಥ ಕಾರ್ಯವನ್ನು ಸ್ನೇಹಿತರು ಸುಲಭವಾಗಿ ಪೂರ್ತಿಗೊಳಿಸುವರು. ಅನ್ಯೋನ್ಯಸಂಬಂಧಗಳನ್ನು ಮರೆತು ವರ್ತಿಸುವುದು ಪ್ರಾಪಂಚಿಕರಿಗೆ ಅಸಾಧ್ಯವು. ಪುತ್ರರ ಕೂಡ ಪಿತನಂತೆ, ಪತ್ನಿಯ ಕೂಡ ಪತಿಯಂತೆ, ಹಗೆಗಳ ಕೂಡ ಶತ್ರುವಿನಂತೆ ವರ್ತಿಸಬೇಕಾಗುವುದು ಆದರೆ ಗೆಳೆಯನ ಕೂಡ ಈ ಪ್ರಕಾರ ನಿರ್ಬಂಧದಿಂದ ನಡೆಯುವ ಕಾರಣವಿಲ್ಲ.

ಮಿತ್ರರ ಕೂಡ ಒಣಹರಟೆಯನ್ನಾಗಲಿ ನಿರುಪಯುಕ್ತ ವಿಷಯಗಳ ವಾದವನ್ನಾಗಲಿ ಬೆಳೆಸಕೂಡದು; ಪರನಿಂದೆಯಂತೂ ಅತಿವರ್ಜ್ಯವು. "ಗೆಳೆಯರ ಸಮಾಗಮದಿಂದ ಆನಂದ ಹೊಂದುವದಿದ್ದರೆ ಅವರಲ್ಲಿಯ ಸದ್ಗುಣಗಳನ್ನು ಮನಃಪೂರ್ವಕವಾಗಿ ಮನನ ಮಾಡಿ ಅವರಂತೆ ನಾವಾದರೂ ಸದ್ಗುಣಿಗಳಾಗಬೇಕೆಂದು ಹವಣಿಸತಕ್ಕದ್ದು. ನಮ್ಮ ಪ್ರಿಯ ಜನರ ಉದಾಹರಣೆಯನ್ನು ಎದುರಿಗಿಟ್ಟುಕೊಂಡು ಅದರಂತೆ ವರ್ತಿಸುವುದರಿಂದಾಗುವ ಆನಂದವು ಮಿಗಿಲಾದುದು."

—**ಮಾರ್ಕಸ್ ಅರೇಲಿಯಸ್.**

ಮೇಲೆ ಉಲ್ಲೇಖಿಸಿದಂತೆ ವರ್ತಿಸುವುದು ಕಠಿಣವಾದರೂ ಮಂಗಲಕರವಾಗಿರುವುದು. ಎಷ್ಟೋ ಜನರಿಗೆ ಗೆಳೆಯರ ಬಾಹ್ಯಾಂಗಗಳ ಅರಿವು ಇರುವುದೇ ಹೊರತು ಅವರ ಅಂತರಂಗದ ಜ್ಞಾನವು ಅವರಿಗಿರುವುದಿಲ್ಲ.

ಪರರ ಪ್ರೀತಿಯನ್ನು ಸಂಪಾದಿಸುವ ಕಾಲಕ್ಕೆ ಎಷ್ಟು ಎಚ್ಚರದಿಂದ ನಡೆಯುತ್ತೇವೋ ಅಷ್ಟೇ ಜಾಗ್ರತೆಯಿಂದ ಅದನ್ನು ಕಾಯ್ದುಕೊಳ್ಳುವುದು ಭೂಷಣವು. ರಾಜಮಾರ್ಗವಲ್ಲದ ದಾರಿಯ ಮೇಲೆ ಹುಲ್ಲೂ ಮುಳ್ಳೂ ಕಂಟಯೂ ಬೆಳೆದು ಅದರ ಗುರುತು ಸಹ ಇಲ್ಲದಂತಾಗುವಂತೆ ಮಿತ್ರ ನಿಗೆ ಮೇಲಿಂದ ಮೇಲೆ ಭೇಟಿಯಾಗದಿದ್ದರೆ ಸಂಪಾದಿಸಿದ ಪ್ರೀತಿಗೆ ನಾವು ಎರವಾಗಬಹುದು. ಈ ಹೊತ್ತು ಇವನ ಕೂಡ, ನಾಳೆ ಮತ್ತೊಬ್ಬನ ಕೂಡ, ಎಂದು ಚಂಚಲಚಿತ್ತರಾಗಿ ಗೆಳೆತನವನ್ನು ಬೆಳೆಸಕೂಡದು.

ಮಿತ್ರನಿಗೆ ಅಸಮಾಧಾನವಾಗುವಂತಾಗಲಿ, ಅವಮಾನವಾಗುವಂ- ತಾಗಲಿ ವರ್ತಿಸಕೂಡದು. ಎಷ್ಟೋ ಜನರಿಗೆ ತಮ್ಮ ಸ್ನೇಹಿತರ ಯೋಗ್ಯ- ತೆಯು ಅವರ ಅವತಾರವು ಮುಗಿಯುವ ವರೆಗೆ ಗೊತ್ತಾಗುವುದಿಲ್ಲ. ಅಂಥ ಗೆಳೆಯರಿಗೆ ಹಿಂದಿನಿಂದ ಎಷ್ಟು ಬಹುಮಾನವನ್ನು ಮಾಡಿದರೂ ವ್ಯರ್ಥವೇ. "ಮೃತಮಿತ್ರರ ಸ್ಮಾರಕದ ಬಗ್ಗೆ ಸುಂದರವಾದ ಮಂದಿರ ಗಳನ್ನು ಕಟ್ಟಿಸುವುದರಿಂದ ಸಾರ್ಥಕ್ಯವೇನೂ ಇಲ್ಲ."

"ನಾವು ತೀರಿಕೊಂಡ ಗೆಳೆಯನ ಚಿತೆಯ ಹತ್ತರ ನಿಂತು ಅಗಲಿ ಹೋದ ಮಿತ್ರನ ಸಹವಾಸ ಸುಖವನ್ನು ಸ್ಮರಣೆಗೆ ತಂದು ಎಷ್ಟು ದುಃಖಿ- ಸಿದರೂ ವ್ಯರ್ಥ. ಒಮ್ಮೆ ನಿಂತುಹೋದ ಮಿತ್ರನ ಹೃದಯದ ಕ್ರಿಯೆ- ಯು ಪುನಃ ಪ್ರಾರಂಭವಾಗುವುದು ಪ್ರಾಯಶಃ ಅಶಕ್ಯವೆಂಬುದು ತಿಳಿದ ಮೇಲೆ ಅವನಿಗೆ ನಾವು ಕೊಟ್ಟ ವ್ಯಥೆಯನ್ನು ಮರೆಯಿಸುವಂತೆ ಇನ್ನು- ಮುಂದೆ ಅವನಿಗೆ ಸುಖ ಕೊಡುವುದು ಅಸಂಭವವೆಂದು ಗೊತ್ತಾದ ಮೇಲಂತೂ ನಾವು ಎಷ್ಟು ಪರಿಯಾಗಿ ಮಿಡುಕಿದಿರೂ ಏನು ಉಪ- ಯೋಗ?" —**ರಸ್ಕಿನ್.**

"ಮಿತ್ರನು ದೂರದಲ್ಲಿದ್ದರೂ ಸಮೀಪದಲ್ಲಿಯೇ ಇದ್ದಂತೆ, ದರಿದ್ರನಿ- ದ್ದರೂ ಸಿರಿವಂತನಿದ್ದಂತೆ, ಅಶಕ್ತನಿದ್ದರೂ ಸಶಕ್ತನಿದ್ದಂತೆ, ಮೃತನಾಗಿ- ದ್ದರೂ ಜೀವಂತನಿದ್ದಂತೆ ಭಾಸವಾಗುತ್ತದೆ." —**ಸಿಸಿರೊ.**

ಮೇಲೆ ಹೇಳಿದ ಮಾತಿನ ಸತ್ಯಾಂಶವು ಪ್ರಥಮ ದರ್ಶನಕ್ಕೆ ಗೋಚರ- ವಾಗದಿದ್ದರೂ ಸಿಸಿರೋನು ಹೇಳಿದ ಸ್ವಾನುಭವದಿಂದ ಅದರ ಮನ-

ವರಿಕೆಯು ಎಲ್ಲರಿಗೂ ಆಗದೆ ಇರದು. "ನನ್ನ ಪ್ರಿಯ ಮಿತ್ರನಾದ ಸಿಪಿಯೋನು ತೀರಿಹೋಗಿದ್ದರೂ ಅವನು ಜೀವದಿಂದಿದ್ದಂತೆ ನನಗೆ ಭಾಸವಾಗುತ್ತದೆ. ಯಾಕೆಂದರೆ ಅವನ ಸದ್ಗುಣ ಸೌಜನ್ಯ ಸುಜ್ಞಾನಗಳ ಸ್ಮರಣೆಯು ಮೇಲಿಂದ ಮೇಲೆ ಆಗುವುದರಿಂದ ಅವನು ಜೀವದಿಂದಿರುವನೆಂದು ಭಾವಿಸುವೆನು ಸಿಪಿಯೋನ ಸ್ನೇಹವು ಎಷ್ಟು ಅಮೌಲ್ಯವಾಗಿರುವುದೆಂಬುದನ್ನು ಅರಿತದ್ದರಿಂದಲೇ ನಾನು ಗಳಿಸಿದ ಸನ್ಮಾನ ಸಂಪತ್ತುಗಳು ಅತಿಕ್ಷುಲ್ಲಕವೆಂದು ನಿರ್ಣಯಿಸಿದ್ದೇನೆ."

ಸಂಪತ್ತಿಗೆ ಮೋಹಿಸಿ ಗೆಳೆಯರನ್ನು ಆರಿಸದೆ ಅವರ ಗುಣಗಳಿಗೆ ಮೆಚ್ಚಿ ಮಿತ್ರತ್ವವನ್ನು ಬೆಳೆಸುವುದರಿಂದ ಅವರು ನಿರಂತರ ನಮ್ಮ ಸನ್ನಿಧಾನದಲ್ಲಿಯೇ ಇದ್ದಂತಾಗುವುದು. ಮತ್ತು ಅವರು ಇಹಲೋಕಯಾತ್ರೆಯನ್ನು ಮುಗಿಸಿ ಹೊರಟುಹೋದರೂ ಅವರ ಸ್ನೇಹದ ಸ್ಮರಣೆಯು ಶಾಶ್ವತವಾಗಿ ಉಳಿಯದೆ ಇರದು.

---

# ೬ನೆಯ ಅಧ್ಯಾಯ.

---

## ವೇಳೆಯ ಬೆಲೆಯು.

**कालः सुप्तेषु जागर्ति कालो हि दुरतिक्रमः ।**
**कालः सर्वेषु भूतेषु चरत्यविधृतः समः ॥** —महाभारत.

(ಎಲ್ಲರೂ ನಿದ್ರಿತರಾದರೂ ಕಾಲವು ಜಾಗ್ರತವಾಗಿರುವುದು ಅದನ್ನು ದಾಟಿ ಹೋಗುವುದು ಯಾರಿಂದಲೂ ಆಗದು. ಕಾಲವು ಎಲ್ಲ ಪ್ರಾಣಿಗಳ ಕೂಡ ಒಂದೇ ವಿಧದಿಂದ ವರ್ತಿಸುತ್ತದೆ.)

**कालो न यातो वयमेव याताः ॥** —भर्तृहरि.

(ಕಾಲವು ಹೋಗಿಲ್ಲ; ನಾವೇ ಹಣ್ಣಾಗಿಹೋದೆವು.)

ಎಲ್ಲ ಸುಖಸಾಧನಗಳ ಮಹತ್ವವು ವೇಳೆಯ ಮೇಲೆ ಅವಲಂಬಿಸಿಯಿದೆ. ಮಿತ್ರ, ಗ್ರಂಥ, ಆರೋಗ್ಯ, ಪ್ರವಾಸ, ಗೃಹ ಮೊದಲಾದುವುಗಳ ಉಪಭೋಗವನ್ನು ತೆಗೆದುಕೊಳ್ಳಲಿಕ್ಕೆ ವೇಳೆಯು ಬೇಕು. ಅದು ಇಲ್ಲದಿದ್ದರೆ ಅವೆಲ್ಲವುಗಳ ಉಪಯೋಗವೇನು? ವೇಳೆಯೇ ಹಣವೆಂದು ಕೆಲವರು ಅನ್ನುತ್ತಾರೆ. ಆದರೆ ವೇಳೆಯು ಹಣಕ್ಕಿಂತ ಹೆಚ್ಚು ಬೆಲೆಯುಳ್ಳದ್ದೆಂದು ಧಾರಳವಾಗಿ ಹೇಳಬಹುದು. ವೇಳೆಯು ಪ್ರಾಣವೆಂದರೂ ಅಡ್ಡಿಯಿಲ್ಲ. ಹೀಗಿದ್ದರೂ ಎಷ್ಟೋ ಜನರು ಪ್ರಾಣವನ್ನು ರಕ್ಷಿಸಿಕೊಳ್ಳಲಿಕ್ಕೆ ಅತ್ಯಗಾಧವಾದ ಸಾಹಸಗಳನ್ನು ಮಾಡುವರೇ ಹೊರತು ವೇಳೆಯು ವ್ಯರ್ಥ ಹೋಗದಂತೆ ಎಚ್ಚರಪಡರು.

"ಮುತ್ತಿಗಿಂತಲೂ ಹೊತ್ತು ಉತ್ತಮ ।
ಮುತ್ತುಹೋದರೆ ಮತ್ತೆಬಪ್ಪುದು ।
ಹೊತ್ತುಹೋದರೆ ಮತ್ತೆಬಾರದು ॥"

"ವೇಳೆಯು ವ್ಯರ್ಥಹೋದರೆ ಜ್ಞಾನಿಗಳಿಗೆ ಬಹಳ ದುಃಖವಾಗುವುದು" ಎಂದು ಡ್ಯಾಂಟಿಯು ಹೇಳಿದ್ದಾನೆ. ಆದರೆ ನಾವು ಯಾವಾಗಲೂ ಗಾಣದ ಎತ್ತಿನಂತೆ ಸುತ್ತುತ್ತಿರಬೇಕೆಂತಲ್ಲ. ವೇಳೆಯನ್ನು ಯೋಗ್ಯವಾದ ಉಪಭೋಗಗಳಲ್ಲಿಯೂ ಶಕ್ತಿವರ್ಧಕವಾದ ಆಟಗಳ-

ಲ್ಲಿಯೂ ಇಷ್ಟಮಿತ್ರರ ಸಹವಾಸದಲ್ಲಿಯೂ ಕುಟುಂಬದ ಜನರ ಸಮಾ-ಗಮದಲ್ಲಿಯೂ ದೇವರ ಭಕ್ತಿಯಲ್ಲಿಯೂ ಕಳೆಯುವುದು ಸಹ ವೇಳೆಯ ಸದುಪಯೋಗವೇ ಸರಿ. ಆಟಗಳನ್ನಾಡುವುದರಿಂದ ಶರೀರವು ನೀರೋ-ಗಿಯಾಗಿರುವುದಲ್ಲದೆ ಸ್ನಾಯುಗಳು ಬಲಪಡುತ್ತವೆ. ತಕ್ಕ ವ್ಯಾಯಾಮ ದಿಂದ ಮನಸ್ಸಿಗೆ ಬಲವೂ ಉತ್ಸಾಹವೂ ಉಂಟಾಗುತ್ತವೆ.

ಅವಶ್ಯವಾದ ಕೆಲಸಗಳನ್ನು ಮಾಡಲಿಕ್ಕೆ ತಮಗೆ ಹೊತ್ತೇ ಸಾಲು-ವುದಿಲ್ಲವೆಂದು ಸೋಮಾರಿಗಳು ಗುಣುಗುಟ್ಟುತ್ತಾರೆ. ನಿಜವಾಗಿ ನೋ-ಡಲು, ಅಂತಹವರಿಗೆ ವೇಳೆಯ ಸದುಪಯೋಗವೇ ಗೊತ್ತಿರುವುದಿಲ್ಲ-ವೆಂದು ಕಂಡುಬರುವುದು. ನಾವು ಏನಾದರೊಂದು ಕಾರ್ಯವನ್ನು ಮಾಡಬೇಕೆಂದು ಇಚ್ಛಿಸಿದರೆ ವೇಳೆಯನ್ನು ಹೇಗಾದರೂ ಉಳಿಸ-ಬಹುದು. ಇದರ ಮೇಲಿಂದ ಉದ್ಯೋಗ ಮಾಡುವವನಿಗೆ ವೇಳೆಯ ಕೊರತೆಯು ಎಂದೂ ಆಗುವುದಿಲ್ಲವೆಂಬ ಮಾತು ವಿಶದವಾಗುತ್ತದೆ. ವಿಶ್ರಾಂತಿಯಿಂದ ಕೆಲಸಗಳನ್ನು ಮಾಡಲಿಕ್ಕೆ ಉತ್ಸುಕತೆಯುಂಟಾಗುತ್ತ-ದೆಂಬ ಮಾತು ನಿರ್ವಿವಾದವು. ಆದಕಾರಣ ಅಂತಹ ವಿಶ್ರಾಂತಿಯ ವೇಳೆಯನ್ನು ಸೋಮಾರಿತನದಲ್ಲಿ ಕಳೆಯದಂತೆ ನಾವು ಎಚ್ಚರ ಪಡ-ಬೇಕು.

"ವೇಳೆಯು ಕುದುರೆಯಂತೆ ಬೇರೆ ಬೇರೆ ನಡಿಗೆಗಳನ್ನು ನಡೆಯ ಬಲ್ಲುದು. ಅದು ಕೆಲವರ ಸಂಗಡ ಪೂರ್ಣವೇಗದಿಂದ, ಕೆಲವರ ಸಂಗಡ ಸಾದಾ ಓಟದಿಂದ, ಮತ್ತೆ ಕೆಲವರ ಸಂಗಡ ಸ್ವಾಭಾವಿಕ ನಡಿಗೆಯಿಂದ ನಡೆಯುತ್ತದೆ; ಉಳಿದವರ ಕೂಡ ಸ್ತಬ್ಧವಾಗಿ ನಿಂತು ಕೊಳ್ಳುತ್ತದೆ"ಂದು ಆಂಗ್ಲಕವಿ ಚೂಡಾಮಣಿಯಾದ ಶೇಕ್ಸಪಿಯರನು ಅನ್ನುತ್ತಾನೆ.

"ಕಾಲದ ಗಣನೆಯನ್ನು ತಾಸು ಘಳಿಗೆಗಳ ಮೇಲಿಂದ ಮಾಡದೆ ಅದರಿಂದಾಗುವ ಉಪಯೋಗದ ಮೇಲಿಂದ ಮಾಡಬೇಕು. ತ್ರಿಜ್ಯಗಳು ಸರಿಯಿಲ್ಲದಂಥ ವರ್ತುಳವು ಎಷ್ಟು ದೊಡ್ಡದಿದ್ದರೂ ಅದರಿಂದ ಭೂಮಿ-ತಿಯ ಅಭ್ಯಾಸಕ್ಕೆ ಉಪಯೋಗವಾಗದು. ಅದರಂತೆ ಸತ್ಕಾರ್ಯ-

ಗಳನ್ನು ಮಾಡದ ದೀರ್ಘಾಯುಷಿಗಿಂತ ಸ್ವಲ್ಪಾದರೂ ಸತ್ಕಾರ್ಯ-ಗಳನ್ನು ಮಾಡಿದ ಅಲ್ಪಾಯುಷಿಯು ಶ್ರೇಷ್ಠನು" ಎಂದು ವಾಲರನೆಂಬ ಆಂಗ್ಲಕವಿಯು ಹೇಳಿದ್ದಾನೆ.

"ಈ ಜಗತ್ತಿನಲ್ಲಿ ಸೋಮಾರಿಯಂಥ ದುಂದುಗಾರನು ಮತ್ತೊಬ್ಬನಿಲ್ಲ. ಹಣವನ್ನು ದುಂದುಗಾರನಾಗಿ ಹಾಳುಮಾಡಿ ಮತ್ತೆ ಗಳಿಸಬಹುದು. ಆದರೆ ಒಮ್ಮೆ ಕಳೆದುಕೊಂಡ ವೇಳೆಯು ತಿರುಗಿ ಎಂದೂ ಬಾರದು."

—**ಜೆರೆಮಿ ಟೇಲರ್.**

**आलस्यं हि मनुष्याणां शरीरस्थो महारिपुः ।** —भर्तृहरि.

(ಆಲಸ್ಯವು ಮನುಷ್ಯರ ಶರೀರದಲ್ಲಿರುವ ದೊಡ್ಡ ಶತ್ರುವು.) ಆಯು-ಷ್ಯದ ಮರ್ಯಾದೆಯನ್ನು, ಜೀವಿಸಿದ ವರುಷಗಳಿಂದ ಗೊತ್ತು ಮಾಡದೆ ಮಾಡಿದ ಸತ್ಕೃತ್ಯಗಳಿಂದಲೂ ಬೋಧಿಸಿದ ಸದುಪದೇಶದಿಂದಲೂ ಕಲ್ಪಿ-ಸಿದ ಸದ್ವಿಚಾರಗಳಿಂದಲೂ ಗೊತ್ತು ಮಾಡಬೇಕು.

**न तेन वृद्धो भवति येनास्य पलितं शिरः ।**
**यो वै युवाप्यधीयानस्तं देवाः स्थविरंविदुः ॥** —मनु.

(ತಲೆಗೆ ನರೆಗೂದಲುಂಟಾಗುವುದರಿಂದ ಮನುಷ್ಯನು ವೃದ್ಧನಾಗು-ವುದಿಲ್ಲ; ಜ್ಞಾನಿಯು ಅಲ್ಪವಯಸ್ಕನಾದರೂ ವೃದ್ಧನೆಂದು ದೇವತೆಗಳು ತಿಳಿಯುತ್ತಾರೆ.)

ವರುಷನೂರಾಯುಷ್ಯವದರೊಳ । ಗಿರುಳುಕಳೆದೈವತ್ತುಮಿಕ್ಕಾ ।
ದ್ದರಲಿವಾರ್ಧಿಕಬಾಲ್ಯ ಕೌಮಾರದೊಳುಮೂವತ್ತು ॥
ಇರದೆಸಂದುದುಬಳಿಕಇಪ್ಪ । ತ್ತೊರುಷವದರೊಳಗಾದುದಂತಃ ।
ಕರಣವೆನ್ನೊಳುತೋರಿರಕ್ಷಿಸುನಮ್ಮನನವರತ ॥ ---ಭಕ್ತಿಸಾರ.

"ನಮ್ಮ ಜೀವಮಾನದಲ್ಲಿ ಹಲವು ಅವಸ್ಥೆಗಳುಂಟಾದರೂ ನಮ್ಮ ಆಯುಷ್ಯದ ದಿವಸಗಳು ಕೈಬೆರಳಿನ ಮೇಲೆ ಎಣಿಸುವಷ್ಟು ಅಲ್ಪವಾಗಿ-ರುವುವು. ಇಷ್ಟು ಅಲ್ಪಾವಧಿಯಲ್ಲಿ ಅರ್ಧ ಭಾಗವು ಆಹಾರ ನಿದ್ದೆ ಮೊದಲಾದ ತಾಮಸೇಚ್ಛೆಗಳ ಪೂರೈಕೆಗೆ ಬೇಕು. ಉಳಿದ ಅರ್ಧಭಾಗ-ವನ್ನು ನಾವು ಪರೋಪಕಾರ ಮಾಡುವುದರಲ್ಲಿಯೂ, ಜ್ಞಾನಾರ್ಜನೆಯ-

ಲ್ಲಿಯೂ ಸತ್ವವೃತ್ತಿಯ ಅಭಿವೃದ್ಧಿಗೆ ಅವಶ್ಯವಾದ ಧರ್ಮಾಚರಣೆಯಲ್ಲಿ-ಯೂ ಕಳೆಯಬೇಕು. ಆದರೆ ಇಡೀ ಜನ್ಮದಲ್ಲೆಲ್ಲ ಪಶುತುಲ್ಯವಾದ ವರ್ತನವನ್ನು ಮಾಡುವ ಜನರೇ ಹೆಚ್ಚಾಗಿರುವರು. ಜನ್ಮವು ಸಾರ್ಥಕವಾಗ-ಬೇಕಾದರೆ ನಮ್ಮ ವರ್ತನವು ನಿಷ್ಕಲಂಕವಾದುದೂ ಸಾತ್ವಿಕವಾದುದೂ ಇರತಕ್ಕದ್ದು. ಅದರಿಂದ ನಮ್ಮ ಆಯುಷ್ಯಕ್ರಮವು ಆನಂದಮಯವಾಗು-ವುದು. ಆದರೆ "ಗತಾನುಗತಿಕೋಲೋಕಃ" (ಮುಂದಿನವರಂತೆ ಹಿಂದಿ-ನವರು) ಎಂಬ ನ್ಯಾಯದಂತೆ ಆಯುಷ್ಯವನ್ನು ಕಳೆಯುವುದರಿಂದ ಜನ್ಮವು ಸಾರ್ಥಕವಾಗದು ನಶ್ವರವಾದ ಪದಾರ್ಥಗಳಿಂದ ಪರಿವೃತನಾದ ಹಾಗೂ ಅನೇಕ ಬಂಧನಗಳಿಂದ ಬದ್ಧನಾದ ಮನುಷ್ಯನ ಮನಸ್ಸಿನಲ್ಲಿ ಅರಗಳಿಗೆಯಾದರೂ ಉದಾತ್ತವಿಚಾರಗಳುಂಟಾದರೆ ಅವನಿಗೆ ಆನಂದ-ವುಂಟಾಗುವುದು. ಅಂತಹ ಆನಂದವನ್ನು ಹೊಂದುವವನೇ ಧನ್ಯನು"

ಚೆಸ್ಟರಫೀಲ್ಡನೆಂಬ ಆಂಗ್ಲಸರದಾರನು ತನ್ನ ಮಗನಿಗೆ ಕಾಲದ ಮಹತ್ವದ ವಿಷಯವಾಗಿ ಉಪದೇಶಮಾಡಿದ್ದಾನೆ; ಅದು ಹೇಗೆಂದರೆ: "ಸೋಮಾರಿತನದಲ್ಲಿ ಕಾಲವನ್ನು ಕಳೆಯುವುದರಿಂದ ನಿನ್ನ ಸದ್ವರ್ತ-ನಕ್ಕೂ ಭಾವಿಸುಖಕ್ಕೂ ಕುಂದುಬರುವುದು. ಗಳಿಸಿದ ಹಣವನ್ನು ಚಕ್ರ-ಬಡ್ಡಿಗೆ ಹಚ್ಚಿದರೆ ಎಂತಹ ಲಾಭವಾಗುವುದೋ ಅದಕ್ಕಿಂತ ಹೆಚ್ಚಿನ ಲಾಭವು ವೇಳೆಯ ಸದುಪಯೋಗದಿಂದಾಗುವುದೆಂಬುದನ್ನು ಮರೆಯಬೇಡ."

"ಆದುದರಿಂದ ನಮ್ಮ ಅಲ್ಪಾಯುಷ್ಯದಲ್ಲಿ ಒಂದು ಕ್ಷಣವನ್ನಾದರೂ ನಾವು ಆಲಸ್ಯದಲ್ಲಿ ಕಳೆಯಕೂಡದು. ವೇಳೆಯ ನಿಜವಾದ ಮಹತ್ವ-ವನ್ನು ಅರಿತುಕೊಂಡು ಅರೆಗಳಿಗೆಯನ್ನಾದರೂ ವ್ಯರ್ಥಕಳೆಯದಂತೆ ನಾವು ಎಚ್ಚರ ಪಡಬೇಕು."

यो हि कालो व्यतिक्रामेत्पुरुषं कालकांक्षिणं ।
दुर्लभः स पुनस्तेन कालः कर्मचिकीर्षुणा ॥ —महाभारत.

(ಯಾವುದಾದರೊಂದು ಕೆಲಸವನ್ನು ಮಾಡಲಿಕ್ಕೆ ಉತ್ತಮ ಸಂಧಿಯು ದೊರೆತಾಗ ಅದನ್ನು ವ್ಯರ್ಥ ಹೋಗಗೊಟ್ಟರೆ ಅಂತಹ ಸಂಧಿಯು ಪುನಃ ದೊರಕುವುದು ಕಷ್ಟ.)

*"ಮೀನಗಾರರು ಮೀನಗಳನ್ನು ಹಿಡಿಯಲಿಕ್ಕೆ ಆಮಿಷವನ್ನು ಹಚ್ಚಿದ ಗಾಣಗಳನ್ನು ನೀರಿನಲ್ಲಿ ಚಲ್ಲುವಂತೆ ದುರ್ವ್ಯಸನಗಳು ಮನುಷ್ಯರನ್ನು ಹಿಡಿಯಲಿಕ್ಕೆ ವ್ಯಾಮೋಹಗಳನ್ನುಂಟುಮಾಡುವುವು. ಆದರೆ ಎಲ್ಲರೂ ಬಲೆಗೆ ಬೀಳುವುದಿಲ್ಲ. ಸೋಮಾರಿಗಳು ಮಾತ್ರ ಈ ಮೋಹಪಾಶಕ್ಕೊಳ-ಗಾಗಿ ಶ್ರೇಷ್ಠವಾದ ನರಜನ್ಮಕ್ಕೆ ದ್ರೋಹಿಗಳಂತೆ ನಡೆಯುವರು."

§"ಮಾನವಪ್ರಾಣಿಯ ಆಯುಷ್ಯವು ಬೀಸುವ ಕಲ್ಲಿನಂತೆ ಇರುತ್ತದೆ. ಅದರೊಳಗೆ ಧಾನ್ಯವನ್ನು ಹಾಕಿದರೆ ಅದು ಸಣ್ಣಾಗಿ ಅರೆದು ಹಿಟ್ಟು ಮಾಡುತ್ತದೆ. ಕಾಳು ಹಾಕದಿದ್ದರೂ ಒಂದೇ ಸವನೆ ಅದು ಬೀಸುತ್ತ ಹೋಗುವುದರಿಂದ ಕಲ್ಲೇ ಸವೆದು ಹೋಗುವುದು." ಅದರಂತೆ ಸೋಮಾ-ರಿಯ ಆಯುಷ್ಯವಾದರೂ ಬೀಸುವ ಕಲ್ಲಿನಂತೆ ತನ್ನಷ್ಟಕ್ಕೆ ತಾನೇ ಸವೆದು-ಹೋಗುವುದು.

ಚಿಂತೆಯಿಂದ ಮನುಷ್ಯನು ಹಣ್ಣಾಗುತ್ತಾನೆ; ಉದ್ಯೋಗದಿಂದ ಅಭಿ-ವೃದ್ಧಿಯನ್ನು ಹೊಂದುತ್ತಾನೆ. ಆದುದರಿಂದಲೇ ಮುಂದೆ ದುಃಖಗಳು ಒದಗುವುವೆಂದು ತಿಳಿದು ಈಗಿನಿಂದಲೇ ಚಿಂತೆ ಹಚ್ಚಿಕೊಳ್ಳಬೇಡಿರೆಂದು ಲೂಥರನೆಂಬ ಕ್ರಿಶ್ಚನ್ ಧರ್ಮಪ್ರವರ್ತಕನು ಉಪದೇಶಮಾಡಿದ್ದಾನೆ.

**नास्त्युद्यमसमो बंधुः कृत्वायं नावसीदति ।** —ಭರ್ತೃಹರಿ.

(ಉದ್ಯೋಗದಂತಹ ಆಪ್ತನಿಲ್ಲ; ಅದನ್ನು ಮಾಡಿದವನಿಗೆ ಕೇಡಿಲ್ಲ.)

§"ಮೂಢಮಾನವ ಪ್ರಾಣಿಗಳಿರಾ, ಅಡವಿಯಲ್ಲಿ ಹೂಕಾಯಿಗಳು ತಮ್ಮಷ್ಟಕ್ಕೆ ತಾವೇ ಆಗುತ್ತವೆ. ಹೂಗಳ ಚಿತ್ರವಿಚಿತ್ರವಾದ ಬಣ್ಣಗಳು ಬಹು ಮನೋಹರವಾಗಿರುವುವು; ಹಣ್ಣುಕಾಯಿಗಳ ಸ್ವಾದವಾದರೂ ಸರಸವಾಗಿರುವುದು; ಎಲ್ಲ ಕಡೆಗೂ ಬೆಳೆಯುವ ಹುಲ್ಲು ಸೂರ್ಯೋ-ದಯದ ಕಾಲಕ್ಕೆ ಪಚ್ಚರತ್ನದ ನೆಲಗಟ್ಟಿನಂತೆ ಒಪ್ಪುವುದು. ಇವುಗಳಿಗೆಲ್ಲ ಈ ಪ್ರಕಾರದ ಸೌಂದರ್ಯವನ್ನೂ ಮಾಧುರ್ಯವನ್ನೂ ಕೊಟ್ಟ ಸೃಷ್ಟಿ-ಕರ್ತನು ನಿಮಗಾದರೂ ವಸ್ತ್ರ ಪ್ರಾವರಣಗಳನ್ನು ಕೊಡಲಿಕ್ಕಿಲ್ಲವೇ?"

---

* ಹಿಲರ್ಡ್. § ಲೂಥರ್.

**येन शुक्लीकृता हंसाः शुकाश्च हरितीकृताः ।**
**मयूराश्चित्रिता येन स ते वृत्तिं विधास्यति ॥ –हितोपदेश.**

(ಎಲೋ ಮನುಷ್ಯರೇ, ಹಂಸಗಳಿಗೆ ಬಿಳಿಯ ಬಣ್ಣವನ್ನೂ, ಗಿಳಿಗಳಿಗೆ ಹಸುರುಬಣ್ಣವನ್ನೂ, ನವಿಲುಗಳಿಗೆ ಚಿತ್ರವಿಚಿತ್ರವಾದ ಬಣ್ಣವನ್ನೂ ಕೊಟ್ಟ ದೇವರು ನಿನ್ನ ಚರಿತಾರ್ಥವು ಸುಸೂತ್ರವಾಗಿ ಸಾಗುವಂತೆ ಮಾಡುವನು.)

ಆದರೂ ಉದ್ಯೋಗ ಮಾಡದೆ ಮಾನವ ಪ್ರಾಣಿಗಳಿಗೆ ಏನೂ ದೊರಕದು. ಅಡವಿಯಲ್ಲಿ ಬೆಳೆಯುವ ಗಿಡಗಂಟಿಗಳು ಸಹ ಎಡೆಬಿಡದೆ ಉದ್ಯೋಗವನ್ನು ನಡಿಸಿರುತ್ತವೆ. ಇಲ್ಲದಿದ್ದರೆ ಅವುಗಳಿಗೆ ಭೂಮಿಯೊಳಗಿನ ಪೋಷಕ ದ್ರವ್ಯಗಳು ಸಿಗುವ ಬಗೆಯೇನು? ಅವುಗಳಿಗೂ ಮಾನವ ಪ್ರಾಣಿಗಳಿಗೂ ಒಂದು ವೈಲಕ್ಷಣ್ಯವುಂಟು. ಅದೇನೆಂದರೆ ಮನುಷ್ಯನು ಯಾವಾಗಲೂ ಚಿಂತೆಯಲ್ಲಿರುತ್ತಾನೆ. ಆದರೆ ಗಿಡಗಂಟ ಮೊದಲಾದುವುಗಳು ಯಾವಾಗಲೂ ನಿಶ್ಚಿಂತವಾಗಿರುವುವು.

ಕಾಲಕ್ಕೆ ಹಕ್ಕಿಯಂತೆ ಪಕ್ಕಗಳಿರುವುವು. ಅದು ಸೃಷ್ಟಿಕರ್ತನಿದ್ದೆಡೆಗೆ ಹೋಗಿ ಮನುಷ್ಯರ ವರ್ತನಕ್ರಮದ ವಾರ್ತೆಯನ್ನುಸುರುತ್ತದೆ. ನಾವೆಲ್ಲರೂ ಕೂಡಿ ವಿಜ್ಞಾಪನೆ ಮಾಡಿದರೂ ಅದು ಹಿಂತಿರುಗದು, ಮತ್ತು ವೇಗವನ್ನು ಕಡಿಮೆ ಮಾಡದು. ದುರುಪಯೋಗ ಮಾಡಿದ ಗಳಿಗೆಗಳ ಲೆಕ್ಕವು ಚಿತ್ರಗುಪ್ತನ ಪುಸ್ತಕದಲ್ಲಿ ಬರೆದಿಡಲ್ಪಟ್ಟಿರುವುದೆಂಬ ಸಂಗತಿಯು ಗೊತ್ತಿದ್ದರೂ ಗೊತ್ತಿಲ್ಲದಂತೆ ಬಹಳ ಜನರು ವರ್ತಿಸುತ್ತಾರೆ. ಇಲ್ಲವಾದರೆ ಅವರು ತಮ್ಮ ವೇಳೆಯ ಸದುಪಯೋಗವನ್ನೇ ಮಾಡುತ್ತಿದ್ದರು; ಅದರಿಂದ ಅವರಿಗೆ ಸುಖಪ್ರಾಪ್ತಿಯಾಗುತ್ತಿತ್ತು.

ಕಾಲವು ಓಡುತ್ತದೆಂದು ಅನ್ನುತ್ತಾರೆ. ಆದರೆ ಅದು ಸುಳ್ಳು; ನಿಜವಾಗಿ ನೋಡಲು ನಾವೇ ಕಾಲವನ್ನು ವ್ಯರ್ಥವಾಗಿ ಕಳೆಯುವುದರಿಂದ ಅದು ಓಡಿದಂತೆ ನಮಗೆ ಭಾಸವಾಗುತ್ತದೆ. "ಇಷ್ಟು ಕಾಲವನ್ನು ನಾನು ವ್ಯರ್ಥ ಕಳೆದೆನು. ಅದರ ಫಲಭೋಗವನ್ನು ಈಗ ಉಣ್ಣಬೇಕಾಗಿದೆ" ಎಂದು ಆಂಗ್ಲ ಭೂಮಿಪನಾದ ೨ನೆಯ ರಿಚರ್ಡನು ಅಂದ ಮಾತುಗಳು ವಿಚಾರಾರ್ಹವಾಗಿರುವುವು.

§ "ಯಾವನಿಗೆ ವೇಳೆಯ ಸದುಪಯೋಗವು ಗೊತ್ತಿರುವುದೋ ಅವನು ಸತ್ಸಹವಾಸವನ್ನೂ ಸತ್ಕೃತ್ಯಗಳನ್ನೂ ಮಾಡುವನು; ಗೊತ್ತಿಲ್ಲದವನು ದುಃಸಂಗತಿಯಲ್ಲಿ ಕಾಲವನ್ನು ವ್ಯರ್ಥವಾಗಿ ಕಳೆದು ಹಾನಿಗೆ ಈಡಾಗುವನು. ಇಲ್ಲವೆ ದುಷ್ಕರ್ಮಗಳನ್ನು ಮಾಡಿ, ಭವಸಾಗರವನ್ನು ದಾಟುವ ಉಪಾಯವನ್ನು ಕಾಣದೆ ಅದರಲ್ಲಿಯೇ ಸಿಕ್ಕು ತೊಳಲಾಡುವನು."

ಸಾಮಾನ್ಯವಾಗಿ ಮನುಷ್ಯರು ೭೦ವರುಷಗಳ ವರೆಗೆ ಬಾಳುತ್ತಾರೆ. ಅದರಲ್ಲಿ ಊಟ, ವ್ಯಾಯಾಮ, ನಿದ್ದೆ ಮೊದಲಾದುವುಗಳಿಗೆ ಬೇಕಾದ ಕಾಲವನ್ನು ಕಳೆದರೆ ಎಷ್ಟು ಸ್ವಲ್ಪ ಕಾಲವು ಅವರ ವಶಕ್ಕೆ ಉಳಿಯುವುದು!

ಕಾಲವನ್ನು ಪರೋಪಕಾರಕ್ಕೆ ಯೋಜಿಸುವುದರಿಂದ ನಮಗೂ ಪರರಿಗೂ ಹಿತವಾಗುವುದು. ಆದರೂ ಇಂದ್ರಿಯ ಸುಖದಲ್ಲಿಯೇ ಕಾಲವನ್ನು ಕಳೆಯುವಂತಹ ಜನರ ಸಂಖ್ಯೆಯೇ ಹೆಚ್ಚಾಗಿದೆ.

"ನಮ್ಮ ಕಾಲದ ಕೆಲವೊಂದು ಭಾಗವನ್ನು ಎರಡನೆಯವರು ಅಪಹರಿಸುತ್ತಾರೆ; ಕೆಲವೊಂದು ಕಳವಾಗಿ ಹೋಗುವುದು, ಮತ್ತೆ ಕೆಲವೊಂದು ಕೈ ತಪ್ಪಿಹೋಗುವುದು" ಎಂದು ಸೆನೆಕಾ ಎಂಬ ತತ್ವಜ್ಞನು ಹೇಳುತ್ತಾನೆ. ಕಾಲವು ಯಾವ ಪ್ರಕಾರದಿಂದ ಹೋದರೂ ಅದು ತಿರುಗಿ ಬಾರದು. ಅವಿಚಾರದಿಂದ ಕಾಲ ಕಳೆದು ನಾವು ಸುಖಕ್ಕೆ ಎರವಾಗುತ್ತೇವೆ. ವಿಚಾರದಿಂದ ನಡೆದರೆ ದೈವಿಕ ವಿಪತ್ತುಗಳನ್ನು ಸಹ ತಪ್ಪಿಸಿಕೊಳ್ಳಬಹುದು. ಆದರೆ ನಮ್ಮ ಅಪರಾಧಗಳಿಂದುಂಟಾದ ಸಂಕಟಗಳಿಂದ ಪಾರಾಗುವುದು ತೀರ ಅಸಂಭವವು.

**रोगशोकपरीतापबन्धनव्यसनानि च ।**
**आत्मापराधवृक्षाणां फलान्येतानि देहिनाम् ॥** —हितोपदेश.

ರೋಗ, ಶೋಕ, ಪರೀತಾಪ, ಬಂಧನ, ವ್ಯಸನ ಮೊದಲಾದುವುಗಳು ನಾವು ಮಾಡಿದ ಅಪರಾಧಗಳೆಂಬ ವೃಕ್ಷಗಳ ಫಲಗಳು.

"ಸ್ವಿಟ್ಸರ್ಲಂಡ ದೇಶದ ಮನೋಹರವಾದ ಸರೋವರಗಳನ್ನು ನಾನು (ಲಾರ್ಡ್ ಎವ್ಹಬರಿ) ನೋಡ ಹೋದಾಗ ಅಲ್ಲಿ ಒಬ್ಬ ವಿದ್ವಾಂಸನನ್ನು

§ ಜೆರೆಮಿ ಟೇಲರ್.

ಕಂಡೆನು. ಅವನ ವಾರ್ಷಿಕ ಉತ್ಪನ್ನವು ೧೦೦ ಪೌಂಡುಗಳಿದ್ದರೂ ಅವನು ಒಂದು ಸಣ್ಣ ವಸ್ತುಸಂಗ್ರಹಾಲಯವನ್ನು ಏರ್ಪಡಿಸಿ ಹೊಸ ಶೋಧದ ಕೆಲಸವನ್ನು ಕೈಕೊಂಡಿದ್ದನು. ಇಷ್ಟು ಸ್ವಲ್ಪ ಉತ್ಪನ್ನವು ಈ ಎಲ್ಲ ವೆಚ್ಚಕ್ಕೆ ಸಾಲಲಿಕ್ಕಿಲ್ಲವೆಂದು ತಿಳಿದು, ನೀವು ಏನಾದರೂ ಉದ್ಯೋಗವನ್ನು ಕೈಕೊಳ್ಳುವುದಿಲ್ಲವೋ ಎಂದು ನಾನು ಅವನನ್ನು ಕೇಳಿದೆನು. ಅದಕ್ಕೆ ಅವನು ತನ್ನ ಕಾಲವು ಬೆಳ್ಳಿ ಬಂಗಾರಕ್ಕಿಂತಲೂ ಹೆಚ್ಚು ಬೆಲೆಯುಳ್ಳದ್ದೆಂದು ಹೇಳಿದನು; ಮತ್ತು ಒಂದು ಅರೆಗಳಿಗೆಯನ್ನಾದರೂ ಹೆಚ್ಚಿನ ದ್ರವ್ಯ ಸಂಪಾದನೆಯಲ್ಲಿ ವೆಚ್ಚಮಾಡಲಿಕ್ಕಿಲ್ಲವೆಂದು ನಿಶ್ಚಯ ಮಾಡಿದ್ದೇನೆಂದು ಉತ್ತರಕೊಟ್ಟನು." ಇಂಥ ನಿಶ್ಚಯವನ್ನು ದೇಶದಲ್ಲಿಯ ಸ್ವಲ್ಪ ಜನರು ಮಾಡಿದರೂ ದೇಶೋನ್ನತಿಯಾಗುವುದು ನಿಜ.

ದೇವರು ನಮಗೆ ಕೊಟ್ಟ ವರಗಳಲ್ಲಿ ಕಾಲವು ಪವಿತ್ರವಾದುದು. ದೊಡ್ಡದೊಡ್ಡ ರಾಜಧಾನಿಗಳಲ್ಲಿ ಸ್ವಸುಧಾರಣೆಯ ಪ್ರಸಂಗಗಳು ಮೇಲಿಂದ ಮೇಲೆ ಒದಗುತ್ತವೆ. ವಿದ್ವಾಂಸರಾದ ಶಾಸ್ತ್ರಕೋವಿದರೂ, ಪ್ರಸಿದ್ಧರಾದ ವಾಗ್ಮಿಗಳೂ, ಪೂಜ್ಯರಾದ ಸಾಧುಸಂತರೂ, ಕುಶಲರಾದ ಚಿತ್ರಕಾರರೂ ತಮ್ಮ ವರ್ತನದಿಂದಲೂ, ಭಾಷಣದಿಂದಲೂ, ಕೃತಿಯಿಂದಲೂ ಜನರಿಗೆ ಬೋಧಿಸುತ್ತಿರುತ್ತಾರೆ. ಇಂತಹ ಪ್ರಸಂಗಗಳ ಉಪಯೋಗವನ್ನು ಸರಿಯಾಗಿ ಮಾಡಿ ನಾವು ಆತ್ಮೋನ್ನತಿಯನ್ನು ಮಾಡಿಕೊಳ್ಳಬಹುದು. ಮುಂಬೈ ಪಟ್ಟಣದಲ್ಲಿ ವಿಸ್ತೀರ್ಣವಾದ ಉದ್ಯಾನಗಳೂ, ವಸ್ತುಸಂಗ್ರಹಾಲಯಗಳೂ, ಪುಸ್ತಕಾಲಯಗಳೂ ಇರುತ್ತವೆ. ವಿಕ್ಟೋರಿಯಾ ಮಹಾರಾಣಿಯವರ ಅಭಿಧಾನದಿಂದ ಕರೆಯಲ್ಪಡುವ ಉದ್ಯಾನದಲ್ಲಿ ಜಗತ್ತಿನ ಅನೇಕ ಖಂಡಗಳಲ್ಲಿ ಬೆಳೆಯುವ ನಾನಾ ಪ್ರಕಾರದ ಲತೆಗಳೂ, ವೃಕ್ಷಗಳೂ, ತೃಣಗಳೂ ಇರುವುವು. ಅಲ್ಲಿ ಸುಂದರ ಪಕ್ಷಿಗಳೂ, ಅನೇಕ ಅದ್ಭುತ ಪ್ರಾಣಿಗಳೂ, ಚಿತ್ರವಿಚಿತ್ರ ವರ್ಣದ ಸರೀಸೃಪಗಳೂ ಇರುವುವು. ಇವುಗಳಲ್ಲದೆ ಅಲ್ಲಿದ್ದ ವಸ್ತುಸಂಗ್ರಹಾಲಯದಲ್ಲಿ ಎಲ್ಲ ಪ್ರಕಾರದ ಧಾನ್ಯಗಳೂ ಖನಿಜಗಳೂ ಸಿಂಪು, ಶಂಖ, ಹವಳ ಮೊದಲಾದ ಸಮುದ್ರಜಗಳೂ ಸ್ಫಟಕದ ಕವಾಟಗಳಲ್ಲಿ ಕಂಗೊಳಿಸು-

ವುವು. ಬೇರೆ ಬೇರೆ ಪ್ರಾಣಿಗಳ ಅಸ್ಥಿಪಂಜರಗಳೂ, ಮದ್ಯದಲ್ಲಿಯೂ ಸುಗಂಧ ದ್ರವ್ಯಗಳಲ್ಲಿಯೂ ಕಾದಿಟ್ಟ ಅಪರೂಪವಾದ ಕೀಟಕಗಳೂ, ಜಲಚರಗಳೂ ದೃಷ್ಟಿಗೆ ಬೀಳುವುವು. ಅದರಂತೆ ಏಸಿಯಾಖಂಡದ ಜ್ಞಾನವರ್ಧಕ ಸಂಘದ (Royal Asiatic Society) ಪುಸ್ತಕಾಲಯದಲ್ಲಿ ಪ್ರಾಚೀನಕಾಲದ ಹಸ್ತಲಿಖಿತ ಪ್ರತಿಗಳೂ, ದುರ್ಮಿಲವಾದ ಗ್ರಂಥಗಳೂ, ಶೋಧಕರು ಬರೆದ ನಿಬಂಧಗಳ ಮೂಲಪ್ರತಿಗಳೂ ಇರುವುವು, ಚಿತ್ರಶಾಲೆಯಲ್ಲಿ ಪ್ರಸಿದ್ಧ ಚಿತ್ರಕಾರರು ತೆಗೆದ ಚಿತ್ರಗಳು ಅಲ್ಲಲ್ಲಿ ಶೋಭಿಸುತ್ತಿರುವುವು. ಮೇಲೆ ವರ್ಣಿಸಿದ ಮನೋರಂಜನದ ಹಾಗೂ ಆತ್ಮೋನ್ನತಿಯ ಸಾಧನಗಳು ಇರುವುದರಿಂದ ವೇಳೆಯನ್ನು ವ್ಯರ್ಥ ಕಳೆಯದೆ ಅದರ ಸದುಪಯೋಗವನ್ನು ಮಾಡಿಕೊಳ್ಳಬೇಕು.

ತನಗೆ ಒದಗುವ ಸಂಕಟಗಳನ್ನು ತಪ್ಪಿಸುವುದು ಅಸಾಧ್ಯವಾದರೂ ಮನುಷ್ಯನು ಉದಾಸೀನನಾಗಬಾರದು. ಆದರೂ ಅನೇಕರು ಉದಾಸೀನ ಸ್ವಭಾವವುಳ್ಳವರಿರುವರು. ಅದು ಅವರ ಹುಟ್ಟುಗುಣವಾದುದರಿಂದ ಈ ಜನ್ಮದಲ್ಲಿ ಅವರು ಸುಖಹೊಂದರು; ಆದರೂ ಮುಂದಿನ ಜನ್ಮದಲ್ಲಿ ಸುಖಪ್ರಾಪ್ತಿಯಾಗಬಹುದೆಂಬ ಆಶೆಯಿಂದ ಅವರು ಸ್ವಲ್ಪಾದರೂ ಮನಶ್ಶಾಂತಿಯನ್ನು ಹೊಂದಬಹುದು.

[1]"ಮಾನವ ಪ್ರಾಣಿಗಳೇ! ನೀವು ಯಾಕೆ ಇಷ್ಟು ದುಃಖಿಗಳಾಗುತ್ತೀರಿ? ಹೂವುಗಳಿಗೆ ಮನೋಹರರೂಪವೂ, ಸುಂದರವಾದ ಬಣ್ಣವೂ ಎಲ್ಲಿಂದ ಉಂಟಾದುವೆಂಬುದು ನಿಮಗೆ ಗೊತ್ತಿಲ್ಲವೋ? ನಿಮಗೆ ಹಕ್ಕಿಗಳಂತೆ ಆನಂದದಿಂದ ಹಾರಾಡಲು ಬರುವುದಿಲ್ಲ; ಪೃಥ್ವಿ, ಅಪ್, ತೇಜಸ್, ವಾಯು, ಆಕಾಶಗಳೆಂಬ ಪಂಚಮಹಾಭೂತಗಳ ನಿಜವಾದ ಸ್ವರೂಪವು ನಿಮಗೆ ತಿಳಿದಿಲ್ಲ. ಆದರೆ ಸೃಷ್ಟಿದೇವತೆಯು ನಿಮಗೆ ಮನೋರಂಜನವಾಗಬೇಕೆಂದು ಅನೇಕ ಪ್ರಕಾರದ ಶೋಭೆಗಳನ್ನೂ, ವೈಚಿತ್ರ್ಯಗಳನ್ನೂ ಉಂಟುಮಾಡಿರುವಳು, ಮತ್ತು ಅವಳ ಮನೋಭಾವವನ್ನು ತಿಳಿದುಕೊಂಡು ಅವಳನ್ನು ಒಲಿಸಿಕೊಂಡರೆ ನಿಮಗೆ ಶಾಶ್ವತ ಸುಖವಾಗುವುದು."

---

[1] ಸರ್ ಆರ್ಥರ್ ಹೆಲ್ಪ.

# ೭ನೆಯ ಅಧ್ಯಾಯ.

## ಪ್ರವಾಸಸುಖ.

यस्तु संचरते देशान्.........।
तस्य विस्तारिता बुद्धिस्तैलबिंदुरिवांभसि ॥
तीर्थानामवलोकनं परिचयः सर्वत्र वित्तार्जनं ।
नानाश्चर्यनिरीक्षणं चतुरता बुद्धेः प्रशस्तागिरः ।
एते संति गुणाः प्रवासविषये.........॥ —सुभाषित.

(ಎಣ್ಣೆಯ ಹನಿಯು ನೀರಿನಲ್ಲಿ ಎಲ್ಲ ಕಡೆಯಲ್ಲಿಯೂ ಪಸರಿಸುವಂತೆ ದೇಶಗಳನ್ನು ಸಂಚಾರ ಮಾಡುವವನ ಬುದ್ಧಿಯು ವಿಸ್ತೃತವಾಗುತ್ತದೆ. ತೀರ್ಥಗಳ ದರ್ಶನವು, ಎಲ್ಲ ಕಡೆಯಲ್ಲಿಯ (ಜನರ) ಪರಿಚಯವು, ಸಂಪತ್ತಿನ ಗಳಿಕೆಯು, ಆಶ್ಚರ್ಯಕಾರಕ ವಸ್ತುಗಳ ನಿರೀಕ್ಷಣವು, ಬುದ್ಧಿ ಕೌಶಲ್ಯವು, ಪ್ರಶಸ್ತವಾದ ಭಾಷಣವು ಇವೇ ಮೊದಲಾದುವುಗಳು ಪ್ರವಾಸದಿಂದಾಗುವ ಲಾಭಗಳು.)

ಪ್ರವಾಸವು ಈ ಕಾಲದಲ್ಲಿ ಸುಲಭವಾದಷ್ಟು ಮತ್ತೆ ಯಾವ ಕಾಲದಲ್ಲಿಯೂ ಆಗಿದ್ದಿಲ್ಲ. ಪೂರ್ವಕಾಲದಲ್ಲಿ ಪ್ರವಾಸವು ಪ್ರಯಾಸದ ಕೆಲಸವಾದುದರಿಂದ ಭರ್ತೃಹರಿಯು '**किं सुखं अप्रवासगमनं**' ಸುಖವು ಯಾವುದು— ಎಂಬ ಪ್ರಶ್ನೆಗೆ ಪ್ರವಾಸ ಮಾಡದೆ ಇರುವುದು ಎಂದು ಉತ್ತರಕೊಟ್ಟನು. ಆದರೆ ಆ ಸ್ಥಿತಿಯೆಲ್ಲ ಈಗ ಬದಲಾಗಿದೆ.

ಪ್ರವಾಸ ಮಾಡುವುದಾದರೆ ಪ್ರಾಚೀನ ಕಾಲದ ಜನರಂತೆ ಕಾಲುನಡಿಗೆಯಿಂದ ಹೋಗಬೇಕು. ಲೋಹಮಾರ್ಗಗಳಾದಂದಿನಿಂದ ಉಗಿಬಂಡಿಗಳಲ್ಲಿ ಕೂತು ಹೋಗುವುದೇ ಪ್ರವಾಸವಾಗಿದೆ. ಇಂತಹ ಪ್ರವಾಸದಿಂದ ಏನೂ ನೋಡುವುದಾಗದು. ಈ ದೋಷವು ಲೋಹಮಾರ್ಗಗಳಿಂದುಂಟಾಗಿಲ್ಲ. ಆದರೆ ಈಗ ಜೀವನ ಕಲಹವು ಕಠಿಣವಾದುದರಿಂದ ವಿಶ್ರಾಂತಿಯ ಕಾಲವು ತೀರ ಸ್ವಲ್ಪವಾಗಿದೆ. ಅಷ್ಟು ಸ್ವಲ್ಪ ಕಾಲದಲ್ಲಿ ಸಾವಕಾಶವಾಗಿ ಪ್ರವಾಸವನ್ನು ಮಾಡುವುದಾಗುವುದಿಲ್ಲ. ನಮ್ಮ ಪೂರ್ವ-

ಜರು ಎಂದೂ ನೋಡದ ತೀರ್ಥಗಳನ್ನೂ, ದೇಶಗಳನ್ನೂ ನಾವು ಅಲ್ಪಾ-ಯಾಸದಿಂದಲೂ ಸ್ವಲ್ಪ ವೆಚ್ಚದಿಂದಲೂ ನೋಡಬಹುದು. ಈ ದೇಶ-ದಲ್ಲಿಯ ವಿಸ್ತೀರ್ಣವಾದ ಅರಣ್ಯಗಳೂ, ಭವ್ಯವಾದ ಪರ್ವತಗಳೂ, ನದಿ-ಗಳೂ, ಸರೋವರಗಳೂ, ದೇವಾಲಯಗಳೂ, ಕೋಟೆಕೊತ್ತಳಗಳೂ ನಮ್ಮ ದೃಷ್ಟಿಗೆ ಬೀಳುವುವು. ಇದಲ್ಲದೆ ಉಳಿದ ದೇಶಗಳಲ್ಲಿಯ ಪವಿತ್ರ ಸ್ಥಳಗಳನ್ನೂ, ಪರ್ವತಗಳನ್ನೂ, ಸಮುದ್ರಗಳನ್ನೂ, ಪಟ್ಟಣಗಳನ್ನೂ, ಅಲ್ಲಿಯ ಪದಾರ್ಥಸಂಗ್ರಹಾಲಯಗಳನ್ನೂ ಸ್ವಲ್ಪಕಾಲದಲ್ಲಿಯೇ ನೋಡ-ಬಹುದು.

ವೇಳೆಯೂ ಸಂಪತ್ತೂ ಉಳ್ಳವರು ಪ್ರವಾಸವನ್ನು ಮಾಡಲೇ ಬೇಕು. ಅದರಿಂದ ನೋಡಿದ ದೇಶವು ತನ್ಮದೇ ಎಂಬ ಅಭಿಮಾನ-ವುಂಟಾಗುತ್ತದೆ.

* "ಪ್ರವಾಸದಿಂದ ತರುಣರಿಗೆ ಶಿಕ್ಷಣವು ದೊರೆಯುತ್ತದೆ. ವೃದ್ಧ-ರಿಗೆ ಅನುಭವವುಂಟಾಗುತ್ತದೆ. ತರುಣಜನರು ವಯೋವೃದ್ಧರಾದ ಅನು-ಭವಿಕ ಶಿಕ್ಷಕರ ಕೂಡ ಪ್ರವಾಸ ಮಾಡಬೇಕು. ಎಂದರೆ ಪ್ರವಾಸ ಮಾಡುವ ದೇಶದಲ್ಲಿಯ ದರ್ಶನೀಯ ವಸ್ತುಗಳಾವುವು, ಅಲ್ಲಿ ಪ್ರಸಿದ್ಧ-ರಾದ ಜನರು ಯಾರು, ಅಲ್ಲಿಯ ಕಲಾಕೌಶಲ್ಯಾದಿಗಳಾವುವೆಂಬುದು ತರುಣಜನರಿಗೆ ಗೊತ್ತಾಗುವುದು. ಇಲ್ಲದಿದ್ದರೆ ಅವರು ಕುರುಡರಂತೆ ಹೋದಂತಾಗುವುದು. ಪ್ರವಾಸ ಮಾಡುವಾಗ ಪ್ರತಿದಿನದ ವೃತ್ತಾಂತ-ವನ್ನು ಬರೆದಿಡುವುದಕ್ಕೆ ಒಂದು "ದಿನವಹಿ"ಯನ್ನು ಇಡಬೇಕು."

ಎರಡನೆಯ ದೇಶದಲ್ಲಿ ನೋಡತಕ್ಕ ವಸ್ತುಗಳಾವುವೆಂದರೆ: — ರಾಯಭಾರಿಗಳ ಸ್ವಾಗತದ ದೆಸೆಯಿಂದ ನೆರೆಯಿಸಿದ ರಾಜಸಭೆ, ಮೊಕ-ದ್ದಮೆಗಳು ನಡೆದ ನ್ಯಾಯಸಭೆ, ಧರ್ಮಸಭೆ, ಪ್ರಾಚೀನಕಾಲದ ಮಠ, ದೇವಾಲಯ, ಶಿಲಾಲೇಖ, ತಾಮ್ರಪಟ, ಕೋಟೆಕೊತ್ತಳ, ಬಂದರ, ಪುಸ್ತಕಾಲಯ, ಶಿಕ್ಷಣಾಲಯ, ವಿಶ್ವವಿದ್ಯಾಲಯ, ರಾಜೋದ್ಯಾನ, ಶಸ್ತ್ರಗೃಹ, ಮದ್ದುಗುಂಡಿನ ಸಂಗ್ರಹ, ದೊಡ್ಡ ಪಣ್ಯಶಾಲೆ, ಉಚ್ಚಪ್ರತಿಯ

* ಬೇಕನ್.

ನಾಟಕ ಗೃಹ, ವಸ್ತ್ರಾಭರಣಗಳನ್ನಿಟ್ಟ ಗೃಹ ಇವೇ ಮೊದಲಾದುವು-
ಗಳು.

ಪ್ರವಾಸ ಮಾಡುವಾಗ ಒಂದೇ ಪಟ್ಟಣದಲ್ಲಿ ಬಹಳ ದಿವಸಗಳ ವರೆಗೆ
ಇರಕೂಡದು. ಇರಬೇಕಾದರೂ ಒಂದೇ ಭಾಗದಲ್ಲಿರಕೂಡದು. ಒಂದು
ಭಾಗದಿಂದ ಮತ್ತೊಂದು ಭಾಗಕ್ಕೆ ಹೋಗಬೇಕು. ಪ್ರಸಿದ್ಧ ಜನರನ್ನು
ಕಂಡು ಅವರ ಸಂಗಡ ಅವರ ಪ್ರೀತಿಯ ವಿಷಯಗಳ ಸಂಬಂಧದಿಂದ ಸಂಭಾ-
ಷಣೆ ಮಾಡಬೇಕು. ಅದರಿಂದ ಆ ದೇಶದ ಅನುಭವವುಂಟಾಗುತ್ತದೆ.

"ಪ್ರವಾಸದಿಂದ ತಿರುಗಿ ಬಂದ ಮೇಲೆ ಆ ದೇಶಗಳನ್ನು ಮರೆಯ-
ಕೂಡದು. ಅಲ್ಲಿಯ ಗುರುತಿನ ಜನರಿಗೆ ಪತ್ರಗಳನ್ನು ಬರೆದು ಪರಿಚ-
ಯವನ್ನು ಕಾದಿಟ್ಟುಕೊಳ್ಳಬೇಕು. ಆದರೆ ಸ್ವದೇಶದ ನಡೆನುಡಿಗಳನ್ನು
ಬಿಟ್ಟು ಪರದೇಶದ ನಡೆನುಡಿಗಳನ್ನು ಎಂದೂ ಅನುಕರಿಸಕೂಡದು."

ವಿಶ್ರಾಂತಿಯ ಕಾಲವನ್ನು ಆನಂದದಿಂದ ಕಳೆಯಬೇಕೆಂದು ಬಹು
ಜನರು ಪ್ರವಾಸಮಾಡುತ್ತಾರೆ. ಬೇಕನ್ನನು ಮೇಲೆ ಉಲ್ಲೇಖಿಸಿದ
ಎಲ್ಲ ವಸ್ತುಗಳನ್ನು ನೋಡುವುದು ಅಸಾಧ್ಯವಾದರೂ ಕಣ್ಣು ಮುಚ್ಚಿ-
ಕೊಳ್ಳದೆ ಹೋಗುವವನು, ಜ್ಞಾನವನ್ನೂ ಸುಖವನ್ನೂ ಏಕಕಾಲಕ್ಕೆ ಲಭಿಸ-
ಬಹುದು.

ನಾವು ಬೇರೆ ಬೇರೆ ಸ್ಥಳಗಳ ನಿಜವಾದ ವರ್ಣನೆಯನ್ನು ಓದಿದರೂ
ಅವುಗಳ ಚಿತ್ರ ನಕಾಶಗಳನ್ನು ನೋಡಿದರೂ ಮನಸ್ಸಿಗೆ ಸಮಾಧಾನ-
ವಾಗುವುದಿಲ್ಲ. ಅವುಗಳನ್ನು ಪ್ರತ್ಯಕ್ಷ ನೋಡುವುದರಿಂದ ಆ ವಸ್ತುಗಳ
ನಿಜ ಸ್ವರೂಪವು ಗೊತ್ತಾಗುತ್ತದೆ. ವರ್ಣನೆಯ ಮೇಲಿಂದ ಅವುಗಳಲ್ಲಿ-
ರುವ ಚಮತ್ಕಾರಗಳನ್ನು ಊಹಿಸಬಹುದು. ಚಿತ್ರದಿಂದ ಅವುಗಳ
ಆಕಾರವೂ ಬಣ್ಣವೂ ಸಾಧಾರಣವಾಗಿ ಗೊತ್ತಾಗುವುವು. ವರ್ಣನೆ-
ಗಳಿಂದಾಗಲಿ ಚಿತ್ರಗಳಿಂದಾಗಲಿ ಆ ವಸ್ತುಗಳ ಭವ್ಯಸ್ವರೂಪದ, ಸುಂದರ-
ವಾದ ನೋಟದ ಇಲ್ಲವೆ ಸೂಕ್ಷ್ಮವಾದ ಕೆತ್ತಿಗೆಯ ಕೆಲಸದ ನಿಜವಾದ
ಕಲ್ಪನೆಯು ನಮಗಾಗದು. ಪ್ರತ್ಯಕ್ಷ ನೋಡುವುದರಿಂದ ನಿರ್ಜೀವವಾದ
ವಸ್ತುಗಳಿಗೆ ಜೀವಕಳೆಯುಂಟಾದಂತಾಗುವುದು.

ಐತಿಹಾಸಿಕ ಸ್ಥಳಗಳನ್ನು ನೋಡುವುದರಿಂದ ಇತಿಹಾಸದಲ್ಲಿ ಆಗಿ-ಹೋದ ಸಂಗತಿಗಳು, ನಮ್ಮೆದುರಿಗೆ ವರ್ತಿಸಿದಂತೆ ಆಗುವುವು. ಕುರು-ಕ್ಷೇತ್ರದ ರಣಾಂಗಣವನ್ನು ನೋಡುವುದರಿಂದ ಅಲ್ಲಿ ಆಗಿಹೋದ ಕೌರವ ಪಾಂಡವರ ತುಮುಲ ಯುದ್ಧವೂ, ಬಾಬರನ ಜಯವೂ, ಅಕಬರನ ಶೌರ್ಯವೂ, ಮರಾಟರ ಖೇದಜನಕವಾದ ಅಪಜಯವೂ ಏಕಕಾಲಕ್ಕೆ ನಮ್ಮ ನೆನಪಿಗೆ ಬರುವುವು. ಆಗ್ರಾ ಪಟ್ಟಣದಲ್ಲಿ ಯಮುನೆಯ ದಂಡೆಯ ಮೇಲೆ ಕಟ್ಟದ ಸುಂದರವಾದ ತಾಜಮಹಾಲಿನ ಎದುರಿಗೆ ನಿಂತರೆ ಶಹಾಜಹಾನ ಬಾದಶಹನ ಪ್ರೀತಿಯು ಮುಮತಾಜಮಹಾಲ ಎಂಬ ಬೇಗಮ್ಮಳ ಮೇಲೆ ಎಷ್ಟಿತ್ತೆಂಬುದು ಗೊತ್ತಾಗುವುದು. ಪುಣೆಯ ಸಮಿಪದಲ್ಲಿದ್ದ ಸಿಂಹಗಡದ ಕೋಟೆಯನ್ನು ಏರುವಾಗ ತಾನಾಜಿಮಾಲ-ಸುರೆಯ ಶೌರ್ಯವೂ, ಧೈರ್ಯವೂ, ಸಾಹಸವೂ, ವಿಶೇಷವಾಗಿ ಸ್ವಾಮಿ-ಭಕ್ತಿಯೂ ನೆನಪಾಗಿ ರೋಮಾಂಚಗಳೇಳದೆ ಇರವು.

ಈ ಮೇರೆಗೆ ಬರಿಯ ವರ್ಣನೆಯಿಂದ ವಸ್ತುಗಳ ಸಾದ್ಯಂತ ಸ್ವರೂಪ-ವನ್ನು ಊಹಿಸುವುದು ಕಠಿಣವಾದರೂ ಅವುಗಳಿಂದ ಕೆಲಮಟ್ಟಿಗೆ ಮನೋ-ರಂಜನೆಯಾಗದೆ ಇರದು. ಉದಾಹರಣಾರ್ಥವಾಗಿ ಟಿಂಡಲನು ಬರೆದ ಆಲ್ಪ್ಸ ಪರ್ವತದ ವರ್ಣನೆಯಿಂದ ಯಾರಿಗೆ ತಾನೇ ಮನೋರಂಜನೆ-ಯಾಗಲಿಕ್ಕಿಲ್ಲ?

"ಪ್ರಾತಃಕಾಲಕ್ಕೆ ಆಲ್ಪ್ಸ ಪರ್ವತದ ಮೌಂಟ್ ಬ್ಲಾಂಕ್, ಕಾಂಬಿನ್ ಮೊದಲಾದ ಅತ್ಯುಚ್ಚ ಶಿಖರಗಳ ಕಡೆಗೂ ಸಾವಿರಾರು ಸಣ್ಣ ಸಣ್ಣ ಶಿಖರಗಳ ಕಡೆಗೂ ನೋಡಲು ಅವು ಅದೇ ಮೂಡುತ್ತಿದ್ದ ಬಾಲ-ಸೂರ್ಯನ ಸ್ವಾಗತವನ್ನು ಮಾಡಲಿಕ್ಕೆ ಇಷ್ಟು ಎತ್ತರವಾಗಿ ನಿಂತಿರುವ-ವೆಂಬುದು ಕಂಡು ಬಂದಿತು; ಮತ್ತು ಇಂತಹ ಶಿಖರಗಳನ್ನು ನಿರ್ಮಿಸಿ-ದವನು ಆರಿರಬಹುದೆಂಬ ವಿಚಾರದಲ್ಲಿ ನಾನು ಮಗ್ನನಾದೆನು. ಈ ಪ್ರಶ್ನಕ್ಕೆ ಉತ್ತರವು ಕೂಡಲೆ ದೊರೆಯಿತು. ಸರ್ವಶಕ್ತಿಮಂತನೂ, ಸದಾತರುಣನೂ, ಅನೇಕ ವಿಶ್ವಗಳ ಚಾಲಕನೂ, ಆದ ಸೂರ್ಯ-ನಾರಾಯಣನೇ ಇವುಗಳಿಗೆಲ್ಲ ಕಾರಣನೆಂದು ಕಂಡುಕೊಂಡೆನು. ಅವನ

ಶಕ್ತಿಯಿಂದಲೇ ಪೃಥ್ವಿಯ ಮೇಲೆ ನೀರೂ ನೆಲವೂ ಉಂಟಾಗಿವೆ, ಮತ್ತು ಪೃಥ್ವಿಯ ಸ್ವರೂಪವನ್ನು ಬದಲಿಸುವಂತಹ ಭೂಕಂಪಗಳ ಕಾರಣನೂ ಅವನೇ."

ಪರ್ವತಶಿಖರಗಳನ್ನು ನೋಡಿ ಮನೋರಂಜನೆಯಾಗುವಂತೆ ತಡಸಲುಗಳನ್ನು ನೋಡುವುದರಿಂದಾದರೂ ಮನೋರಂಜನೆಯಾಗದೆ ಇರದು. ಪೃಥ್ವಿಯಲ್ಲಿದ್ದ ತಡಸಲುಗಳಲ್ಲಿ ಅತಿ ಪ್ರಸಿದ್ಧವಾದ ಗೆರಸಪ್ಪೆಯ ತಡಸಲನ್ನು ನೋಡಿದರೆ ಸೃಷ್ಟಿದೇವತೆಯ ಅಗಾಧಲೀಲೆಯ ಸ್ವರೂಪವು ಸ್ವಲ್ಪವಾದರೂ ಮನವರಿಕೆಯಾಗುವುದು. ಅಲ್ಲಿ "ಶರಾವತೀ ನದಿಯು ಮೈಸೂರ ಸೀಮೆಯೊಳಗಿಂದ ಹರಿಯುತ್ತ ಬಂದು ಸಹ್ಯಾದ್ರಿಯೊಳಗಿನ ಒಂದು ಕಡಿದಾದ ಭಾಗದ ಮೇಲಿಂದ ಕೆಳಗೆ ಬೀಳುತ್ತದೆ. ಗುಡ್ಡದ ನೆತ್ತಿಯ ಮೇಲೆ ಅಂದರೆ ಪ್ರವಾಹವು ಕೆಳಗೆ ಬೀಳುವ ಸ್ಥಳದ ಹಿಂಭಾಗದಲ್ಲಿ ಹೊಳೆಯ ಒಡಲು ೨೩೦ ಫೂಟು ಅಗಲಾಗಿರುತ್ತದೆ. ಈ ಪ್ರವಾಹದಿಂದ ನಾಲ್ಕು ಬೇರೆ ಬೇರೆ ತಡಸಲುಗಳಾಗಿವೆ. ಅವುಗಳಲ್ಲಿ ರಾಜಾತಡಸಲು ಎಂಬುದು ಎಲ್ಲಕ್ಕೂ ದೊಡ್ಡದು. ಇದು ೮೩೦ ಫೂಟು ಎತ್ತರದ ಮೇಲಿಂದ ಆಧಾರ ತಪ್ಪಿ ಒಂದು ದೊಡ್ಡ ಕೊಳ್ಳದೊಳಗೆ ಬೀಳುತ್ತದೆ. ಮತ್ತೊಂದು ಇಳಿಜಾರಾದ ಸಂಕುಚಿತ ಪ್ರದೇಶದೊಳಗಿಂದ ಗರ್ಜಿಸುತ್ತ ಬಹು ವೇಗದಿಂದ ಕೆಳಗೆ ಬಿದ್ದು ಒಂದು ಗವಿಯೊಳಗೆ ಸೇರುತ್ತದೆ. ಇನ್ನೊಂದು ಅಲ್ಲಲ್ಲಿಗೆ ಮುಂದೆ ಹಾಯ್ದಂತಹ ಸಾಲಗೆಗಲ್ಲುಗಳ ಮೇಲೆ ಬಿದ್ದು, ಬಾಣಗಳಂತೆ ಮೇಲಕ್ಕೆ ಹಾರುತ್ತ ಕೆಳಗೆ ಬೀಳುತ್ತದೆ. ಇದು ಬಹು ರಮಣೀಯವಾಗಿರುವುದು. ಇದಕ್ಕೆ ಬಾಣದ ತಡಸಲು ಎನ್ನುವರು. ಮತ್ತೊಂದು ಬಹಳ ಸಪ್ಪಳ ಮಾಡದೆ ನೊರೆದುಂಬಿ ಇಳಿಜಾರಾದ ಗುಡ್ಡದ ಓರೆಗುಂಟ ಮೆಲ್ಲಗೆ ಇಳಿಯುತ್ತಾ ತಳಕ್ಕೆ ಹೋಗುತ್ತದೆ. ಆದುದರಿಂದ ಇದು ಮೇಲಿನಿಂದ ತಳತನಕ ಮಿಂಚುವಂತಹ ಬೆಳ್ಳಿಯ ತೆರೆಗಳು ಪಸರಿಸಿದಂತೆ ತೋರುತ್ತದೆ. ಇದಕ್ಕೆ ಗೌರವನಿತಾ (ಬಿಳಿಯ ಹೆಂಗಸು) ಎಂದು ಅನ್ನುತ್ತಾರೆ. ಈ ಸರಳುಗಳ ತುಷಾರಗಳಿಂದುಂಟಾಗುವ ಧೂಮ್ರ ರಾಶಿಗಳು ಕೊಳ್ಳದೊಳಗಿಂದ

ಹೊಗೆಯಂತೆ ಏಕಪ್ರಕಾರವಾಗಿ ಮೇಲಕ್ಕೇರುತ್ತಿರುತ್ತವೆ. ಅವುಗಳ ಮೇಲೆ ಬೆಳಿಗ್ಗೂ ಸಂಜೆಗೂ ಸೂರ್ಯಕಿರಣಗಳು ಬಿದ್ದು ತರತರದ ಬಣ್ಣಗಳುಳ್ಳಂತಹ ಎಷ್ಟೋ ಇಂದ್ರಧನುಷ್ಯಗಳು ಬಹು ಮನೋಹರವಾಗಿ ಕಾಣಿಸುತ್ತವೆ."

ನದಿಯ ಭವ್ಯಸ್ವರೂಪವು ಇಂತಹ ತಡಸಲುಗಳಿಂದ ವ್ಯಕ್ತವಾದರೂ ಅದರ ಪ್ರವಾಹವು ಉಗಮಸ್ಥಾನದಿಂದ ಮುಖದ ವರೆಗೆ ಯಾವ ಯಾವ ಪ್ರದೇಶಗಳೊಳಗಿಂದ ಹರಿದು ಹೋಗಿದೆಯೆಂಬುದೂ, ಅದಕ್ಕೆ ಎಲ್ಲೆಲ್ಲಿ ಉಪನದಿಗಳೂ ಹಳ್ಳಗಳೂ ಕೂಡುತ್ತವೆಂಬುದೂ, ಮಳೆಗಾಲದಲ್ಲಿ ಎಷ್ಟು ವಿಸ್ತೀರ್ಣವಾಗಿ ಹರಿಯುತ್ತದೆಂಬುದೂ ಸ್ವತಃ ನೋಡತಕ್ಕ ಸಂಗತಿಗಳಾಗಿವೆ.

ಪ್ರವಾಸಿಕರಾದ ಎಷ್ಟೋ ವಿದ್ವಾಂಸರು ಅನೇಕ ಮನೋಹರವಾದ ಸ್ಥಳಗಳನ್ನು ವರ್ಣಿಸಿದ್ದಾರೆ. ಅವರಲ್ಲಿ ಸಿಮಾಂಡ್ಸನೆಂಬ ಪ್ರವಾಸಿಯು ಭೂಮಧ್ಯ ಸಮುದ್ರದ ರಮ್ಯವಾದ ದಂಡೆಗಳ ಶೋಭೆಯನ್ನೂ, ಅದರ ಉತ್ತರಕ್ಕೂ ದಕ್ಷಿಣಕ್ಕೂ ಇರುವ ಪ್ರದೇಶಗಳೊಳಗಿನ ಸ್ವರೂಪ ವೈಲಕ್ಷಣ್ಯವನ್ನೂ ವರ್ಣಿಸಿದ್ದಾನೆ. ಅದನ್ನು ಇದರಡಿ ಕೊಡುತ್ತೇವೆ.

"ಉತ್ತರ ಪ್ರದೇಶದೊಳಗೆ ಎಲ್ಲಿ ನೋಡಿದರೂ ದಟ್ಟಾದ ಅಡವಿಗಳೂ ಇಕ್ಕಟ್ಟಾದ ಕಾಲುದಾರಿಗಳೂ ಇರುವುವು. ಈ ದಾರಿಗಳಿಂದ ಒಳಗೆ ಹೋಗಲು ಸಾವಕಾಶವಾಗಿ ಮೇಯುತ್ತಿದ್ದ ದನಗಳೂ, ಹಸುರಾದ ಹುಲ್ಲುಗದ್ದೆಗಳೂ ಇರುವುವು. ಗಿಡದ ತೋಪುಗಳು ದಟ್ಟಾಗಿ ಬಹು ಶಾಂತವಾಗಿರುವುದರಿಂದ ಅವು ಸೃಷ್ಟಿದೇವತೆಯ ಆಶ್ರಮಗಳಂತೆ ಒಪ್ಪುತ್ತವೆ. ದಕ್ಷಿಣ ಪ್ರದೇಶದಲ್ಲಿ ಆಲಿವ್ಹ ಗಿಡಗಳ ಎಲೆ ಟೊಂಗೆಗಳ ನಡುವಿನ ಪಳಕುಗಳೊಳಗಿಂದ ವಿಸ್ತಾರವಾದ ಸಮುದ್ರವೂ, ನಿರಭ್ರವಾದ ನೀಲವರ್ಣದ ಆಕಾಶವೂ, ದೃಷ್ಟಿಗೆ ಬೀಳುತ್ತವೆ. ವನಪ್ರದೇಶದ ವಿಧವಿಧದ ಬಣ್ಣಗಳು ಸ್ವಚ್ಛವಾಗಿ ಹೊಳೆಯುತ್ತವೆ. ಬಾಲಸೂರ್ಯನು ಮೂಡಿದ ಕೂಡಲೆ ಸಮುದ್ರದ ತರಂಗಗಳಿಗೆಲ್ಲ ಹೊಳಪುಂಟಾಗುತ್ತದೆ. ಎಲ್ಲ ಕಡೆಯಲ್ಲಿಯೂ ಆನಂದೋತ್ಸಾಹಗಳ ಮಳೆಗರೆದಂತಾಗುತ್ತದೆ.

ಸೃಷ್ಟಿದೇವತೆಯು ಕೂಡ ಸಮುದ್ರದ ತರಂಗಗಳೂ, ಸೂರ್ಯನ ಕಿರಣ-ಗಳೂ, ವೃಕ್ಷಗಳ ಶಾಖೆಗಳೂ, ಆಟವಾಡಿ ನಲಿದಾಡುವಂತೆ ಕಾಣುತ್ತವೆ. ಉತ್ತರ ಪ್ರದೇಶದಲ್ಲಿ ತಗ್ಗುದಿನ್ನೆಗಳಿದ್ದುದರಿಂದ ದಟ್ಟಾಗಿ ಬೆಳೆದ ಗಿಡಗ-ಳಿಂದ ಅದಕ್ಕೆ ಶೋಭೆಯುಂಟಾಗಿದೆ. ದಕ್ಷಿಣ ಪ್ರದೇಶದಲ್ಲಿ ಬೆಳೆದ ಆಲಿವ್ಹ ಗಿಡಗಳ ಎಲೆಗಳು ತುದಿಗೆ ಚೂಪಾಗಿ ಸಣ್ಣವಿರುತ್ತವೆ. ಟೊಂಗೆ-ಗಳಾದರೂ ದಟ್ಟಾಗಿರದೆ ಬಿಡಿಬಿಡಿಯಾಗಿ ಹಬ್ಬಿರುತ್ತವೆ. ಆದಕಾರಣ ಅಲ್ಲಿಯ ಗುಡ್ಡಗಳೂ, ದಾರಿಗಳೂ, ಸಮುದ್ರದ ದಂಡೆಯೂ ಸ್ಪಷ್ಟವಾಗಿ ಕಂಗೊಳಿಸುತ್ತವೆ. ಅಲ್ಲಿಯ ನಿವಾಸಿಗಳಿಗೆ ಸೂರ್ಯನು ಅಧಿದೇವತೆ-ಯಾದುದರಿಂದ ಅವರು ತೇಜಸ್ವಿಗಳೂ ಬುದ್ಧಿವಂತರೂ ಆಗಿದ್ದಾರೆ. ಆ ಪ್ರದೇಶಕ್ಕೆ ಪ್ರಚಂಡವಾದ ದೇವದಾರು ವೃಕ್ಷಗಳಿಂದ ಶೋಭೆಯುಂಟಾ-ಗಿದೆ. ದಂಡೆಗುಂಟ ಬೆಳೆದ ತೋಟಗಳಲ್ಲಿ ಕಿತ್ತಳೆ ಹಣ್ಣಿನ ಗಿಡಗಳೂ, ಗುಲಾಬಿ ಹೂವಿನ ಗಿಡಗಳೂ ತುಂಬಿರುವವು. ಗುಡ್ಡಗಳ ಮೇಲಿನ ಅಡವಿಗಳಲ್ಲಿ ಚಿತ್ರವಿಚಿತ್ರವಾದ ಸುವಾಸನೆಯು ಪುಷ್ಪಗಳುಳ್ಳ ಅನೇಕ ತರದ ವೃಕ್ಷಗಳ ಸಾಲುಗಳು ಹಬ್ಬಿರುತ್ತವೆ. ಅಲ್ಲಿ ಬೇರೆ ಬೇರೆ ತರದ ಲತೆಗಳು ಗಿಡಗಳ ಆಶ್ರಯದಿಂದ ಬೆಳೆದು ಅವುಗಳಿಗೆ ಆಲಿಂಗನವನ್ನು ಕೊಡುವಂತೆ ಒಪ್ಪುತ್ತವೆ. ದಟ್ಟಾದ ಛಾಯೆಯಲ್ಲಿ ದ್ರಾಕ್ಷೆಯ ಬಳ್ಳಿ-ಗಳು ದ್ರಾಕ್ಷೆಯ ಗೊಂಚಲುಗಳಿಂದ ಕೆಳಗೆ ಬಗ್ಗಿರುತ್ತವೆ, ಮತ್ತು ಪಕ್ಷಿ-ಗಳು ಅವುಗಳ ಮೇಲೆ ಕುಳಿತು ದ್ರಾಕ್ಷಾಫಲದ ಆಸ್ವಾದವನ್ನು ತೆಗೆದು-ಕೊಳ್ಳುತ್ತವೆ. ಇಂತಹ ಸುಂದರವಾದ ವನದಲ್ಲಿ ಅನೇಕ ಪ್ರಕಾರದ ಮನೋಹರ ಧ್ವನಿಗಳು ಕೇಳಬರುತ್ತವೆ. ಭ್ರಮರಗಳ ಗುಂಜಾರವವೂ, ಕೋಗಿಲೆಗಳ ಮಂಜುಳ ಗಾನವೂ, ಪಾರಿವಾಳಗಳ ಕಿಲಕಿಲವೂ, ಮಂದ-ವಾಗಿ ಪ್ರವಹಿಸುತ್ತಿರುವ ಹಳ್ಳಗಳ ಜುಳುಜುಳು ಸಪ್ಪಳವೂ, ಗಾಳಿಯ ಪ್ರವಾಹದಿಂದುಂಟಾಗುವ “ಸುಳ್” ಎಂಬ ಧ್ವನಿಯೂ ಆನಂದ-ವನ್ನುಂಟುಮಾಡುತ್ತವೆ. ಈ ಪ್ರದೇಶದಲ್ಲಿ ಭೂಮಿಯೂ ಸಮುದ್ರವೂ ಏಕಪ್ರಕಾರವಾಗಿ ತೋರುತ್ತವೆ. ಗುಡ್ಡಗಳ ಮೇಲೆ ಏರಿದ ಹಾಗೆ ಸಮುದ್ರದ ಸೌಂದರ್ಯವು ಹೆಚ್ಚು ಹೆಚ್ಚು ದೃಗ್ಗೋಚರವಾಗಹತ್ತುತ್ತದೆ.

ದೂರದಲ್ಲಿದ್ದ ನಡುಗುಡ್ಡೆಗಳೂ, ಹಡಗುಗಳ ಬಿಳಿಯ ನಿಶಾನಿಗಳೂ, ವಿಸ್ತಾರವಾದ ಜಲಸಂಚಯಕ್ಕೆ ಶೋಭೆಯನ್ನುಂಟುಮಾಡುತ್ತವೆ. ಕೆಲ-ವೆಡೆಯಲ್ಲಿ ಸಮುದ್ರದ ಒತ್ತು ಸುತ್ತಲೂ ಆಲಿವ್ಹ ಗಿಡಗಳ ಚೌಕಟ್ಟುಳ್ಳ ಕೈಗನ್ನಡಿಯಂತೆ ಒಪ್ಪುತ್ತದೆ."

ಉಷ್ಣಕಟಿಬಂಧದಲ್ಲಿ ಸೂರ್ಯೋದಯದ ಶೋಭೆಯಾದರೂ ಮನೋ-ಹರವಾಗಿರುವುದು.

"ಕತ್ತಲೆಯು ಬಯಲಾಗಿ ಕ್ಷಿತಿಜದ ಮೇಲೆ ಅರುಣೋದಯದ ಚಿಹ್ನಗಳು ಕಾಣಹತ್ತಿದ ಕೂಡಲೆ ಪಕ್ಷಿಗಳ ಮಂದವಾದ "ಕಿಲಕಿಲ" ಧ್ವನಿಯು ಕೇಳಬರುತ್ತದೆ. ಇದಾದ ಸ್ವಲ್ಪ ಹೊತ್ತಿನ ಮೇಲೆ ಅನೇಕ ಪಶುಪಕ್ಷಿಗಳು ಎಚ್ಚರಾಗಿ ಕೂಗಾಡಹತ್ತುತ್ತವೆ. ಮುಂದೆ ಸೂರ್ಯನ ಪ್ರಕಾಶವು ಹೆಚ್ಚಾಗುತ್ತಹೋಗಿ ಅರೆಗಳಿಗೆಯಲ್ಲಿ ತೇಜಃಪುಂಜವಾದ ಸೂರ್ಯಬಿಂಬವು ದೃಗ್ಗೋಚರವಾಗುತ್ತದೆ. ಆಗ ಮಂಜಿನ ಹನಿಗಳು ಮುತ್ತುರತ್ನಗಳಂತೆ ಹೊಳೆಯುಹತ್ತುತ್ತವೆ, ಮತ್ತು ಬಂಗಾರದಂಥ ಪ್ರಕಾಶವು ಎಲ್ಲ ಕಡೆಗೂ ಪಸರಿಸಿ ಎಲ್ಲ ಪ್ರಾಣಿಗಳಿಗೆ ಆನಂದವನ್ನುಂಟು-ಮಾಡುತ್ತದೆ. ತಮಗಾದ ಆನಂದವನ್ನು ವ್ಯಕ್ತಪಡಿಸಲಿಕ್ಕೆ ಪ್ರಾಣಿಗಳು ಅನೇಕ ಪ್ರಕಾರದ ಧ್ವನಿಯನ್ನುಂಟುಮಾಡುತ್ತವೆ. ಚಿತ್ರಕಾರರಾಗಲಿ ಕವಿಗಳಾಗಲಿ ಇಂಥ ಸೃಷ್ಟಿಸೌಂದರ್ಯದ ಯಥಾಸ್ಥಿತ ವರ್ಣನೆಯನ್ನು ಮಾಡಲಾರರು."

ಇದರಂತಹ ಮನೋಹರವಾದ ಅನೇಕ ವರ್ಣನೆಗಳನ್ನು ಇದರಡಿ ಕೊಡಬೇಕೆಂಬ ಅಭಿಲಾಷೆಯುಂಟಾಗುತ್ತದೆ. ಆದರೆ ಮೇಲೆ ಬರೆದ ವರ್ಣನೆಗಳು ಸಾಕಷ್ಟಾದುದರಿಂದ ಇನ್ನು ಮುಂದೆ ಇಂತಹ ವರ್ಣನೆ-ಗಳನ್ನು ಇಲ್ಲಿ ಕೊಡುವ ಮೋಹಕ್ಕೆ ಒಳಗಾಗುವುದಿಲ್ಲ. ಇಂತಹ ವರ್ಣನೆಗಳನ್ನು ಓದುವುದರಿಂದ ಪ್ರವಾಸದಲ್ಲಿ ಕಳೆದ ಆನಂದದ ದಿವಸ-ಗಳ ನೆನಪು ನಮಗಾಗುತ್ತದೆ. ಯಾಕೆಂದರೆ ನಾವು ನಮ್ಮ ಗೃಹಗಳಲ್ಲಿ-ದ್ದರೂ ಕೂಡ * "ಹ್ವೆನಿಸ, ಜಿನೋಆ ಮೊದಲಾದ ಸುಂದರ ಸ್ಥಳಗಳ

* ಹೆಲ್ಪ್ಸ.

ಮನೋಹರವಾದ ರೂಪವು ಸ್ಮೃತಿಪಥಕ್ಕೆ ಬರುವುದರಿಂದ ಅವುಗಳನ್ನು ಪ್ರತ್ಯಕ್ಷ ನೋಡುವುದರಿಂದ ಆದಷ್ಟು ಆನಂದವು ನಮಗೆ ಆಗುವುದು."

ಶ್ರಮಮಾಡಿದ ಮೇಲೆ ವಿಶ್ರಾಂತಿಯು ದೊರೆತರೆ ಸುಖವಾಗುವುದು. ವಿಶ್ರಾಂತಿಯ ಕಾಲವು ತೀರಿದ ಮೇಲೆ ಮತ್ತೆ ಶ್ರಮಮಾಡದೆ ಹೋದರೆ ಬೇಸರಿಕೆಯುಂಟಾಗುವುದು. ಅದರಂತೆಯೇ ಪ್ರವಾಸಮಾಡುವುದರಿಂದ ಗೃಹಸುಖವು ಹೆಚ್ಚಾಗುತ್ತದೆ. ಆದುದರಿಂದ ಗೃಹಸುಖವನ್ನು ಪೂರ್ಣವಾಗಿ ಉಪಭೋಗಿಸಲಿಕ್ಕೆ ಮೇಲಿಂದ ಮೇಲೆ ಪ್ರವಾಸಮಾಡುತ್ತಿರಬೇಕು. ಗೃಹಸುಖವು ವಿಶ್ರಾಂತಿಯಂತೆಯೂ ಪ್ರವಾಸವು ಶ್ರಮದಂತೆಯೂ ಇರುವುವು.

# ೮ನೆಯ ಅಧ್ಯಾಯ.

---

## ಗೃಹಸುಖ.

ಕೈಕೊಂಡ ಕೆಲಸವನ್ನು ದಕ್ಷತೆಯಿಂದಲೂ ಶ್ರಮದಿಂದಲೂ ಕೊನೆಗಾಣಿಸಿದ ಮೇಲೆ ವಿಶ್ರಾಂತಿಯು ದೊರಕುವುದು. ಆ ಕಾಲದಲ್ಲಿ ಬೇರೆ ಬೇರೆ ದೇಶಗಳೊಳಗೆ ಪ್ರವಾಸಮಾಡಿ ಹೊಸ ವಿಚಾರಗಳಿಂದ ಮನಸ್ಸನ್ನು ಸುಪ್ರಸನ್ನವಾಗಿಯೂ ಸುಸಂಸ್ಕೃತವಾಗಿಯೂ ಮಾಡಿಕೊಂಡು ತಿರುಗಿ ಬರುವುದು ಬಹಳ ಸಂತೋಷದ ಸಂಗತಿಯೆಂದು ಧಾರಾಳವಾಗಿ ಹೇಳಬಹುದು.

ಈ ಮಾತಿಗೆ ಅನೇಕರ ಒಪ್ಪಿಗೆಯಿದ್ದಂತೆ ಕಂಡುಬರುವುದಿಲ್ಲ. ಯಾಕೆಂದರೆ "ಮನೆಯಲ್ಲಿದ್ದುಕೊಂಡು ಅನುಭವಿಕ ಪ್ರವಾಸಿಕನ ವೃತ್ತಾಂತಗಳನ್ನು ಓದುವುದರಿಂದ ಆಗುವ ಆನಂದವು ಮಿಗಿಲಾದುದೆಂದು" ಲೀಹಂಟ್ ಎಂಬ ಗ್ರಂಥಕರ್ತ್ರಿಯು ಬರೆದಿದ್ದಾಳೆ.

ದೂರದೂರ ದೇಶಗಳಿಗೆ ಹೋಗಿ ಅಲ್ಲಿದ್ದ ರಮಣೀಯ ಸ್ಥಳಗಳನ್ನು ನೋಡುವುದರಿಂದಾಗಲಿ, ಜಲಪರ್ಯಟಣ ಮಾಡಿ ಹೊಸ ಹೊಸ ಪ್ರದೇಶಗಳನ್ನು ಶೋಧಿಸಲಿಕ್ಕೆ ಪ್ರಯತ್ನ ಮಾಡುವುದರಿಂದಾಗಲಿ, ಆನಂದವು ಆಗುತ್ತದೆಂಬ ಮಾತು ನಿಜವು. ಆದರೂ ಕಪ್ತಾನ್ ಕುಕ್, ಮಂಗೋಪಾರ್ಕ್ ಮೊದಲಾದ ಪ್ರಸಿದ್ಧ ಪ್ರವಾಸಿಕರ ವೃತ್ತಾಂತಗಳನ್ನು ಓದುವುದರಿಂದ ಬೇರೆ ಬೇರೆ ದೇಶಗಳಲ್ಲಿ ನೆಲೆಗೊಂಡ ಸಮಾಜಪದ್ಧತಿ, ರಾಜ್ಯವ್ಯವಸ್ಥೆಗಳ ಜ್ಞಾನವು ನಮಗುಂಟಾಗುವುದು; ಮತ್ತು ಪ್ರವಾಸಮಾಡದೆ ಅಲ್ಲಿದ್ದ ಸೃಷ್ಟಿಸೌಂದರ್ಯವನ್ನು ನೋಡಿದಂತಾಗುವುದು. ಋತುಗಳು ಬದಲಾಗುವುದರಿಂದ ನಾವಿದ್ದ ಮನೆಯ ಸುತ್ತಲಿನ ಸೃಷ್ಟಿವೈಭವವು ಬದಲಾಗುತ್ತಿರುತ್ತದೆ. ವಸಂತಋತುವಿನಲ್ಲಿ ಗಿಡಗಳಿಗೆ ಚಿಗುರು, ಎಲೆ, ಹೂಗಳು ಬಿಡುವುದರಿಂದಲೂ, ಮಳೆಗಾಲದಲ್ಲಿ ಹೊಳೆಹಳ್ಳಗಳು ಮೇರೆ-

ದಪ್ಪಿ ಹರಿಯುವುದರಿಂದಲೂ, ದಟ್ಟವಾಗಿ ಬೆಳೆದ ಎಲೆಗಳಿಂದ ಗಿಡಗಳಿ-ಗುಂಟಾಗುವ ಶೋಭೆಯಿಂದಲೂ, ಹಚ್ಚಗೆ ಹಸುರು ಮುರಿಯುವ ಹುಲ್ಲುಗದ್ದೆಗಳಿಂದಲೂ, ಚಳಿಗಾಲದಲ್ಲಿ ಕೊಯ್ಯಲಿಕ್ಕೆ ಬಂದ ಬೆಳೆ-ಯಿಂದಲೂ, ಸೃಷ್ಟಿದೇವತೆಗೆ ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಪ್ರಕಾ-ರದ ಸೌಂದರ್ಯವುಂಟಾಗುತ್ತದೆ. ಇದರಂತೆಯೇ ಆಕಾಶದ ಶೋಭೆ-ಯನ್ನು ನೋಡುವುದರಿಂದಾದರೂ ಆನಂದವಾಗುವುದು. ಸೂರ್ಯೋ-ದಯ ಸೂರ್ಯಾಸ್ತ ಸಮಯಗಳಲ್ಲಿ ಆಕಾಶದ ಶೋಭೆಯು ಬಹು ಮನೋಹರವಾಗಿರುವುದು. ಅದರಂತೆಯೇ ಬೆಳದಿಂಗಳಿಂದಾದರೂ ಮನಸ್ಸಿಗೆ ಆಹ್ಲಾದವಾಗುವುದು. ಕೃಷ್ಣಪಕ್ಷದ ರಾತ್ರಿಗಳಲ್ಲಿ ಸಹ ಆಕಾ-ಶದ ಕಡೆಗೆ ನೋಡಿದರೆ ಅಸಂಖ್ಯವಾದ ಗ್ರಹಗಳೂ ನಕ್ಷತ್ರಗಳೂ ದೃಷ್ಟಿಗೆ ಬೀಳುವುದರಿಂದ ಸಂತೋಷವಾಗುವುದು.

ಸೂರ್ಯೋದಯದ ಕಾಲಕ್ಕೆ ಆಕಾಶದ ಸೌಂದರ್ಯವು ಯಾವ ಪ್ರಕಾರದ್ದೆಂಬುದನ್ನು ನೋಡುವ! "ಮೊದಲು ಆಕಾಶದಲ್ಲಿ ಹೊಂಬ-ಣ್ಣವು ಹೊಳೆಯಹತ್ತುತ್ತದೆ. ಆ ಮೇಲೆ ಕಣ್ಣುಕುಕ್ಕುವಂತಹ ಪ್ರಕಾ-ಶವು ಕ್ಷಿತಿಜದ ಮೇಲೆ ಕಾಣಹತ್ತುವುದು. ಸೂರ್ಯಬಿಂಬವು ಅರ್ಧ-ಮರ್ಧ ಮೂಡಿತೆನ್ನುವಷ್ಟರೊಳಗೆ ಪೂರ್ಣಬಿಂಬವೇ ಉದಯವಾಗುತ್ತದೆ. ಆಗ ಪ್ರಕಾಶವು ಕಣ್ಣುಕುಕ್ಕುತ್ತಿರುವುದರಿಂದ ಸೂರ್ಯಬಿಂಬದ ಕಡೆಗೆ ಹೆಚ್ಚು ಹೊತ್ತು ದಿಟ್ಟಿಸಿ ನೋಡುವುದು ಅಸಾಧ್ಯವು; ನೋಡಲು ಪ್ರಯತ್ನ ಮಾಡಿದರೂ ಅದು ಸಫಲವಾಗದು."

ಸೂರ್ಯೋದಯ ಸೂರ್ಯಾಸ್ತದ ಕಾಲವು ಬಹು ರಮಣೀಯ-ವಾಗಿರುವುದು. ರಸ್ಕಿನ್ನನು ಸೂರ್ಯೋದಯ ಕಾಲಕ್ಕೆ ಉಂಟಾಗುವ ಆಕಾಶದ ಶೋಭೆಯನ್ನು ಅಪ್ರತಿಮ ರೀತಿಯಿಂದ ವರ್ಣಿಸಿದ್ದಾನೆ. "ಆಕಾಶವೆಲ್ಲ ಕರಗಿ ನೀರಾದ ಕೆಂಬಣ್ಣದ ಸಮುದ್ರದಂತೆ ಅಥವಾ ಪ್ರಜ್ವಲಿಸುವ ದಾವಾನಲದಂತೆ ತೋರುತ್ತದೆ. ನೀಲವರ್ಣದ ಮೋಡ-ಗಳೆಲ್ಲ ಬಂಗಾರದ ತಗಡಿನಂತೆ ಹೊಳೆಯಹತ್ತುತ್ತವೆ. ಸೂರ್ಯಕಿರಣ-ಗಳಿಂದುಂಟಾದ ಕೆಂಪು, ಕಿತ್ತಳೆ, ಹಳದಿ, ಹಸುರು, ನೀಲಿ ಮೊದಲಾದ

ಬಣ್ಣಗಳಿಂದ ಆಕಾಶಕ್ಕೆ ಒಂದು ವಿಶಿಷ್ಟ ಪ್ರಕಾರದ ಶೋಭೆಯುಂಟಾಗುತ್ತದೆ.” ಆಕಾಶದ ಶೋಭೆಯು ಮೇಲಿಂದ ಮೇಲೆ ಬದಲಾಗುತ್ತ ಹೋದರೂ ಎಷ್ಟೋ ಜನರಿಗೆ ಈ ಸಂಗತಿಯು ಗೊತ್ತಿರುವುದಿಲ್ಲೆಂಬ ಮಾತು ಆಶ್ಚರ್ಯಕರವಾಗಿದೆ. ದೇವರಿಂದ ನಿರ್ಮಿತವಾದ ಸೃಷ್ಟಿಯಲ್ಲಿ ಆಕಾಶವು ಒಂದಾಗಿದ್ದು ಅದರಿಂದ ಮನುಷ್ಯನಿಗೆ ಉಳಿದ ಎಲ್ಲ ಸೃಷ್ಟಪದಾರ್ಥಗಳಿಗಿಂತ ಹೆಚ್ಚು ಮನೋರಂಜನವೂ ಬೋಧವೂ ಆಗಬೇಕೆಂದು ದೇವರ ಉದ್ದೇಶವಿದ್ದಂತೆ ಕಂಡುಬರುತ್ತದೆ. ಹೀಗಿದ್ದು ನಾವು ಅದನ್ನು ದುರ್ಲಕ್ಷಿಸುತ್ತೇವೆ. ಎಲ್ಲ ಸೃಷ್ಟಪದಾರ್ಥಗಳು ಮಾನವ ಪ್ರಾಣಿಯ ಮನೋರಂಜನೆಗಾಗಿಯೇ ನಿರ್ಮಿತವಾಗಿಲ್ಲವೆಂಬುದು ಸ್ಪಷ್ಟವು. ಯಾಕೆಂದರೆ ಅದಕ್ಕಿಂತ ಮಹತ್ವವಾದ ಎರಡನೆಯ ಕಾರಣಗಳು ಅನೇಕವಾಗಿರುವುವು. ಆದರೆ ಆಕಾಶದ ಮಾತು ಬೇರೆ; ಯಾಕೆಂದರೆ ಆಕಾಶದ ಸ್ವರೂಪವು ಪ್ರತಿಕ್ಷಣಕ್ಕೊಮ್ಮೆ ಬದಲಾಗುತ್ತ ಹೋಗಿ ಅಧರಲ್ಲಿ ಅನೇಕ ಪ್ರಕಾರದ ನೋಟಗಳೂ, ಚಿತ್ರಗಳೂ, ಆಕಾರಗಳೂ ದೃಷ್ಟಿಗೆ ಬೀಳುತ್ತವೆ. ಆದುದರಿಂದ ಆಕಾಶವು ಮನುಷ್ಯನ ಸುಖದ ಸಲುವಾಗಿಯೇ ನಿರ್ಮಿಸಲ್ಪಟ್ಟಿರಬಹುದೆಂದು ಊಹಿಸಬಹುದು.

ರಾತ್ರಿಯಾದ ಕೂಡಲೆ ಬಾಗಿಲು ಕಿಡಿಕಿಗಳನ್ನು ಇಕ್ಕಿಕೊಂಡು ಕೂಡ್ರುವ ಪದ್ಧತಿಯು ನಮ್ಮಲ್ಲಿ ವಾಡಿಕೆಯಾಗಿದ್ದರೂ ಅದು ಸರಿಯಾದುದೆಂದು ಹೇಳಲಾಗದು. ಯಾಕೆಂದರೆ ರಾತ್ರಿಯಲ್ಲಿ ಚಂದ್ರನೂ, ಅಸಂಖ್ಯವಾದ ನಕ್ಷತ್ರಗಳೂ ಮನಸ್ಸಿಗೆ ಆಹ್ಲಾದವನ್ನುಂಟುಮಾಡುವುವು. ಈ ಸಂಬಂಧದಿಂದ “ಸೌದೆ” ಎಂಬ ಆಂಗ್ಲಕವಿಯ ಉದ್ಗಾರವನ್ನು ಇಲ್ಲಿ ಹೇಳದೆ ಇರಲಾರೆವು. “ರಾತ್ರಿಯು ಎಷ್ಟು ಸುಂದರವಾದುದೆಂಬುದನ್ನು ನೋಡಿರಿ! ಎಲ್ಲ ಕಡೆಗೆ ಶಾಂತವಾಗಿರುವುದರಿಂದ ಎಲ್ಲ ಪ್ರಾಣಿಗಳಿಗೂ ಸುಖಸಮಾಧಾನವುಂಟಾಗಿದೆ. ಇಬ್ಬನಿಯಿಂದಾಗಲಿ, ಮೋಡಗಳಿಂದಾಗಲಿ ಆಕಾಶದ ಶೋಭೆಯು ಮರೆಯಾಗಿಲ್ಲ. ಚಂದ್ರನು ಪೂರ್ಣ ವೈಭವದಿಂದ ಶುಭ್ರವಾದ ನೀಲವರ್ಣದ ಆಕಾಶದೊಳಗಿಂದ ತನ್ನ ಮಾರ್ಗವನ್ನು ಕ್ರಮಿಸುತ್ತಿರುವನು, ಅಹಹಾ! ರಜನಿಯು ಚಂದ್ರ-

ಸಿಂದ ಎಷ್ಟು ಶೋಭೆಯುಳ್ಳದ್ದಾಗಿದೆ! ಆದುದರಿಂದಲೇ ಚಂದ್ರನನ್ನು ಜನರು ಪೂಜಿಸುತ್ತಿರುವರು."

ನಿಜವಾಗಿ ನೋಡಲು ಗೃಹಸುಖವು ಮನೆಯಲ್ಲಿ ದೊರಕುವುದೇ ಹೊರತು ಬೇರೆ ಕಡೆಯಲ್ಲಿ ದೊರಕಲಾರದು. ಮನೆಯಲ್ಲಿದ್ದು ಕುಟುಂಬದ ಜನರ ಕೂಡ ಹಿತದ ಸಲ್ಲಾಪಗಳನ್ನು ಆಡುವಂತಹ ಗೃಹಸ್ಥನ ಸುಖಕ್ಕೆ ಎಣೆಯೇ ಇಲ್ಲ. ಇಂತಹ ಸಂತೋಷವು ಉಳಿದವರಿಗೆ ಸ್ವಪ್ನದಲ್ಲಿ ಸಹ ದೊರಕದು. ಕುಟುಂಬದ ಜನರ ಶರೀರಗಳು ಭಿನ್ನಭಿನ್ನವಾದರೂ ಪ್ರೇಮದ ಮೂಲಕ ಅವರ ಆತ್ಮವು ಒಂದೇ.

* "ಗೃಹಸುಖದ ಮಾಧುರ್ಯವನ್ನು ಎಷ್ಟು ವರ್ಣಿಸಿದರೂ ಕಡಿಮೆ. ಎಲ್ಲಿ ನಿರ್ಮಲವಾದ ಮನಸ್ಸೂ, ನಿಷ್ಕಪಟವಾದ ಪ್ರೇಮವೂ, ಅನ್ಯೋನ್ಯಾಭಿಮಾನವೂ ಇರುತ್ತವೆಯೋ ಅಲ್ಲಿ ಸುಖಸಾಧನಗಳು ಹೇರಳವಾಗಿವೆ."

ಮನೆಯಲ್ಲಿ ಹೆಂಡಿರು ಮಕ್ಕಳ ಸಹವಾಸದಲ್ಲಿ ಸುಖವಾಗುತ್ತದೆಂಬ ಮಾತು ನಿರ್ವಿವಾದವು; ಆದರೆ ನಾವು ಅಲ್ಲಿ ಒಬ್ಬರೇ ಇದ್ದರೂ ಕೂಡ ಹಿಂದಿನ ಕಾಲದ ನೆನಪಾಗಿ ಚಿಕ್ಕಂದಿನಲ್ಲಿ ಆಟವಾಡಿದ ಸ್ಥಳಗಳೂ, ತಿರುಗಾಡುತ್ತಿದ್ದ ಹೊಲಗಳೂ, ತೋಟಗಳೂ, ಅಲ್ಲಿ ಆಡುತ್ತಿದ್ದ ಆಟಗಳೂ, ಆಗಿದ್ದ ಸಂಗಡಿಗರೂ, ನಮ್ಮ ಕಣ್ಣೆದುರಿಗೆ ನಿಂತಂತಾಗಿ ಮನಸ್ಸಿಗೆ ಸಮಾಧಾನವುಂಟಾಗುವುದು.

ಗೃಹಿಣಿಯಿಲ್ಲದೆ ಗೃಹಸುಖವು ಸಿಗಲಾರದು. ಸಂಸ್ಕೃತ ಸುಭಾಷಿತಕಾರರು ಗೃಹಿಣಿಯಿಲ್ಲದೆ ಗೃಹವಾಗದು; ಗೃಹಿಣಿಯಿಲ್ಲದ ಮನೆಯು ಅಡವಿಗಿಂತಲೂ ಕಡೆ ಎಂದು ಹೇಳಿದ್ದಾರೆ.

**न गृहं गृहमित्याहुर्गृहिणी गृहमुच्यते ।**
**गृहं तु गृहिणीहीनं कान्तारादतिरिच्यते ॥**

ಗೃಹಿಣಿಯಿದ್ದ ಮನೆಯಲ್ಲಿ ಗ್ರಂಥಸಂಗ್ರಹವೂ, ಸುತ್ತಲೂ ಹೂದೋಟವೂ ಇದ್ದರೆ ಅನುಪಮವಾದ ಸುಖವುಂಟಾಗುತ್ತದೆಂದು ಕಾವಲೆ ಎಂಬ ಗ್ರಂಥಕಾರನು ಅನ್ನುತ್ತಾನೆ.

---

* ಶೆಬಲ್.

ಸತಿಯು ಯಾವ ಪ್ರಕಾರದವಳಿರಬೇಕೆಂಬುದನ್ನು ಸುಭಾಷಿತಕಾರರು ಸ್ವಲ್ಪದರದಲ್ಲಿಯೇ ಹೇಳಿರುವರು.

**साध्वी शीलवती दयावसुमती दाक्षिण्यलज्जावती ।**
**तन्वी व्याजपराङ्मुखी स्मितवती मुग्धाप्रियालापिनी ॥**
**देवब्राह्मणबन्धुसज्जनरता यस्यास्ति भार्या गृहे ।**
**तस्यार्थागमकाममोक्षफलदाः कुर्वन्ति पुण्यं क्रियाः ॥**

(ಸಾಧ್ವಿಯೂ, ಶೀಲವಂತಳೂ, ದಯೆಯುಳ್ಳವಳೂ, ಬುದ್ಧಿವಂತಳೂ, ದಾಕ್ಷಿಣ್ಯವುಳ್ಳವಳೂ, ವಿನಯವುಳ್ಳವಳೂ, ಲಾವಣ್ಯವತಿಯೂ, ಕಪಟರಹಿತಳೂ, ಸ್ಮಿತವದನೆಯೂ, ಸವಿ ಮಾತಾಡುವವಳೂ, ದೇವಬ್ರಾಹ್ಮಣರನ್ನು ಸತ್ಕರಿಸುವವಳೂ, ಬಂಧು ಸಜ್ಜನರನ್ನು ಆದರಿಸುವವಳೂ ಆದ ಗೃಹಿಣಿಯು ಅರ್ಥ, ಕಾಮ, ಮೋಕ್ಷಗಳೆಂಬ ಫಲಗಳನ್ನು ಲಭಿಸಿಕೊಡುವಳು.)

ಕಾಡುಸ್ಥಿತಿಯಲ್ಲಿದ್ದ ಜನರಿಗೆ ಗೃಹಸುಖದ ಕಲ್ಪನೆಯೇ ಇಲ್ಲ. ಉತ್ತರ ಅಮೇರಿಕದ ಅಲ್ಗಾನಕ್ವಿನ್ ಎಂಬ ಜನರ ಭಾಷೆಯಲ್ಲಿ ಪ್ರೀತಿಗೆ ಸರಿಯಾದ ಶಬ್ದವೇ ಇಲ್ಲ. ಪ್ರಾಚೀನಕಾಲದಲ್ಲಿ ಗ್ರೀಕಜನರು ಹೆಂಡಂದಿರನ್ನು ದಾಸಿಯರಂತೆ ನಡಿಸಿಕೊಳ್ಳುತ್ತಿದ್ದರು. ಈಗ ಸಹ ಎಷ್ಟೋ ಸುಧಾರಿಸದೆ ಇದ್ದ ದೇಶಗಳಲ್ಲಿ ಹೆಂಗಸರು ಗುಲಾಮರೆಂಬ ತಪ್ಪು ತಿಳಿವಳಿಕೆಯೇ ಪ್ರಚಾರದಲ್ಲಿದೆ. ಸೆಂಟ ಕ್ರೈಸೊಸ್ಟಾಮ್ ಎಂಬ ಗ್ರಂಥಕಾರನು ಸ್ತ್ರೀಯರ ವಿಷಯವಾಗಿ ಒಂದು ವಿಲಕ್ಷಣವಾದ ಅಭಿಪ್ರಾಯವನ್ನು ಬರೆದಿಟ್ಟಿದ್ದಾನೆ. "ಸ್ತ್ರೀಯು ಅಪರಿಹಾರ್ಯವಾದ ಅರಿಷ್ಟವೂ, ಸ್ವಾಭಾವಿಕವಾದ ಮೋಹವೂ, ಇಷ್ಟವಾದ ವಿಪತ್ತಿಯೂ, ಪ್ರಾಣಘಾತುಕ ಜಾಲವೂ, ಬಾಹ್ಯವು ಸುಂದರವಾದರೂ ಅಂತರಂಗದಲ್ಲಿ ಅನಿಷ್ಟದ ಮೂರ್ತಿಯೂ ಆಗಿರುವಳು." ಆದರೆ ಈ ಅಭಿಪ್ರಾಯವನ್ನು ಓದಿದ ಪ್ರಾಪಂಚಿಕರಿಗೆ ವಿಸ್ಮಯವಾಗದೆ ಇರದು. ಸಂನ್ಯಾಸಿಗಳಿಗೆ ಮಾತ್ರ ಮೇಲಿನ ಅಭಿಪ್ರಾಯವು ನಿಜವೆಂದು ಕಂಡರೂ ಕಾಣಬಹುದು.

"**यत्र नार्यस्तु पूज्यंते रमन्ते तत्र देवताः**" ಎಂದು ನಮ್ಮ ಸ್ಮೃತಿಕಾರರೊಬ್ಬರು ಹೇಳಿರುವರು. ಅದರ ಮೇಲಿಂದ ಸ್ತ್ರೀಯರ ವಿಷಯವಾಗಿ

ನಮ್ಮ ಜನರೊಳಗೆ ಪೂರ್ವದಲ್ಲಿ ಸಹ ಎಷ್ಟು ಪೂಜ್ಯಬುದ್ಧಿಯಿತ್ತೆಂಬುದು ಸ್ಪಷ್ಟವಾಗುತ್ತದೆ.

ವಧೂವರರಲ್ಲಿ ಪರಸ್ಪರ ಪ್ರೇಮವಿಲ್ಲದೆ ಇದ್ದಾಗ ವಿವಾಹವನ್ನು ಮಾಡುವುದರಿಂದ ದಂಪತಿಗಳಿಗೆ ಎಳ್ಳಷ್ಟಾದರೂ ಸುಖವಾಗದೆ ಅವರು ಅಸಂಖ್ಯವಾದ ದುಃಖಗಳಿಗೆ ಗುರಿಯಾಗುತ್ತಾರೆ. ಇಂತಹ ವಿವಾಹ-ಗಳು ಆಗದೆ ಇರುವುದು ದೇಶಕ್ಕೆ ಹಿತವು. ಈ ವಿಷಯವಾಗಿ ಒಂದು ಕಥೆಯುಂಟು. ಒಂದು ದೇಶದಲ್ಲಿ ಒಬ್ಬ ಕುಶಲಶಿಲ್ಪಿಗನು ಬೆಳ್ಳಿಬಂಗಾರ-ಗಳಿಂದ ಒಂದು ಸುಂದರವಾದ ಪುತ್ತಳಿಯನ್ನು ಮಾಡಿ ಅರಸನಿಗೆ ಕಾಣಿಕೆ ಕೊಟ್ಟನು. ಅರಸನು ಅದರ ಸೌಂದರ್ಯಕ್ಕೆ ಮೋಹಿಸಿ ಅದನ್ನು ಮದುವೆ-ಯಾದನು. ಆದರೆ ಅವನು ಪ್ರೀತಿಯಿಂದ ಅದಕ್ಕೆ ಆಲಿಂಗನ ಮಾಡಿದ ಕೂಡಲೆ ಅದು ಮಂಜಿನಂತೆ ತಣ್ಣಗೆ ಹತ್ತಿದ್ದರಿಂದ ಮೈಯಲ್ಲಿ ಅವನಿಗೆ ಚಳಿ ಬಂದಂತೆ ಆಯಿತು. ಪ್ರೇಮವಿಲ್ಲದ ದಂಪತಿಗಳ ಅವಸ್ಥೆಯಾದರೂ ಹೀಗೆಯೇ ಸರಿ. ಇಂತಹವರಿಗೆ ಗೃಹ ಸುಖವೆಲ್ಲಿ?

ಕುಟುಂಬದಲ್ಲಿ ಕ್ಷುಲ್ಲಕ ಜಗಳಗಳಿಂದಾಗಲಿ, ತಪ್ಪು ತಿಳಿವಳಿಕೆ-ಯಿಂದಾಗಲಿ, ಸಿಟ್ಟಿನಭರದಲ್ಲಿ ಆಡಿದ ಮಾತುಗಳಿಂದಾಗಲಿ, ಒಮ್ಮೊಮ್ಮೆ ಗೃಹಸುಖವು ಕಡಿಮೆಯಾಗಬಹುದು. ಆದರೆ ಕುಟುಂಬದ ಜನರಲ್ಲಿ ಅಪರಾಧಗಳನ್ನು ಸಹಿಸಿಕೊಳ್ಳುವಂತಹ ಕ್ಷಮಾಗುಣವಿದ್ದರೆ ಮನಸ್ತಾಪ-ಗಳೆಲ್ಲ ಇಲ್ಲದಂತಾಗಿ ಗೃಹಸುಖವು ಹೆಚ್ಚಾಗುವುದು. ಇಂತಹ ಕ್ಷಮಾ-ಗುಣವನ್ನು ಅಭ್ಯಾಸದಿಂದಾದರೂ ದೊರಕಿಸುವುದು ಶ್ರೇಯಸ್ಕರವು. ಸಂಸಾರದ ಯಾತನೆಗಳಿಂದಲೂ, ಸಂಕಟಗಳಿಂದಲೂ ಮನಸ್ಸು ವ್ಯಗ್ರ-ವಾದಾಗ ಸುಖಶಾಂತಿಯನ್ನು ಹೊಂದತಕ್ಕ ಸ್ಥಾನವೇ ಗೃಹವು. ಆದು-ದರಿಂದ ಗೃಹಸುಖವು ದೊರೆಯಬೇಕೆಂಬ ಒಣ ಅಪೇಕ್ಷೆಯಿಂದಲೇ ತೃಪ್ತರಾಗದೆ ಮನಮುಟ್ಟಿ ಯತ್ನಮಾಡಿ ಅದನ್ನು ದೊರಕಿಸುವ ಉಪಾಯ-ವನ್ನು ಮಾಡಬೇಕು. ಮನೆಯ ಹೊರಗಿನ ಜನರೆಲ್ಲರೂ ನಮ್ಮ ದ್ವೇಷಿ-ಗಳಾದರೂ ಕುಟುಂಬದ ಜನರ ಪ್ರೀತಿಯಿಂದ ನಮ್ಮ ದುಃಖಗಳೆಲ್ಲ ಬಯಲಾಗಿ ನಮಗೆ ಸುಖವಾಗುವುದು ನಿಜವು.

---

# ೯ನೆಯ ಅಧ್ಯಾಯ.

## ಶಾಸ್ತ್ರಾಭ್ಯಾಸ.

**अनेकसंशयोच्छेदि परोक्षार्थस्य दर्शकम् ।**
**सर्वस्य लोचनं शास्त्रं यस्य नास्त्यंध एव सः ॥** —सुभाषित.

(ಶಾಸ್ತ್ರವು ಸಂಶಯಗಳನ್ನೆಲ್ಲ ನಿವಾರಿಸುವುದು, ಅಪ್ರತ್ಯಕ್ಷವಾದುದನ್ನು ಪ್ರತ್ಯಕ್ಷಿಸುವುದು. ಮತ್ತು ಅದು ಎಲ್ಲರಿಗೂ ಕಣ್ಣಿನಂತೆ ಇರುವುದು. ಆದುದರಿಂದ ಶಾಸ್ತ್ರವನ್ನು ಅಭ್ಯಾಸಿಸದವರು ಕುರುಡರೇ ಸರಿ.)

ಶಾಸ್ತ್ರಾಭ್ಯಾಸವನ್ನು ಮಾಡದೆ ಇದ್ದವರಿಗೆ ಶಾಸ್ತ್ರಜ್ಞಾನದಿಂದ ಸಂಸಾರಯಾತ್ರೆಯು ಎಷ್ಟು ಸುಖಾವಹವಾಗುತ್ತದೆಂಬುದು ಗೊತ್ತಾಗದು. ಶಾಸ್ತ್ರಾಭ್ಯಾಸವು ರುಕ್ಷವೂ ಕಠಿಣವೂ ಇರುತ್ತದೆಂದು ಬಹುಜನರ ತಪ್ಪುತಿಳಿವಳಿಕೆಯುಂಟು. ಆದರೆ ವಾಸ್ತವಿಕವಾಗಿ ಶಾಸ್ತ್ರಗಳೆಲ್ಲ ಮನೋರಂಜಕವಾಗಿಯೂ ಸುಬೋಧವಾಗಿಯೂ ಇರುವುವು. ಪ್ರಾಚೀನಕಾಲದಲ್ಲಿ ಶಾಸ್ತ್ರಸಂಪನ್ನರಾದವರು ಸಿದ್ಧಪುರುಷರೆಂದು ಎಣಿಸಲ್ಪಡುತ್ತಿದ್ದರು. ಶಾಸ್ತ್ರಗಳಲ್ಲಿ ಉಪಯೋಗಿಸಿದ ಶಬ್ದಗಳೂ ವರ್ಣನೆಗಳೂ ರುಕ್ಷವೆಂದು ಕಂಡುಬಂದಾಗಲೂ ಅವು ಶಾಸ್ತ್ರಾಭ್ಯಾಸದ ಮುಖ್ಯ ಅಂಗಗಳಲ್ಲ.

ನಮ್ಮಲ್ಲಿ ನೆಲೆಗೊಂಡ ಅನೇಕ ತಪ್ಪು ತಿಳಿವಳಿಕೆಗಳೆಲ್ಲ ಶಾಸ್ತ್ರಾಧ್ಯಯನದಿಂದ ದೂರವಾಗುವುವು. ಭೂತಪಿಶಾಚಗಳ ಕಲ್ಪನೆಯೂ ಮಾಟಚೇಟಕಗಳ ಭಯವೂ ಅಶಿಕ್ಷಿತರಲ್ಲಿಯೇ ಕಂಡುಬರುವುವು. ಭೂಗೋಲಶಾಸ್ತ್ರದಿಂದ ನದಿಗಳ ಉತ್ಪತ್ತಿಯ ನಿಜವಾದ ಕಾರಣಗಳು ತಿಳಿದು ನಮಗೆ ಪರಮೇಶ್ವರನ ಕರ್ತೃತ್ವದ ವಿಷಯವಾಗಿ ಕೌತುಕವುಂಟಾಗುವುದು.

ವನಸ್ಪತಿಶಾಸ್ತ್ರವು ಎಷ್ಟೋ ಜನರಿಗೆ ರುಕ್ಷವೆಂದು ಕಂಡುಬರುತ್ತದೆ. ಆದರೆ ಇದು ತಪ್ಪು. ಯಾಕೆಂದರೆ ಆ ಶಾಸ್ತ್ರದ ಜ್ಞಾನವಿಲ್ಲದವರಿಗೆ ಸಹ

ಎಲೆ ಹೂ-ಕಾಯಿಗಳನ್ನು ನೋಡಿ ಆನಂದವಾಗದೆ ಇರದು. ಇನ್ನು ಅವುಗಳ ಘಟಕಾವಯವಗಳೂ ಬೇರೆ ಬೇರೆ ಭಾಗಗಳೂ ಅವುಗಳ ಆವಶ್ಯಕತೆಯೂ ಉಪಯುಕ್ತತೆಯೂ ಗೊತ್ತಾಗುವುದರಿಂದ ಆಗುವ ಆನಂದವು ಮಿಗಿಲಾದುದೆಂದು ಯಾರು ಅನ್ನಲಾರರು? ವನಸ್ಪತಿಶಾಸ್ತ್ರಜ್ಞನು ಅಡವಿಗಳಲ್ಲಿ ಹೋದರೂ ಎಲೆಗಿಡಗಳನ್ನು ಪರೀಕ್ಷಿಸಿ ತನ್ನ ಮನೋರಂಜನೆಯನ್ನು ಮಾಡಿಕೊಳ್ಳಬಲ್ಲನು.

ಒಂದು ಶಾಸ್ತ್ರವನ್ನು ಅಭ್ಯಾಸಿಸಿದವನಿಗೆ ಉಳಿದ ಶಾಸ್ತ್ರಗಳು ಸುಲಭವಾಗಿ ಬರುವುವು. ಯಾಕೆಂದರೆ ಎಲ್ಲ ವಿಜ್ಞಾನಶಾಸ್ತ್ರಗಳಲ್ಲಿಯ ತತ್ವಗಳಲ್ಲಿ ಸಾಮ್ಯವು ವಿಶೇಷವಾಗಿರುವುದು. ಜ್ಯೋತಿಷಶಾಸ್ತ್ರದ ಅಭ್ಯಾಸದಿಂದ ಗ್ರಹ, ನಕ್ಷತ್ರ, ಧೂಮಕೇತು ಮೊದಲಾದುವುಗಳ ಸ್ವರೂಪವನ್ನು ನಿಶ್ಚಿತವಾಗಿ ಗೊತ್ತುಹಚ್ಚಿ ಪೃಥ್ವಿಯಿಂದ ಅವುಗಳ ಅಂತರವು ಎಷ್ಟೆಂಬುದನ್ನು ತಿಳಿದುಕೊಳ್ಳಬಹುದು; ಮತ್ತು ಅವು ಅದೇ ಸ್ಥಾನಕ್ಕೆ ಬರಲಿಕ್ಕೆ ಎಷ್ಟು ವರುಷಗಳು ಬೇಕೆಂಬುದನ್ನು ಸಹ ಗೊತ್ತುಮಾಡಿಕೊಳ್ಳಬಹುದು.

ಇತ್ತಿತ್ತಲಾಗಿ ಬೇಟೆಯಾಡಿ ಪ್ರಾಣಿಹಿಂಸೆಯನ್ನು ಮಾಡುವುದರ ಬದಲು ಜನರು ಪ್ರಾಣಿಶಾಸ್ತ್ರದ ಅಭ್ಯಾಸದಿಂದ ಮನೋರಂಜನೆಯನ್ನು ಮಾಡಿಕೊಳ್ಳಹತ್ತಿದ್ದಾರೆ. ಮೊದಲು ಮೃಗಯಾವಿನೋದಕ್ಕೆ ಜನರು ಮೆಚ್ಚಿದ್ದರಿಂದ ವನ್ಯಪಶುಗಳು ಕಡಿಮೆಯಾಗಹತ್ತಿದ್ದುವು. ಬಹು ಪ್ರಾಚೀನಕಾಲದಲ್ಲಿ ಜನರು *ಮ್ಯಾಮಥ, ಗಂಡಕ ಮೊದಲಾದ ಅದ್ಭುತ ಪ್ರಾಣಿಗಳ ಬೇಟೆಯಾಡುತ್ತಿದ್ದರು. ೨೦೦ ವರುಷಗಳಾಚೆಗೆ ಬ್ರಿಟಿಶ್ ಜನರು ಕಾಡಾಕಳುಗಳ, ಚಿಗರೆಗಳ ಇಲ್ಲವೆ ತೋಳಗಳ ಬೇಟೆಯಾಡುತ್ತಿದ್ದರು. ಆದರೆ ಈಗ ಅವರು ನರಿ, ಮೊಲ, ಗಿಡಗ ಮೊದಲಾದುವುಗಳ ಬೇಟೆಯಾಡುತ್ತಾರೆ. ಇವಾದರೂ ವರುವರುಷಕ್ಕೆ ಕಡಿಮೆಯಾಗಹತ್ತಿವೆ. ಆದರಿಂದ ಅಲ್ಲಿಯ ಶ್ರೀಮಂತರೆಲ್ಲ ಈ ಪಶುಪಕ್ಷಿಗಳನ್ನು ತಮ್ಮ ಅಡವಿಗಳಲ್ಲಿ ಕಾದು ಇಟ್ಟುಕೊಳ್ಳಬೇಕಾಗಿದೆ. ಆದುದರಿಂದ ಇನ್ನು ಮುಂದ

* ಆನೆಯಂತಹ ದೊಡ್ಡ ಪ್ರಾಣಿಯು.

ಪಶುಪಕ್ಷಿ ಕೀಟಕಗಳ ಅಭ್ಯಾಸವನ್ನು ಮಾಡಿ ಬೇಸರಿಕೆಯನ್ನು ಕಳೆದು-
ಕೊಳ್ಳುವ ಪ್ರಸಂಗವು ಎಲ್ಲರಿಗೂ ಬರಬಹುದೆಂದು ಊಹಿಸಬಹುದು.

ಉಳಿದ ಶಾಸ್ತ್ರಗಳಂತೆ ಪ್ರಾಣಿಶಾಸ್ತ್ರವಾದರೂ ಮನೋರಂಜಕವಾಗಿ-
ರುವುದು. ಈ ಶಾಸ್ತ್ರವನ್ನು ಬಲ್ಲವರು ಪ್ರಾಣಿಗಳ ಅವಯವಗಳನ್ನೂ,
ವ್ಯಾಪಾರಗಳನ್ನೂ ಗೊತ್ತುಮಾಡಿಕೊಂಡು ಅವುಗಳ ರಕ್ಷಣೆಗೂ, ವೃದ್ಧಿಗೂ
ಅವಶ್ಯವಾದ ಉಪಾಯಗಳನ್ನು ಗೊತ್ತುಹಚ್ಚುತ್ತಾರೆ. ಪ್ರಾಣಿಶಾಸ್ತ್ರದ
ನಿಜವಾದ ರಹಸ್ಯವನ್ನು ಬಲ್ಲವರು ಬೇರೆ ಬೇರೆ ಪ್ರಾಣಿಗಳ ರಚನಾ-
ವೈಚಿತ್ರ್ಯವನ್ನೂ ಅವುಗಳನ್ನು ಹುಟ್ಟಿಸಿದ ಪರಮೇಶ್ವರನ ಕರ್ತೃತ್ವವನ್ನೂ
ಕಂಡು ಅತ್ಯಾಶ್ಚರ್ಯಪಡುವರು. ಅತಿಕ್ಷುದ್ರವಾದ ಇರಿವೆಯಂತಹ
ಪ್ರಾಣಿಗಳ ವಿಷಯವಾಗಿ ಸಹ ಅನೇಕ ಗ್ರಂಥಗಳು ಬರೆಯಲ್ಪಟ್ಟಿವೆ.
ಅದೆಲ್ಲ ಪ್ರಾಣಿಶಾಸ್ತ್ರಜ್ಞರ ನಿರೀಕ್ಷಣದ ಫಲವು.

ಪ್ರಾಣಿಶಾಸ್ತ್ರದ ಉಪಯುಕ್ತತೆಯ ವಿಷಯವಾಗಿ ಒಬ್ಬ ಶಾಸ್ತ್ರಜ್ಞನ
ಅಭಿಪ್ರಾಯವನ್ನು ಇಲ್ಲಿ ಕೊಡುತ್ತೇವೆ. "ಮನುಷ್ಯನ ಜ್ಞಾನದೃಷ್ಟಿಗೆ
ಭಂಗವಿಲ್ಲದೆ ಅವನಿಗೆ ಕ್ರಿಮಿಗಳ ರೂಪವನ್ನು ಹೊಂದುವ ಸಾಮರ್ಥ್ಯ-
ವುಂಟಾದರೆ ಸೃಷ್ಟಿಯೊಳಗಿನ ಅನೇಕ ಚಮತ್ಕಾರಗಳನ್ನು ಅವನು ಕಂಡು-
ಕೊಳ್ಳಬಹುದು. ಕೂದಲುಗಳ ಸಹಾಯದಿಂದ ನೀರಿನ ಮೇಲೆ ತೇಲಾ-
ಡುವಂತಹ, ಕುತ್ತಿಗೆಯಲ್ಲಿ ಮಾಣಿಕದಂತೆ ಹೊಳೆಯುವ ಕಣ್ಣುಗಳು-
ಳ್ಳಂತಹ, ಕೈಕಾಲುಗಳನ್ನು ಬೇಕಾದಾಗ ಎಳೆದುಕೊಳ್ಳಲಿಕ್ಕೆ ಶಕ್ತಿಯು-
ಳ್ಳಂತಹ ಅನೇಕ ಕ್ರಿಮಿಗಳು ಅವನ ದೃಷ್ಟಿಗೆ ಬೀಳುವವು. ಅಡವಿಗಳಲ್ಲಿ
ನಾನಾ ಪ್ರಕಾರದ ಎಲೆಹೂಗಳುಳ್ಳ ವೃಕ್ಷಗಳು ಇರುವುವೆಂದು ಕಂಡು-
ಬರುವುದು. ಅವುಗಳಲ್ಲಿ ಒಂದು ವಿಶೇಷಪ್ರಕಾರದ ಎಲೆಯ ಮೇಲೆ
ಯಾವುದಾದರೊಂದು ಕ್ರಿಮಿಯು ಕೂತಕೂಡಲೆ ಅದು ತನ್ನಷ್ಟಕ್ಕೆ
ತಾನೇ ಮುಚ್ಚಿಕೊಂಡು ಆ ಕ್ರಿಮಿಯನ್ನು ಭಕ್ಷಿಸುತ್ತದೆ. ಇಂತಹ
ಮಾಂಸಾಹಾರಿಗಳಾದ ವೃಕ್ಷಗಳು ಸಹ ಅನೇಕವಿರುವವು."

ಶಾಸ್ತ್ರಜ್ಞಾನದಿಂದ ಎಂತಹ ಚಮತ್ಕಾರಗಳು ಮನುಷ್ಯನ ದೃಷ್ಟಿಗೆ
ಬೀಳುವುವೆಂಬುದನ್ನು ಮೇಲೆ ಹೇಳಿದ್ದೇವೆ. ಹೀಗಿದ್ದರೂ ಎಷ್ಟೋ ಜನರು

ಸೃಷ್ಟಿಯಿಂದ ತಮಗೆ ಏನೂ ಲಾಭವೂ ಸುಖವೂ ಆಗುವುದಿಲ್ಲೆಂದು ಭಾವಿಸುತ್ತಾರೆ. ಕಲ್ಲು ಹೊಡೆಯಬೇಕೆಂಬ ಕುಬುದ್ಧಿಯಿಂದ ಹುಡುಗರು ಪಕ್ಷಿಗಳನ್ನು ದಿಟ್ಟಿಸಿನೋಡುವಂತೆ ಎಷ್ಟೋ ಜನರು ಸೃಷ್ಟಿಯ ಕಡೆಗೆ ವಕ್ರದೃಷ್ಟಿಯಿಂದ ನೋಡುತ್ತಾರೆ. ಶಾಸ್ತ್ರಜ್ಞಾನದ ಬಲದಿಂದ ಸೃಷ್ಟಿಯೊಳಗಿನ ಅನೇಕ ಗುಟ್ಟುಗಳು ಗೊತ್ತಾಗಿ ಮನುಷ್ಯರಲ್ಲಿ ಸೃಷ್ಟಿಕರ್ತನ ವಿಷಯವಾಗಿ ಪೂಜ್ಯ ಬುದ್ಧಿಯು ಹೆಚ್ಚಾಗುತ್ತಹೋಗುವುದು.

ಮೂಢಜನರು ಕ್ಷುದ್ರವೆಂದು ಭಾವಿಸುವ ಎಷ್ಟೋ ವಸ್ತುಗಳು ಅತ್ಯುಪಯುಕ್ತವಾದ ಪದಾರ್ಥಗಳ ಘಟಕಾವಯವಗಳೆಂಬುದು ಗೊತ್ತಾಗುವುದು. ಮಾರ್ಗಗಳ ಮೇಲೆ ಇರುವ ಕೆಸರಿನಲ್ಲಿ ಮಣ್ಣು, ಉಸುಬು, ಇದ್ದಲಿ, ನೀರು ಮುಂತಾದುವು ಸಮ್ಮಿಶ್ರವಾಗಿರುವುವು. ಉಸುಬನ್ನು ಬೇರೆ ಮಾಡಿ ಅದನ್ನು ತಕ್ಕ ಪ್ರಮಾಣದಿಂದ ಕೂಡಿಸಿ ಕಾಜಿನ ಪಾತ್ರೆಗಳನ್ನೂ, ಮಣ್ಣು ಬೇರೆ ಮಾಡಿ ಗಡಿಗೆಮಡಿಕೆಗಳನ್ನೂ ಮಾಡಬಹುದು. ಇದ್ದಲಿಗೆ ಒಂದು ವಿಶೇಷಪ್ರಕಾರದ ಸಂಸ್ಕಾರವುಂಟಾದರೆ ಅದು ವಜ್ರವಾಗಬಹುದು. ರಾಡಿನೀರು ಸೋಸಿದರೆ ಕುಡಿಯಲಿಕ್ಕೆ ಬರುವುದು.

ಶಾಸ್ತ್ರಾಭ್ಯಾಸದಿಂದ ನಮಗೆ ಮನೋರಂಜನೆಯಾಗುತ್ತದೆಂದು ಅದನ್ನು ಹೊಗಳುವುದು ತಪ್ಪೇ ಸರಿ. ಅದರಿಂದ ನಮಗುಂಟಾಗುವ ಸಂಸ್ಕಾರದಿಂದ ಆಯುಷ್ಯವನ್ನು ಸದುಪಯೋಗಕ್ಕೆ ಹಚ್ಚುವ ಮಾರ್ಗಗಳನ್ನು ನಾವು ಅರಿತುಕೊಳ್ಳಬಹುದು; ನಮ್ಮಲ್ಲಿ ಗುಪ್ತವಾಗಿದ್ದ ಶೋಧಕ ಬುದ್ಧಿಯು ಪ್ರಕಟವಾಗಿ ಜಾಗ್ರತೆಯನ್ನು ಹೊಂದುವುದು; ಹಲವು ಉದಾಹರಣೆಗಳ ಮೇಲಿಂದ ಸಾಮಾನ್ಯ ಸಿದ್ಧಾಂತಗಳನ್ನು ಹುಡುಕಿ ತೆಗೆಯಬಹುದು; ವಿಚಾರಶಕ್ತಿಯು ಬೆಳೆಯುವುದು; ಕಾರ್ಯಕಾರಣಗಳ ಸಂಬಂಧವನ್ನು ಅರಿತುಕೊಳ್ಳುವ ಚಟವು ಹತ್ತುವುದು; ಸಂಸಾರದಲ್ಲಿ ಮೇಲಿಂದ ಮೇಲೆ ಒದಗುವ ದುಃಖಗಳನ್ನೂ, ಸಂಕಟಗಳನ್ನೂ ಮರೆಯಬಹುದು ಆಕಾಶದಲ್ಲಿ ಕಾಣುವ ಸುಂದರವಾದ ಗ್ರಹನಕ್ಷತ್ರಗಳನ್ನು ನೋಡಿ ಪರಮೇಶ್ವರನ ಅಗಾಧಲೀಲೆಯ ಬಗ್ಗೆ ಆಶ್ಚರ್ಯವಾಗಿ ನಮ್ಮ ದುಃಖಗಳು ಬಯಲಾಗುವುವು. ಆಕಾಶದಲ್ಲಿ ಹೊಳೆಯುವ

ನಕ್ಷತ್ರಗಳು ಜಲಪರ್ಯಟನ ಮಾಡುವಾಗ ನಮಗೆ ಮಾರ್ಗವನ್ನು ತೋರಿಸುವುವು; ಮತ್ತು ಅವು ನಮ್ಮ ಅಂಧಕಾರಮಯವಾದ ಮನಸ್ಸಿನಲ್ಲಿ ವಿವೇಕವೆಂಬ ಬೆಳಕನ್ನುಂಟುಮಾಡುವುವು. ಜಗತ್ತಿನಲ್ಲಿದ್ದ ಎಲ್ಲ ಪದಾರ್ಥಗಳು ಮನುಷ್ಯನ ಸುಖಕ್ಕೂ ಸನ್ಮಾರ್ಗಪ್ರವರ್ತನೆಗೂ ನಿರ್ಮಿತವಾಗಿರುತ್ತವೆಂಬ ಮಾತನ್ನು ಸಹ ಶಾಸ್ತ್ರಾಭ್ಯಾಸದಿಂದ ಕಲಿಯಬಹುದು.

೧೯ನೆಯ ಶತಕದಲ್ಲಿ ಇಂಗ್ಲಂಡದಲ್ಲಿ ಆಗಿಹೋದ ಪ್ರಸಿದ್ಧ ಶಾಸ್ತ್ರಜ್ಞರಲ್ಲಿ ಹಕ್ಸಲೆ ಎಂಬವನೊಬ್ಬನಿದ್ದನು. ಅವನು ಮೇಲೆ ಹೇಳಿದ ಮಾತನ್ನೇ ಹೆಚ್ಚು ಸ್ಪಷ್ಟವಾಗಿ ತನ್ನ ಅಧಿಕಾರಯುಕ್ತವಾದ ವಾಣಿಯಿಂದ ಹೇಳಿದ್ದಾನೆ.

"ನಮ್ಮ ಪ್ರಾರಬ್ಧವೂ ನಮ್ಮ ಜನ್ಮದ ಸಾರ್ಥಕ್ಯವೂ ಚತುರಂಗದ ಆಟದ ಮೇಲೆ ಅವಲಂಬಿಸಿಯಿವೆಯೆಂದು ಕಲ್ಪಿಸುವ. ಅಂತಹ ಪ್ರಸಂಗದಲ್ಲಿ ಪ್ರತಿಯೊಬ್ಬನು ಚತುರಂಗದ ಆಟದಲ್ಲಿಯ ಅರಸು, ಮಂತ್ರಿ, ಆನೆ, ಒಂಟೆ, ಕುದುರೆ, ಕಾಲಾಳು ಮೊದಲಾದುವುಗಳ ಹೆಸರುಗಳನ್ನೂ, ಅವುಗಳನ್ನು ನಡಿಸುವ ರೀತಿಯನ್ನೂ ಗೊತ್ತುಮಾಡಿಕೊಳ್ಳುತ್ತಿದ್ದಿಲ್ಲವೇ? ಈ ಆಟವನ್ನು ಚಿಕ್ಕವರಿದ್ದಾಗ ನಿಮ್ಮ ತಂದೆತಾಯಿಗಳು ಕಲಿಸದೆ ಹೋದರೆ ಅವರನ್ನೂ, ಮುಂದೆ ಶಾಲೆಗಳಲ್ಲಿ ಸಹ ಅದರ ಇಂಗಿತವನ್ನು ಹೇಳಿಕೊಡದೆ ಹೋದರೆ ಗುರುಗಳನ್ನೂ ನೀವು ದೂಷಿಸುತ್ತಿದ್ದಿಲ್ಲವೇ? ಹೀಗಿದ್ದರೂ ನಮ್ಮೆಲ್ಲರ ಆಯುಷ್ಯವೂ, ಸುಖವೂ ಚತುರಂಗದ ಆಟಕ್ಕಿಂತ ಗೂಢವಾದ ಆಟದ ಕೆಲವೊಂದು ನಿಯಮಗಳನ್ನು ಗೊತ್ತುಮಾಡಿಕೊಳ್ಳುವುದರ ಮೇಲೆ ಅವಲಂಬಿಸಿಯಿವೆ. ಈ ಮಾತು ಸರ್ವರಿಗೂ ವಿದಿತವಿರುವುದು. ಪುರಾತನ ಕಾಲದಿಂದ ಈ ಕಠಿಣವಾದ ಆಟವನ್ನು ಪುರುಷರೂ ಸ್ತ್ರೀಯರೂ ಆಡುತ್ತ ಬಂದಿರುತ್ತಾರೆ. ಈ ಆಟದ ಎರಡು ಪಕ್ಷಗಳಲ್ಲಿ, ಮಾನವೀ ಪ್ರಾಣಿಯು ಒಂದು ಪಕ್ಷದವನು. ಮತ್ತೊಂದು ಪಕ್ಷದಲ್ಲಿ ಆಡುತ್ತಿರುವ ಸೃಷ್ಟಿಕರ್ತನು ನಮ್ಮಿಂದ ಮರೆಯಾಗಿರುವನು; ಜಗತ್ತೇ ಚತುರಂಗದ ಪಟವು; ಜಗದ್ವ್ಯಾಪಾರಗಳೇ ಚತುರಂಗಗಳು; ಮತ್ತು ಸೃಷ್ಟಿಯ ನಿಯಮಗಳೇ ಆ ಆಟದ ನಿಯಮಗಳು. ಸೃಷ್ಟಿಕರ್ತನಾಡುವ ಆಟವು ಯಾವಾಗಲೂ ಶಾಂತವೂ ನ್ಯಾಯವೂ ನಿಯಮ-

ಬದ್ಧವೂ ಆಗಿರುವುದು. ಅವನು ಅಜ್ಞಾನದ ಬಗ್ಗೆ ನಮ್ಮನ್ನು ಕ್ಷಮಿಸು-ವುದಿಲ್ಲ; ತಪ್ಪುಗಳನ್ನು ದುರ್ಲಕ್ಷಿಸುವುದಿಲ್ಲ. ಈ ಆಟವನ್ನು ಯಾರು ಚೆನ್ನಾಗಿ ಆಡಬಲ್ಲರೋ ಅವರು ಸುಖಿಗಳಾಗುವರು. ಇತರರು ದುಃಖಕ್ಕೆ ಗುರಿಯಾಗುವರು." ಶಾಸ್ತ್ರಾಭ್ಯಾಸವನ್ನು ಮಾಡಿದರೆ ಈ ಆಟವನ್ನು ಚೆನ್ನಾಗಿ ಆಡಬಹುದೆಂಬ ಮಾತನ್ನು ಹೇಳುವ ಅಗತ್ಯವಿಲ್ಲ. ಶಾಸ್ತ್ರಾ-ಭ್ಯಾಸದಿಂದ ಧಾರ್ಮಿಕ ಕಲ್ಪನೆಗಳು ಪರಿಶುದ್ಧವಾಗುವವಲ್ಲದೆ ಉದಾತ್ತ-ವಾಗುತ್ತವೆ. ಅದರಿಂದ ಮೂಢಶ್ರದ್ಧೆಗಳೂ, ಮಾಟಚೇಟಕಗಳಲ್ಲಿಯ ನಂಬುಗೆಯೂ ಧರ್ಮಚ್ಛಲವೂ ನಾಶವಾಗುವುವು. ಶಾಸ್ತ್ರಜ್ಞರೂ ಧರ್ಮೋಪದೇಶಕರೂ ಒಂದೇ ಪ್ರಕಾರದ ಯೋಗ್ಯತೆಯುವರೆಂದು ಒಬ್ಬ ಧರ್ಮಗುರುವು ಹೇಳಿದ್ದಾನೆ.

ಶಾಸ್ತ್ರೀಯ ಶಿಕ್ಷಣವು ದೇಶದ ಬೆಳೆವಣಿಗೆಗೆ ಆದಿಕಾರಣವಾಗಿರು-ವುದು. ಪ್ರತಿದಿನ ನಾವು ಉಪಯೋಗಿಸುವ ಎಷ್ಟೋ ವಸ್ತುಗಳು ಶಾಸ್ತ್ರೀಯ ಶೋಧದ ಫಲಗಳಾದರೂ "**अतिपरिचयादवज्ञा**" ಎಂಬ ಉಕ್ತಿ-ಯಂತೆ ನಮ್ಮಲ್ಲಿ ಅವುಗಳ ಬಗ್ಗೆ ಒಂದು ತರದ ಔದಾಸೀನ್ಯವು ಕಂಡು-ಬರುತ್ತದೆ. ಪ್ರತಿದಿವಸ ಸಾಯಂಕಾಲದಲ್ಲಿ ದೀಪಗಳನ್ನು ಕಡ್ಡಿಯು ಕೊರೆದು ಹಚ್ಚುತ್ತೇವೆ. ಆ ದೀಪದ ಕಡ್ಡಿಯು ಹೇಗೆ ಹುಟ್ಟಿತೆಂಬುದರ ಬಗ್ಗೆ ನಾವು ಎಂದೂ ವಿಚಾರಮಾಡುವುದಿಲ್ಲ.

*"ಯಾವುದೊಂದು ಶಾಸ್ತ್ರವನ್ನು ಪೂರ್ಣವಾಗಿ ಅಭ್ಯಾಸಿಸಲಿಕ್ಕೆ ಎಲ್ಲ ಮುಖ್ಯ ಶಾಸ್ತ್ರಗಳ ಮೂಲತತ್ವಗಳ ಜ್ಞಾನವು ಅತ್ಯವಶ್ಯವು." §"ಯಾವ ಸೃಷ್ಟಿವ್ಯಾಪಾರದ ಸಾದ್ಯಂತಜ್ಞಾನವಾಗಬೇಕಾದರೂ ಎಲ್ಲ ಶಾಸ್ತ್ರಗಳನ್ನು ಅಭ್ಯಾಸಿಸಬೇಕಾಗುವುದು." ಸೃಷ್ಟಿಯಲ್ಲಿಯ ಅತಿಮಹತ್ವ-ವಾದ ಸಂಗತಿಗಳು ಗುಪ್ತವಾಗಿರುವುವು. ದೊಡ್ಡ ದೊಡ್ಡ ಕಾರಖಾನೆ-ಗಳಲ್ಲಿ ಒಗೆದ ಕಸಕಡ್ಡಿಗಳೊಳಗಿಂದ ಎಷ್ಟೋ ಸಾರೆ ಮಹತ್ವದ ಪದಾರ್ಥ-ಗಳು ಶೋಧಿಸಲ್ಪಟ್ಟವೆ. ಗ್ಲಾಬರ್ ಎಂಬ ಶೋಧಕನು ಹೀಗೆಯೇ ಗ್ಲಾಬರಸಾಲ್ಟ ಎಂಬ ರೇಚಕವಾಗುವಂಥ ಕ್ಷಾರವನ್ನು ಶೋಧಿಸಿದನು.

* ಬೇನ. § ಸರಜಾನ್ ಹರ್ಶೆಲ್.

ಹಿಂದುಸ್ತಾನದೇಶದ ಸುಧಾರಣೆಯೂ ಉತ್ಕರ್ಷವೂ ಶಾಸ್ತ್ರ-ಜ್ಞಾನದ ಅಭಿವೃದ್ಧಿಯನ್ನೇ ಅವಲಂಬಿಸಿಯಿವೆ. ಈ ದೇಶದ ಜನ-ಸಂಖ್ಯೆಯು ೩೨ಕೋಟಿ ಇದ್ದು ಅದು ಬೆಳೆಯುವುದರಲ್ಲಿಯೇ ಅದೆ. ಆದರೆ ೩೦ ವರುಷಗಳಿಂದೀಚೆಗೆ ಗ್ರಂಥಿಜ್ವರವೆಂಬ ಪಿಡುಗಿನಿಂದಲೂ ಬರದ ಬಾಧೆಯಿಂದಲೂ ಇನಫ್ಲುಯೆಂಜಾ ಬೇನೆಯಿಂದಲೂ ಜನಸಂಖ್ಯೆಯ ಬೆಳೆವಣಿಗೆಯು ಕಡಿಮೆಯಾಗಿದೆ. ಆದರೂ ಈ ಸಂಕಟಗಳು ದೂರ-ವಾಗುತ್ತಲೆ ಮೊದಲಿನಂತೆ ಏರಿಕೆಯು ಆರಂಭವಾಗಬಹುದು. ಗ್ರಂಥಿ-ಜ್ವರದ ಪಿಡುಗು ಈ ದೇಶದಲ್ಲಿ ತಲೆದೋರುವುದಕ್ಕಿಂತ ಮೊದಲಿನ ೧೦ ವರುಷಗಳಲ್ಲಿ ಜನಸಂಖ್ಯೆಯು ೪॥ ಕೋಟಿ ಹೆಚ್ಚಾಗಿತ್ತು. ಹಿಂದುಸ್ತಾನದ ಜನರು ಮುಖ್ಯವಾಗಿ ಒಕ್ಕಲತನದಿಂದಲೇ ಉಪಜೀವಿಸುವರು. ಆದುದ-ರಿಂದ ಜನಸಂಖ್ಯೆಯು ಮೇಲೆ ಹೇಳಿದ ಪ್ರಮಾಣದಿಂದ ಬೆಳೆಯುತ್ತ ಹೋದರೆ ೧೦೦ ವರುಷಗಳಲ್ಲಿ ಅದು ಇಮ್ಮಡಿಯಾಗಿ ಬೆಳೆದು ಒಕ್ಕಲ-ತನದಿಂದ ಪ್ರಜೆಗಳ ಉದರನಿರ್ವಾಹವು ಸಾಗದಂತೆ ಆಗುವುದು. ಪ್ರಜೆ-ಗಳ ಬೆಳೆವಣಿಗೆಯನ್ನು ಕೃತ್ರಿಮ ಉಪಾಯಗಳಿಂದ ಪ್ರತಿಬಂಧಿಸ ಹೋದರೆ ಜನರಲ್ಲಿ ಅನೀತಿಯು ನೆಲೆಗೊಳ್ಳುವುದು. ಹಾಗೆಯೇ ಅದು ಬೆಳೆಯುತ್ತ ಹೋದರೆ ಸಹಿಸಲಾಗದಷ್ಟು ಕಷ್ಟವು ಎಲ್ಲರಿಗೂ ಒದಗು-ವುದು. ಈ ಸಂಕಟಗಳೊಳಗಿಂದ ಪಾರಾಗಲಿಕ್ಕೆ ಒಂದೇ ಮಾರ್ಗವಿರು-ವುದು. ಅದೇನೆಂದರೆ:—ಕಲಾಕೌಶಲ್ಯದ ಹಾಗೂ ಪದಾರ್ಥವಿಜ್ಞಾನ ಮೊದಲಾದ ಶಾಸ್ತ್ರಗಳ ಅಭ್ಯಾಸವು. ಇಂಥ ಅಭ್ಯಾಸದಿಂದ ಜನರಲ್ಲಿ ಶೋಧಕ ಬುದ್ಧಿಯು ತೀಕ್ಷ್ಣವಾಗಿ ದೇಶಕಲ್ಯಾಣವಾಗುವುದು. ಗಜ್ಜರ, ರೇ, ಬೋಸ ಮೊದಲಾದ ವಿಖ್ಯಾತ ಶೋಧಕರು ಇಲ್ಲಿ ಜನಿಸಿದ್ದರಿಂದ ಕಲಾಕೌಶಲ್ಯಗಳ ಅಭಿವೃದ್ಧಿಗೂ ಹೊಸಶೋಧಗಳಿಗೂ ಉತ್ತೇಜನ ವುಂಟಾಗಿದೆ.

ಇಂಗ್ಲಂಡದ ಸ್ಥಿತಿಯಾದರೂ ಮೇಲೆ ವರ್ಣಿಸಿದಂತೆಯೇ ಅದೆ. ಈಗ ಅಲ್ಲಿಯ ಜನಸಂಖ್ಯೆಯು ೪ ಕೋಟಿ; ಅದಾದರೂ ದಿನ ದಿನಕ್ಕೆ ಬೆಳೆ-ಯುತ್ತ ನಡೆದಿರುವುದು. ಆ ದೇಶದಲ್ಲಿಯ ಪ್ರಜೆಗಳು ಕಲಾಕೌಶಲ್ಯ-

ಗಳಿಂದ ತನ್ನ ಉದರನಿರ್ವಾಹವನ್ನು ಸಾಗಿಸಿಕೊಳ್ಳುತ್ತಾರೆ. ಅಲ್ಲಿ ಧಾನ್ಯಗಳು ಸಾಕಷ್ಟು ಬೆಳೆಯುದದರಿಂದ ಪರದೇಶಗಳಿಂದ ಆಹಾರದ ಸಾಮುಗ್ರಿಗಳನ್ನು ತರಬೇಕಾಗುತ್ತದೆ. ಅವುಗಳ ದೆಸೆಯಿಂದ ೧೫ ಕೋಟ ಪೌಂಡುಗಳನ್ನು ಪರದೇಶಗಳಿಗೆ ಕಳುಹಿಸಬೇಕಾಗುತ್ತದೆ. ಅಮೇರಿಕಾ ಜರ್ಮನಿ ಮೊದಲಾದ ರಾಷ್ಟ್ರಗಳು ಕಲಾಕೌಶಲ್ಯಗಳಲ್ಲಿ ಮುಂದುವರಿದಿರುವುದರಿಂದ ೧೦೦ ವರುಷಗಳ ಮೇಲೆ ಆಂಗ್ಲರ ಅವಸ್ಥೆಯು ಏನಾಗುವುದೋ ಹೇಳಲಾಗದು. ಇದಲ್ಲದೆ ಅಲ್ಲಿದ್ದ ಖಣಿಗಳೊಳಗಿನ ಕಲ್ಲಿದ್ದಲಿಯು ತೀರಹತ್ತಿದೆ. ಈ ಎಲ್ಲ ಪರಿಣಾಮವನ್ನು ಕಂಡುಕೊಂಡು, ಅಲ್ಲಿಯ ಮುಂದಾಳುಗಳು ಕಲಾಕೌಶಲ್ಯದ ಹಾಗೂ ಶಾಸ್ತ್ರೀಯ ಶಿಕ್ಷಣದ ಪಾಠಶಾಲೆಗಳನ್ನು ಅಲ್ಲಲ್ಲಿ ಏರ್ಪಡಿಸಿದ್ದಾರೆ. ಇಂಥ ಪ್ರತಿ ಒಂದು ಪಾಠಶಾಲೆಯಿಂದ ಪ್ರತಿವರ್ಷ ಏನಿಲ್ಲೆಂದರೂ ಸಾವಿರಾರು ಶಿಲ್ಪಿಗರೂ, ಶಾಸ್ತ್ರಜ್ಞರೂ ಕಲಿತು ಹೊರಬೀಳುತ್ತಾರೆ. ಅದರಂತೆಯೇ ನಮ್ಮ ದೇಶ-ದಲ್ಲಾದರೂ ಶಾಸ್ತ್ರೀಯ ಶಿಕ್ಷಣವು ಎಲ್ಲ ವಿದ್ಯಾರ್ಥಿಗಳಿಗೂ ಸಿಗುವಂತೆ ಮಾಡುವುದು ಮುಂದಾಳುಗಳ ಕರ್ತವ್ಯವಾಗಿದೆ.

ಶಾಸ್ತ್ರಜ್ಞಾನವು ಹೆಚ್ಚಾಗುವುದರಿಂದ ದೇಶದಲ್ಲಿ ಹೊಸ ಶೋಧಗಳಾ-ಗುವುವು. ಅವುಗಳಿಂದ ಪ್ರಜೆಗಳ ಕಲ್ಯಾಣವಾಗುವುದಲ್ಲದೆ, ಆ ದೇಶದ ಕೀರ್ತಿಯು ಅಜರಾಮರವಾಗುವುದು. ಇಂಗ್ಲಂಡ, ಜರ್ಮನಿ, ಅಮೇ-ರಿಕಾ, ಜಪಾನ ಮೊದಲಾದ ಮುಂದುವರಿದ ರಾಷ್ಟ್ರಗಳಲ್ಲಿ ಪ್ರತಿ ಒಬ್ಬ ಕೂಲಿಕಾರನಿಗೆ ಸಹ ಶಾಸ್ತ್ರಜ್ಞಾನವು ಇರುವುದು. ಸದ್ಯಕ್ಕೆ ನಮಗೆ ಜಗತ್ತಿನಲ್ಲಿಯ ಎಲ್ಲ ಪದಾರ್ಥಗಳ ಉಪಯೋಗವು ಗೊತ್ತುಂಟೆಂದು ಹೇಳಲಾಗದು. ಅವುಗಳ ಉಪಯೋಗವು ನಮಗೆ ಗೊತ್ತಾದ ಹಾಗೆ ನನ್ನ ಸುಖಸಾಧನಗಳು ಹೆಚ್ಚಾಗುತ್ತಹೋಗುವುವು.

ಶಾಸ್ತ್ರಜ್ಞಾನದಿಂದ ಕೇವಲ ಇಂದ್ರಿಯ ಸುಖದ ಸಾಧನಗಳಷ್ಟೇ ಸಿದ್ಧವಾಗುತ್ತವೆಂತಲ್ಲ. ಆದರೆ ವ್ಯಕ್ತಿಯ ಹಾಗೂ ರಾಷ್ಟ್ರದ ವರ್ತನವೂ ಆಚಾರವಿಚಾರಗಳೂ ಉನ್ನತಾವಸ್ಥೆಯನ್ನು ಹೊಂದುವುವು. "ಆತ್ಮ-ಜ್ಞಾನದಿಂದಲೂ ಆತ್ಮಸಂಯುಮನದಿಂದಲೂ ಸ್ವಾಭಿಮಾನದಿಂದಲೂ

ಎಂತಹ ಮನುಷ್ಯನಾದರೂ ಆಧಿಪತ್ಯವನ್ನು ಹೊಂದುವನು. ಧರ್ಮದ ನಿಯಮಗಳನ್ನು ನಿರ್ಭೀತಿಯಿಂದ ಪಾಲಿಸಿದರೆ ಆಧಿಪತ್ಯವು ತನ್ನಷ್ಟಕ್ಕೆ ತಾನೇ ದೊರಕುವುದು" ಎಂದು ಟೆನಿಸನ್ ಎಂಬ ಪ್ರಸಿದ್ಧ ಅರ್ವಾಚೀನ ಆಂಗ್ಲಕವಿಯು ಹೇಳಿದ್ದಾನೆ.

*"ನಮಗೆ ಚೆಲೋದಿವಸಗಳು ಬಂದವೆಂದರೆ ನಾವು ಗರ್ವದಿಂದ ಉಬ್ಬಿಬಿಡುತ್ತೇವೆ. ಆದರೆ ನಮ್ಮ ಮೇಲೆ ಏನಾದರೂ ಸಂಕಟಗಳು ಬಂದರೆ ನಮ್ಮ ಅವಸ್ಥೆಯು ದುಸ್ಸಹವಾಗುವುದು. ಅಂತಹ ಕಾಲದಲ್ಲಿ ಶಾಸ್ತ್ರಜ್ಞಾನದಿಂದ ನಮಗೆ ಸಮಾಧಾನವುಂಟಾಗಿ ಎಲ್ಲ ಜೀವಜಂತುಗಳ ಮೇಲೆ ಏಕಪ್ರಕಾರವಾಗಿ ಪ್ರೀತಿಮಾಡುವ ಪರಮಾತ್ಮನ ನೆನಪಾಗಿ ನಮ್ಮ ದುಃಖಗಳು ಹಿಂಗುವುವು."

ಅಹಮದಾಬಾದದಲ್ಲಿ ೧೯೦೨ನೆಯ ಇಸವಿಯಲ್ಲಿ ನೆರೆಯಿಸಿದ ಔದ್ಯೋಗಿಕ ಪ್ರದರ್ಶನವನ್ನು ತೆರೆಯುವ ಸಮಾರಂಭದ ಕಾಲಕ್ಕೆ ಬಡೋದೆಯ ಈಗಿನ ಪ್ರಸಿದ್ಧ ಮಹಾರಾಜರಾದ ಸಯಾಜಿರಾವ ಇವರು ತಮ್ಮ ಭಾಷಣದಲ್ಲಿ ಶಾಸ್ತ್ರಜ್ಞಾನದ ಮಹತ್ವವನ್ನು ಸರಸಾಗಿ ಬಣ್ಣಿಸಿದ್ದಾರೆ. ಅದರಂತೆಯೇ ಲಿವ್ಹರ್ಪೂಲ ಕಾಲೇಜದಲ್ಲಿ ಆರ್ಕಡಿಕನ್ "ಪೆರಾರ" ಎಂಬವರು ಕೊಟ್ಟ ವಾಖ್ಯಾನವಾದರೂ ಮನನೀಯವಾಗಿದೆ. ಅದರ ಸಾರಂಶವನ್ನು ಕೆಳಗೆ ಕೊಟ್ಟದ್ದೇವೆ. "ಶಾಸ್ತ್ರಜ್ಞಾನದಿಂದ ಆಕಾಶದಲ್ಲಿದ್ದ ಅಸಂಖ್ಯ ಸಣ್ಣದೊಡ್ಡ ಗ್ರಹಗಳನ್ನೂ, ನಕ್ಷತ್ರಗಳನ್ನೂ, ಅವುಗಳ ಗತಿಗಳನ್ನೂ ಗೊತ್ತುಮಾಡಿಕೊಳ್ಳಬಹುದಲ್ಲದೆ ಮಾನವಪ್ರಾಣಿಯ ದುಃಖಗಳು ನೀಗುವಂತೆಯೂ ಅವನ ಸುಖವು ಹೆಚ್ಚಾಗುವಂತೆಯೂ ಮಾಡಬಹುದು." ಅದು ಎಷ್ಟು ಯಥಾರ್ಥವಾಗಿದೆಯೆಂಬುದನ್ನು ನೋಡುವ. ಶಾಸ್ತ್ರಜ್ಞಾನದ ಬಲದಿಂದ ಭಾವಚಿತ್ರಗಳನ್ನು ತೆಗೆಯಬಹುದು; ಸೂರ್ಯನ ಉಷ್ಣತೆಯಿಂದ ಅಡಿಗೆಯನ್ನು ಮಾಡಬಹುದು. ವಿಷಕರವಾದ ವಾಯುವಿನಿಂದ ತುಂಬಿದ ಕಣಿಗಳಲ್ಲಿ ಸಹ ಸುರಕ್ಷಿತವಾಗಿ ಕೆಲಸಮಾಡಬಹುದು. ರೋಗಿಗೆ ಏನೂ ತಿಳಿಯದಂತೆ ಶಸ್ತ್ರಕ್ರಿಯೆಯನ್ನು ಮಾಡಬಹುದು;

* ಕ್ವಿನ್ಸಿ ಅಡಾಮ್ಸ್.

ವಿಸ್ತಾರವಾದ ಸಮುದ್ರದಲ್ಲಿ ದೀಪಸ್ತಂಭಗಳಿಂದ ಹಡಗಗಳಿಗೆ ಮಾರ್ಗ-
ಗಳನ್ನು ತೋರಿಸಬಹುದು. ಉಗಿಯ ಶಕ್ತಿಯಿಂದ ನೀರಿನಲ್ಲಿ ಹಡಗ-
ಗಳನ್ನೂ ನೆಲದ ಮೇಲೆ ಬಂಡಿಗಳನ್ನೂ ನಡಿಸಬಹುದು; ವಿದ್ಯುಲ್ಲತೆಯ
ಶಕ್ತಿಯಿಂದ ತಂತಿಗಳ ಮೂಲಕವಾಗಲಿ ಅವುಗಳಿಲ್ಲದೆ ಆಗಲಿ ವರ್ತ-
ಮಾನಗಳನ್ನು ತಿಳಿಸಬಹುದು; ಕಲ್ಲೆಣ್ಣೆಯ ಶಕ್ತಿಯಿಂದ ಮೋಟಾರ
ಗಾಡಿಗಳನ್ನೂ ವಾತನಾವೆಗಳನ್ನೂ ನಡಿಸಬಹುದು. ಇವೆಲ್ಲ ಶಾಸ್ತ್ರಾ-
ಭ್ಯಾಸದ ಫಲಗಳಲ್ಲವೇ? ಈ ಎಲ್ಲ ಸುಪರಿಣಾಮಗಳನ್ನುಂಟುಮಾಡುವ
ಶಾಸ್ತ್ರಗಳ ಜ್ಞಾನವು ನಿಮ್ಮ ಹಾಗೂ ನಿಮ್ಮ ಮಕ್ಕಳ ಸುಖಕ್ಕೂ ದೇಶದ
ಉತ್ಕರ್ಷಕ್ಕೂ ಅತ್ಯವಶ್ಯವೆಂದು ಆಗ್ರಹಪೂರ್ವಕವಾಗಿ ಹೇಳದೆ ಇರ-
ಲಾರೆವು.

---

# ೧೦ನೆಯ ಅಧ್ಯಾಯ.

---

## ಶಿಕ್ಷಣ.

ಒಡಲೊಳಗಿರುವದು ವಿದ್ಯೆಯು । ನಡೆದರೆ ತಾ ಭಾರವಲ್ಲ ।
ಕಳ್ಳರುಕದಿಯರ್ ॥ ಪೊಡವಿಪರು ಮುನಿದುಕೊಳ್ಳರ್ ।
ಒಡಹುಟ್ಟಿರುವವರು ಪಾಲುಬೇಡರು ಎಂದೂ ॥

**मातेव रक्षति पितेव हिते नियुंक्ते ॥**
**कान्तेव चाति रमयत्यपनीय खेदं ॥**
**लक्ष्मीं तनोति वितनोति च दिक्षु कीर्तिं ॥**
**किं किं न साधयति कल्पलतेव विद्या ॥**

(ವಿದ್ಯೆಯು ತಾಯಿಯಂತೆ ಪಾಲಿಸುತ್ತದೆ; ತಂದೆಯಂತೆ ಹಿತದಕೆಲಸಕ್ಕೆ ಹಚ್ಚುತ್ತದೆ; ಹೆಂಡತಿಯಂತೆ ಶ್ರಮವನ್ನು ಹೋಗಲಾಡಿಸಿ ಆನಂದಗೊಳಿಸುತ್ತದೆ; ಸಂಪತ್ತನ್ನು ಹೆಚ್ಚಿಸುತ್ತದೆ; ಎಲ್ಲ ಕಡೆಯಲ್ಲಿಯೂ ಕೀರ್ತಿಯನ್ನು ಹಬ್ಬಿಸುತ್ತದೆ; ಕಲ್ಪಲತೆಯಂತೆ ಇರುವ ವಿದ್ಯೆಯಿಂದ ಯಾವುದು ಕೈಗೂಡದೆ ಇರುವುದು?)

ಸಂಸಾರಸುಖದ ವಿಷಯವಾಗಿ ಬರೆದ ನಿಬಂಧಗಳಲ್ಲಿ ಶಿಕ್ಷಣವಿಷಯದ ನಿಬಂಧವನ್ನು ಸಮಾವೇಶಮಾಡಿದ್ದು ಎಷ್ಟೋ ಜನರಿಗೆ ವಿಲಕ್ಷಣವೆಂದು ಕಂಡುಬರಬಹುದು. ಯಾಕೆಂದರೆ ಬಹಳ ಜನರಿಗೆ ಚಿಕ್ಕಂದಿನಿಂದ ಶಾಲೆಯ ವಿಷಯವಾಗಿ ಆದರ ಬುದ್ಧಿಯೇ ಇರುವುದಿಲ್ಲ; ಮತ್ತು ಶಾಲೆಯನ್ನು ಬಿಟ್ಟ ಕೂಡಲೆ ಶಿಕ್ಷಣವು ಮುಗಿಯಿತೆಂದು ಅವರು ತಿಳಿಯುತ್ತಾರೆ. ಶಿಕ್ಷಣವು ಏಕಪ್ರಕಾರವಾಗಿ ನಡೆಯಬೇಕಾದರೆ ಆರಂಭದಲ್ಲಿ ಅದನ್ನು ಆದಷ್ಟು ಮನೋಹರವಾಗುವಂತೆ ಮಾಡಬೇಕು. ಮನುಷ್ಯನಿಗೆ ದೇವರು ಕೊಟ್ಟ ಮಾನಸಿಕ ಶಕ್ತಿಗಳಲ್ಲಿ ಬುದ್ಧಿಯು ಶ್ರೇಷ್ಠವಾದುದು. ಬುದ್ಧಿಯ ಉಪಯೋಗವನ್ನು ಮಾಡಿಕೊಳ್ಳಲಿಕ್ಕೆ ವಿದ್ಯೆಯು ಅತ್ಯವಶ್ಯವು. ಜ್ಞಾನವನ್ನು

ಸಂಪಾದಿಸುವ ಮಾರ್ಗಗಳೆಲ್ಲ ರಾಜಮಾರ್ಗಗಳಾಗಿವೆ. *“ಕಣ್ಣುಗಳಿಂದ ಸೃಷ್ಟಿಸೌಂದರ್ಯವನ್ನು ನೋಡುತ್ತೇವೆ; ಕಿವಿಗಳಿಂದ ಮಂಜುಳವಾದ ಧ್ವನಿಗಳನ್ನಾಗಲಿ, ಆನಂದದ ವಾರ್ತೆಗಳನ್ನಾಗಲಿ ಕೇಳುತ್ತೇವೆ. ಆದರೆ ಎಲ್ಲಪ್ರಕಾರದ ಇಂದ್ರಿಯಸುಖದ ಭೋಕ್ತೃವೇ ಮನಸ್ಸು. ಮತ್ತು ಮನಸ್ಸು ಸುಸಂಸ್ಕೃತವಾದಂತೆ ಅದಕ್ಕಾಗುವ ಆನಂದವು ಹೆಚ್ಚಾಗುತ್ತಾ ಹೋಗುತ್ತದೆ. ಸೃಷ್ಟಿಸೌಂದರ್ಯವನ್ನು ನೋಡುವುದರಿಂದಾಗಲಿ, ಜಗತ್ತಿನ ಸುವ್ಯವಸ್ಥೆಯನ್ನು ಮನನಮಾಡುವುದರಿಂದಾಗಲಿ, ಸಾಧುಸಂತರ ಉಪದೇಶವನ್ನು ಕೇಳುವುದರಿಂದಾಗಲಿ, ಯಾರ ಮನಸ್ಸಿನ ಮೇಲೆ ಏನೂ ಪರಿಣಾಮವಾಗುವುದಿಲ್ಲವೋ ಅಂಥ ಮನುಷ್ಯರು ಕತ್ತೆಗಿಂತ ಕಡೆ.” ಮನಸ್ಸನ್ನು ಸುಸಂಸ್ಕೃತವಾಗಿ ಮಾಡುವುದೇ ಶಿಕ್ಷಣದ ಮುಖ್ಯಧ್ಯೇಯವು. ಸ್ಮರಣಶಕ್ತಿಯನ್ನು ಬೆಳೆಸುವುದು ಶಿಕ್ಷಣದ ಒಂದು ಅಂಗವೇ ಹೊರತು ಸರ್ವಾಂಗಸುಂದರ ಶಿಕ್ಷಣವಲ್ಲ.

§“ಚಿಕ್ಕಮಕ್ಕಳ ಮಾನಸಿಕಶಕ್ತಿಗಳು ಬೆಳೆಯುವಂತೆ ಅವರಿಗೆ ಸುಲಭವಾದ ಪ್ರಶ್ನೆಗಳನ್ನು ಕೇಳುತ್ತ ಅವರ ಸಂಶಯಗಳನ್ನು ಆನಂದದಿಂದ ನಿವಾರಿಸುತ್ತ ಕಲಿಸುವವನೇ ಸಚ್ಛಿಕ್ಷಕನು.”

‡“ಅನೇಕ ವಿಷಯಗಳ ಜ್ಞಾನವನ್ನು ಮಾಡಿಕೊಳ್ಳುವುದರಲ್ಲಿ ಬಹಳ ಕಾಲವನ್ನು ಕಳೆಯುವುದು ಒಂದು ಪ್ರಕಾರದ ಸೋಮಾರಿತನವು; ಸಂಪಾದಿಸಿದ ಜ್ಞಾನದ ಉಪಯೋಗವನ್ನು ಎರಡನೆಯವರಿಗೆ ತೋರಿಸುವುದಕ್ಕೆ ಮಾತ್ರ ಮಾಡುವುದು ಡಾಂಭಿಕತನವು; ನೀತಿಶಾಸ್ತ್ರದ ನಿಯಮುದಂತೆ ಎರಡನೆಯವರ ವರ್ತನವನ್ನು ಪರೀಕ್ಷಿಸುವುದು ಒಂದು ಪ್ರಕಾರದ ಗರ್ವವು; ಆದರೆ ಮನುಷ್ಯನಲ್ಲಿದ್ದ ಬುದ್ಧಿಯನ್ನು ಮಾರ್ಪಡಿಸಲಿಕ್ಕೆ ಜ್ಞಾನವು ಅವಶ್ಯವಾಗಿ ಬೇಕು. ಮತ್ತು ಜ್ಞಾನವನ್ನು ಬೆಳೆಸಲಿಕ್ಕೆ ಅನುಭವವು ಬೇಕು.”

ಎಲ್ಲ ಮಾನವ ಪ್ರಾಣಿಗಳು ಒಂದೇ ತರದ ಸೃಷ್ಟಿನಿಯಮಗಳಿಂದ ಬದ್ಧರಾದ ಕಾರಣ ಒಬ್ಬರಕೂಡೊಬ್ಬರು ಪ್ರೀತಿಯಿಂದ ನಡೆದುಕೊಳ್ಳ-

---

* ಜೆರೆಮಿ ಟೇಲರ್. § ಮಾಂಟಿಗಾಮುರಿ. ‡ ಬೇಕನ್.

ಬೇಕೆಂಬ ಮಾತು ಅತ್ಯವಶ್ಯವೆಂಬುದು ಶಿಕ್ಷಣದಿಂದ ವಿಶದವಾಗಿ ತಿಳಿ-ಯುತ್ತದೆ. ಈ ಮಾತನ್ನು ಲಕ್ಷ್ಯದಲ್ಲಿಡದೆ ಎಷ್ಟು ಜ್ಞಾನವನ್ನು ಸಂಪಾ-ದಿಸಿದರೂ ಅದು ವ್ಯರ್ಥವೇ ಆದಂತಾಗುವುದು.

"ಬರಿಯ ವಿಶ್ರಾಂತಿಯನ್ನು ಹೊಂದುವ ಉದ್ದೇಶದಿಂದಾಗಲಿ, ಏಕಾಂತ-ವಾಸದ ಅಪೇಕ್ಷೆಯಿಂದಾಗಲಿ, ಎರಡನೆಯವರನ್ನು ಹಳಿಯುವುದಕ್ಕಾಗಲಿ, ಅವರ ಕೂಡ ಜಗಳ ತೆಗೆದು ಜಯಹೊಂದುವುದಕ್ಕಾಗಲಿ, ದ್ರವ್ಯಸಂಚಯ ಮಾಡುವುದಕ್ಕಾಗಲಿ ವಿದ್ಯೆಯನ್ನು ಸಂಪಾದಿಸಕೂಡದು. ಆತ್ಮೋನ್ನತಿ-ಯನ್ನು ಮಾಡಿಕೊಂಡು ಸೃಷ್ಟಿಕರ್ತನಾದ ಪರಮೇಶ್ವರನ ಕೀರ್ತನೆ-ಯನ್ನು ಮಾಡುವುದಕ್ಕೆ ವಿದ್ಯೆಯೇ ಮುಖ್ಯ ಸಾಧನವು" ಎಂದು ಲಾರ್ಡ್ ಬೇಕನ್ನನೆಂಬ ಆಂಗ್ಲ ತತ್ವಜ್ಞನು ಹೇಳುತ್ತಾನೆ. ನಮ್ಮ ಸಾಧು-ಸಂತರಾದರೂ ಇದೇ ಪ್ರಕಾರದ ಉಪದೇಶವನ್ನು ಮಾಡಿದ್ದಾರೆ.

ವಿದ್ಯೆಯ ಉಪಯುಕ್ತತೆಯ ಬಗ್ಗೆ ಎಪಿಕ್ಟಿಟಸನೆಂಬ ಸಾಧುವು ಹೇಳಿ-ದ್ದೇನಂದರೆ:—"ಭವ್ಯವಾದ ಮಂದಿರಗಳನ್ನು ಕಟ್ಟಿಸುವುದರಿಂದ ದೇಶಕ್ಕೆ ಶೋಭೆಯುಂಟಾಗದು. ಆದರೆ ದೇಶಕ್ಕೆ ಹಿತವಾಗಬೇಕೆಂದು ನೀವು ಬಯಸಿದರೆ, ಪ್ರತಿ ಒಬ್ಬ ನಾಗರಿಕನಿಗೆ ಉತ್ತಮ ಶಿಕ್ಷಣವನ್ನು ಕೊಡಿರಿ."

ಚಿಕ್ಕಂದಿನಲ್ಲಿ ಒಂದೇ ವಿಷಯದ ವ್ಯಾಸಂಗಕ್ಕೆ ಎಲ್ಲ ವೇಳೆಯನ್ನು ಉಪಯೋಗಿಸಬಾರದು. ಯಾಕೆಂದರೆ, ಚಿಕ್ಕಮಕ್ಕಳಿಗೆ ಆ ವಿಷಯದಿಂದ ಏನೂ ಬೋಧವೂ ಆನಂದವೂ ಆಗದೆ ಹೋದರೆ ಶಿಕ್ಷಣವು ಬೇಸರಿಕೆಯ ಕೆಲಸವೆಂದು ಅವರು ತಿಳಿದುಕೊಳ್ಳುವರು. ಆದುದರಿಂದ ಅವರ ಮನಸ್ಸಿನ ಒಲವಿನಂತೆ ನಡೆದು ಅವರ ಪ್ರೀತಿಯ ವಿಷಯಗಳನ್ನು ಕಲಿಸ-ಬೇಕು

ಇನ್ನು ನಮ್ಮಲ್ಲಿ ಪ್ರಚಲಿತವಾದ ಶಿಕ್ಷಣಪದ್ಧತಿಯು ಮೇಲೆ ಹೇಳಿದ ಪರಿಣಾಮಗಳನ್ನುಂಟುಮಾಡುತ್ತದೆಯೋ, ಇಲ್ಲವೋ ಎಂಬುದನ್ನು ನೋ-ಡುವ. ಅಂದರೆ, ಈ ಪದ್ಧತಿಯಿಂದ ವಿದ್ಯಾರ್ಥಿಗಳಲ್ಲಿ ಜ್ಞಾನವನ್ನು ಹೆಚ್ಚಿಸುವ ಉತ್ಕಟ ಇಚ್ಛೆಯು ಕಂಡುಬರುವುದೋ, ವಿದ್ಯಾಲಯಗಳಲ್ಲಿ ಕಲಿಸಲ್ಪಡುವ ವಿಷಯಗಳ ಮಹತ್ವವು ಅವರಿಗೆ ಗೊತ್ತಾಗುವುದೋ,

ಇಲ್ಲವೆ, ಶಾಲೆಯನ್ನು ಬಿಟ್ಟಕೂಡಲೆ ಅವರು ಆ ವಿಷಯಗಳನ್ನು ಮರೆತು ಬಿಡುತ್ತಾರೋ ಎಂಬ ಮಾತುಗಳನ್ನು ಅರಿತುಕೊಳ್ಳುವ.

ಹಿಂದುಸ್ತಾನದಲ್ಲಿ ಈಗ ಪ್ರಚಲಿತವಾದ ಶಿಕ್ಷಣಕ್ರಮವು ಇಂಗ್ಲಂಡ-ದಲ್ಲಿ ಪ್ರಚಲಿತವಾದ ಪದ್ಧತಿಯನ್ನೇ ಅನುಸರಿಸಿರುತ್ತದೆ. ಆದರೆ ಈ ದೇಶದ ಪರಿಸ್ಥಿತಿಯು ಇಂಗ್ಲಂಡದ ಪರಿಸ್ಥಿತಿಗಿಂತ ತೀರ ಭಿನ್ನವಾದುದ-ರಿಂದ ಈ ಶಿಕ್ಷಣಕ್ರಮದಿಂದ ಆಗತಕ್ಕಷ್ಟು ಹಿತವು ಆಗಿಲ್ಲ. ಇಂಗ್ಲಂಡ-ದಲ್ಲಿ ಸಹ ಅಲ್ಲಿಯ ಶಿಕ್ಷಣಪದ್ಧತಿಯ ಉಪಯುಕ್ತತೆಯ ವಿಷಯವಾಗಿ ಮತಭೇದವುಂಟು. ಈಗಿದ್ದ ಪದ್ಧತಿಯು ಉತ್ತಮವೆಂದೂ ಅಲ್ಲಿದ್ದ ಶಾಲೆಗಳ ಸಂಖ್ಯೆಯನ್ನು ಹೆಚ್ಚಿಸಿದರೆ ತೀರಿತೆಂದೂ ಕೆಲವರು ಅಭಿಪ್ರಾಯ-ಪಡುತ್ತಾರೆ. ಮತ್ತೆ ಕೆಲವರು ಈಗಿದ್ದ ಪದ್ಧತಿಯೇ ಸದೋಷವೆಂದೂ ಅದನ್ನು ಸುಧಾರಿಸದೆ ಹಾಗೇ ಸಾಗಿಸುವುದು ಅನಿಷ್ಟವೆಂದೂ ಹೇಳು-ತ್ತಾರೆ; ಈ ಅಭಿಪ್ರಾಯವು ಕೆಲಮಟ್ಟಿಗೆ ನಿಜವು.

ಇಂಗ್ಲಂಡದಂತೆ ನಮ್ಮಲ್ಲಾದರೂ ದೇಶದ ಉತ್ಕರ್ಷಕ್ಕೆ ಅತ್ಯವಶ್ಯವಾದ ಪದಾರ್ಥವಿಜ್ಞಾನಶಾಸ್ತ್ರದ ಹಾಗೂ ಕಲಾಕೌಶಲ್ಯಗಳ ಶಿಕ್ಷಣದ ಬಗ್ಗೆ ತಕ್ಕ ವ್ಯವಸ್ಥೆಯು ಆದಂತೆ ಕಂಡುಬರುವುದಿಲ್ಲ. ವಿಶ್ವವಿದ್ಯಾಲಯಗಳಲ್ಲಿ ಸಹ ಈ ವಿಷಯಗಳ ದುರ್ಲಕ್ಷ್ಯವು ಕಂಡುಬರುವುದು. ಅವುಗಳ ಬದಲು ವ್ಯವಹಾರಕ್ಕೆ ಅಷ್ಟು ಉಪಯುಕ್ತವಲ್ಲದ ವಾಙ್ಮಯ ವಿಷಯದ ಪ್ರಾಬಲ್ಯವೇ ಹೆಚ್ಚಾಗಿದೆ.

ಈ ಪ್ರಕಾರದ ದೋಷವು ಮೊದಲಿನಿಂದ ಕಂಡುಬರುತ್ತದೆ. ೧೭ನೆಯ ಶತಮಾನದಲ್ಲಿ ಪ್ರಸಿದ್ಧನಾಗಿಹೋದ ಮಿಲ್ಟನನೆಂಬ ಆಂಗ್ಲಕವಿಯು ಈ ವಿಷಯವಾಗಿ ಹೇಳಿದ್ದೇನಂದರೆ: "ಹುಡುಗರಿಂದ ವ್ಯರ್ಥವಾಗಿ ಲ್ಯಾಟಿನ ವ್ಯಾಕರಣದ ನಿಯಮಗಳನ್ನು ಪಾಠಮಾಡಿಸುತ್ತಾರೆ. ಇದು ಸರ್ವಥಾ ತಪ್ಪು. ಯಾಕೆಂದರೆ, ಅನೇಕ ಭಾಷೆಗಳ ಅಪೂರ್ಣ ಜ್ಞಾನಕ್ಕಿಂತ ಮಾತೃಭಾಷೆಯ ಪೂರ್ಣ ಜ್ಞಾನವು ಹೆಚ್ಚು ಉಪಯುಕ್ತವು." "ವಿಶ್ವ-ವಿದ್ಯಾಲಯಗಳಲ್ಲಿಯ ಪರೀಕ್ಷೆಗಳ ಸಲುವಾಗಿಯೇ ವಿದ್ಯಾರ್ಥಿಗಳಿಗೆ ಕಲಿಸುತ್ತಾರಲ್ಲದೆ, ಅವರನ್ನು ಜಗತ್ತಿನ ವ್ಯವಹಾರಕ್ಕೆ ತಕ್ಕವರನ್ನಾಗಿ

ಮಾಡುವಂತೆ ಶಿಕ್ಷಣವನ್ನು ಕೊಡುವುದಿಲ್ಲ" ಎಂದು ಲಾಕ್ ಎಂಬ ಆಂಗ್ಲ-ತತ್ವಜ್ಞನು ಹೇಳುತ್ತಾನೆ. ಈಗಿನ ಶಿಕ್ಷಣಪದ್ಧತಿಯಿಂದ ಮನಃಸುಧಾರಣೆಯಾಗುವುದಿಲ್ಲ; ನಿರೀಕ್ಷಣಶಕ್ತಿಯು ಬೆಳೆಯುವುದಿಲ್ಲ; ಅಥವಾ ಶಿಕ್ಷಣದಲ್ಲಿ ಕಳೆದ ವೇಳೆಗೆ ಅನುರೂಪವಾಗುವಷ್ಟು ವಿಷಯಸಂಗ್ರಹವು ಸಹ ಆಗುವುದಿಲ್ಲ.

"೧೪ ವರುಷದ ಹುಡುಗರಿಗೆ ಸ್ಪಷ್ಟವಾಗಿಯೂ ಮನೋಹರವಾಗಿಯೂ ಓದಲಿಕ್ಕೂ, ಅಕ್ಷರಗಳನ್ನು ದುಂಡಗೆ ಬರೆಯಲಿಕ್ಕೂ, ಗಣಿತದ ಮೂಲತತ್ವಗಳನ್ನು ಉದಾಹರಿಸುವ ಗಣಿತದ ಲೆಕ್ಕಗಳನ್ನು ಬಿಡಿಸಲಿಕ್ಕೂ ಬರುತ್ತಿರಬೇಕು. ಇದಲ್ಲದೆ ಭೂಮಿಯ ಪ್ರಾಕೃತಿಕ ಸ್ವರೂಪದ ಜ್ಞಾನವೂ, ಆಕಾಶದಲ್ಲಿಯ ಗ್ರಹನಕ್ಷತ್ರಗಳನ್ನು ನಿರೀಕ್ಷಣ ಮಾಡುವಷ್ಟು ಜ್ಯೋತಿಷ್ಯ-ಶಾಸ್ತ್ರದ ಜ್ಞಾನವೂ, ಭೂಮಿಯ ಪ್ರಾಕೃತಿಕಸ್ವರೂಪವೂ ರಾಜಕೀಯ ವಿಭಾಗಗಳೂ ಹೇಗೆ ಉಂಟಾದುವೆಂಬುದನ್ನು ತಿಳಿಯುವಷ್ಟು ಭೂಗರ್ಭ-ಶಾಸ್ತ್ರದ ಹಾಗೂ ಇತಿಹಾಸವಿಷಯದ ಜ್ಞಾನವೂ ಅವರಿಗೆ ಉಂಟಾಗಿರಬೇಕು. ಸೃಷ್ಟಿಯಲ್ಲಿದ್ದ ವನಸ್ಪತಿ, ಪ್ರಾಣಿ ಮೊದಲಾದುವುಗಳ ವ್ಯಾಪಾರ-ರಚನೆಗಳಲ್ಲಿ ಕಂಡುಬರುವ ಸಾಮ್ಯ ವೈಷಮ್ಯಗಳನ್ನು ಗೊತ್ತುಮಾಡಿ-ಕೊಳ್ಳುವಷ್ಟು ನಿರೀಕ್ಷಣ ಸಾಮರ್ಥ್ಯವೂ, ಮಾತೃಭಾಷೆಯಲ್ಲಿದ್ದ ಉತ್ತಮ ಗ್ರಂಥಗಳ ಪರಿಚಯವೂ ಅವರಿಗೆ ಆಗಿರಬೇಕು. ಇವುಗಳಲ್ಲದೆ ಗಾಯನ ಚಿತ್ರಕಲೆಗಳ ಅಭ್ಯಾಸವು ಕೆಲಮಟ್ಟಗೆ ಆಗಿರಬೇಕು" ಎಂದು ಗ್ರ್ಯಾಂಟ್ ಡಫನು ಅಭಿಪ್ರಾಯಪಡುತ್ತಾನೆ. ಆದರೆ, ಈ ಪ್ರಕಾರ ಶಿಕ್ಷಿತ-ರಾದ ಬಾಲಕರು ನಮ್ಮ ಹಿಂದುಸ್ತಾನದಲ್ಲಿ ಹಲವರು ಇರುವರೆಂದು ಸಹ ನಿಶ್ಚಿತವಾಗಿ ಅನ್ನಲಾರೆವು. ಆದರೆ ಈ ಪ್ರಕಾರದ ಶಿಕ್ಷಣವನ್ನು ಕೊಡ-ಲಿಕ್ಕೆ ಮುಂದಾಳುಗಳು ದೀರ್ಘ ಪ್ರಯತ್ನವನ್ನು ಮಾಡಲಿಕ್ಕೆ ಬೇಕು. ಕೆಲವು ವಿಷಯಗಳ ಪೂರ್ಣಜ್ಞಾನವೂ ಎಲ್ಲ ವಿಷಯಗಳ ಸಾಧಾ-ರಣ ಜ್ಞಾನವೂ ಪ್ರತಿಯೊಬ್ಬ ನಾಗರಿಕನಿಗೆ ಅವಶ್ಯವೆಂದು ಆಂಗ್ಲ-ಸರದಾರನಾದ ಲಾರ್ಡ್ ಬ್ರೋಗಮ್ ಎಂಬವನು ಅಭಿಪ್ರಾಯಪಡು-ತ್ತಾನೆ.

ಶಾಲೆಯಲ್ಲಿಯೂ ದೊಡ್ಡ ವಿದ್ಯಾಲಯಗಳಲ್ಲಿಯೂ ಭಾಷೆ, ಗಣಿತ ಮುಂತಾದ ವಿಷಯಗಳ ಪ್ರಾಬಲ್ಯವು ಹೆಚ್ಚಾಗಿದೆಯೆಂದು ಹಿಂದೆ ಹೇಳಿದ್ದೇವೆ. ಈ ವಿಷಯಗಳ ಅಭ್ಯಾಸವು ಅನಾವಶ್ಯಕವೆಂತಲ್ಲ; ಆದರೆ ಶಾಸ್ತ್ರೀಯ ವಿಷಯಗಳ ಅಭ್ಯಾಸವನ್ನು ಈ ಅಭ್ಯಾಸ ಕ್ರಮದಲ್ಲಿ ಸೇರಿಸುವುದು ಅತ್ಯವಶ್ಯವು. ಈ ಶಿಕ್ಷಣದಿಂದ ವಿದ್ಯಾರ್ಥಿಗಳ ಸ್ಮರಣಶಕ್ತಿಯು ವೃದ್ಧಿ ಹೊಂದುವುದೇ ಹೊರತು ಅವರ ಮನಸ್ಸು ಸುಸಂಸ್ಕೃತವಾಗುವುದಿಲ್ಲ. ಪ್ರಾಥಮಿಕ ಶಾಲೆಗಳಲ್ಲಿ ಶುದ್ಧಲೇಖನದಿಂದ ಚಿಕ್ಕ ಮಕ್ಕಳಿಗೆ ಬೇಸರಿಕೆಯುಂಟಾಗುತ್ತದೆ. ಮುಂದೆ ಹೋದಹಾಗೆ ಇತಿಹಾಸದಲ್ಲಿಯ ಯುದ್ಧದ ಸ್ಥಳಗಳನ್ನೂ, ತಾರೀಖು, ಇಸವಿ ಮೊದಲಾದುವುಗಳನ್ನೂ ಪಾಠಮಾಡಬೇಕಾಗುತ್ತದೆ. ಅವುಗಳಿಂದ ಅವರ ಮನಸ್ಸಿಗೆ ಎಂಥ ಸಂಸ್ಕಾರವೂ ಆಗುವುದಿಲ್ಲ. ನಿತ್ಯದ ವ್ಯವಹಾರಕ್ಕೆ ಉಪಯುಕ್ತವಾದ ವಿಷಯಗಳ ಅಭ್ಯಾಸವು ಶಾಲೆಗಳಲ್ಲಿ ಸ್ವಲ್ಪಾದರೂ ನಡೆಯುವುದಿಲ್ಲ. ದೊಡ್ಡದೊಡ್ಡ ವಿದ್ಯಾಲಯಗಳ ಸ್ಥಿತಿಯಾದರೂ ಹೀಗೇ ಸರಿ. ಅಲ್ಲಿ ನಿಯಮಿತ ಪುಸ್ತಕಗಳನ್ನು ಟಿಪ್ಪಣಿ(notes)ಗಳ ಸಹಾಯದಿಂದ ಓದಿ ತಮ್ಮ ಅಭ್ಯಾಸಕ್ರಮವನ್ನು ಮುಗಿಸುವ ವಿದ್ಯಾರ್ಥಿಗಳೇ ಬಹಳ. ಇನ್ನು ಸರಿಯಾದ ಅಭ್ಯಾಸಕ್ರಮವು ಆವುದೆಂಬುದನ್ನು ನೋಡುವ. ಚಿಕ್ಕ ಮಕ್ಕಳಿಗೆ ಆನಂದವಾಗುವಂತೆಯೂ, ಅವರ ಶೋಧಕಬುದ್ಧಿಯೂ ವಿಚಾರಶಕ್ತಿಯೂ ಬೆಳೆಯುವಂತೆಯೂ, ಶಿಕ್ಷಣಕ್ರಮವನ್ನು ಏರ್ಪಡಿಸಬೇಕು.

ನಾವು ಶಾಲೆಯನ್ನು ಬಿಟ್ಟಕೂಡಲೆ ವಿದ್ಯಾವ್ಯಾಸಂಗವನ್ನು ಬಿಟ್ಟುಕೊಡಬಾರದು; ವಿದ್ಯಾಲಯದಲ್ಲಿ ದೊರೆತ ಶಿಕ್ಷಣದಿಂದುಂಟಾದ ಜ್ಞಾನವನ್ನು ಬೆಳೆಸಲಿಕ್ಕೆ ಪ್ರಯತ್ನಿಸುತ್ತಿರಬೇಕು. ನಾವು ಯಾವ ಉದ್ಯೋಗವನ್ನು ಕೈಕೊಂಡರೂ ನಮ್ಮ ಪ್ರೀತಿಯ ವಿಷಯವನ್ನು ಅಭ್ಯಾಸಿಸುತ್ತಿರಬೇಕು. ಆ ವಿಷಯವು (ಶಾಸ್ತ್ರವು, ವಾಙ್ಮಯವು ಅಥವಾ ಕಲೆಯು) ಯಾವದಿದ್ದರೂ ಅದು ಆನಂದದ ಸಾಧನವಾಗುವುದು. ಈ ಜಗತ್ತು ಸುಖಮಯವಾದರೂ ಮನುಷ್ಯಪ್ರಾಣಿಯು ಮೇಲಿಂದಮೇಲೆ ದುಃಖ,

ಸಂಕಟ, ವಿಪತ್ತುಗಳಿಗೆ ಒಳಗಾಗುತ್ತಾನೆ. ಅಂಥ ಪ್ರಸಂಗದಲ್ಲಿ ತನ್ನ ಪ್ರೀತಿಯ ವಿಷಯದೊಳಗೆ ಮನಸ್ಸನ್ನು ತೊಡಗಿಸಿ ದುಃಖವನ್ನು ಕೆಲ-ಮಟ್ಟಿಗೆ ಮರೆಯಬಹುದು.

ವಿದ್ಯೆಯ ಸಂಸ್ಕಾರವಾದವರಿಗೆ ಅನೇಕ ಪ್ರಕಾರದಿಂದ ಆನಂದ-ವಾಗುವುದು. ಸೃಷ್ಟಪದಾರ್ಥಗಳನ್ನು ನಿರೀಕ್ಷಣಮಾಡುವುದರಿಂದಲೂ, ಸಾಹಿತ್ಯ, ಸಂಗೀತ ಮೊದಲಾದ ಕಲೆಗಳನ್ನು ಗೊತ್ತುಮಾಡಿಕೊಳ್ಳುವುದ-ರಿಂದಲೂ, ಕವಿತೆಯೊಳಗಿನ ಸುರಸವಾದ ಭಾಗಗಳನ್ನು ಓದುವುದ-ರಿಂದಲೂ, ಇತಿಹಾಸದಲ್ಲಿ ಪ್ರಸಿದ್ಧರಾದ ಪುರುಷರ ಗುಣಗಳನ್ನು ಮನನ-ಮಾಡುವುದರಿಂದಲೂ ಆನಂದವಾಗದೆ ಇರದು.

ನಮ್ಮ ದೇಶದಲ್ಲಿ ಸರಕಾರದವರೂ, ದೇಶದ ಮುಂದಾಳುಗಳೂ ಶಿಕ್ಷಣದ ವಿಷಯದಲ್ಲಿ ಆವಪ್ರಕಾರದ ಸುಧಾರಣೆಗಳನ್ನುಂಟುಮಾಡ-ತಕ್ಕದ್ದೆಂಬುದನ್ನು ನೋಡುವ. ಶಾಲೆಗಳ ಸಂಖ್ಯೆಯನ್ನು ಬೆಳಿಸಿ ಪ್ರತಿ-ಯೊಂದು ಹಳ್ಳಿಯಲ್ಲಿ ಒಂದು ಶಾಲೆಯನ್ನಿಡುವಂತೆ ಮಾಡಬೇಕು. ಅಲ್ಲಿ ವಿದ್ಯಾರ್ಥಿಗಳಿಗೆ ಶಿಕ್ಷಣವು ಉಚಿತವಾಗಿ ದೊರೆಯಬೇಕು. ಶಿಕ್ಷಣ-ಕ್ರಮವಾದರೂ ಆಯಾ ಹಳ್ಳಿಗಳಲ್ಲಿದ್ದ ಜನರ ಸ್ಥಿತಿರೀತಿಗಳಿಗನುರೂಪ-ವಾಗಿರಬೇಕು. ದೇಶದಲ್ಲಿ ಕಲಾಕೌಶಲ್ಯವು ಬೆಳೆದಂತೆ, ಪುಸ್ತಕಗಳು ಅಗ್ಗವಾದಂತೆ, ಧರ್ಮಾರ್ಥ ಪುಸ್ತಕಾಲಯಗಳು ಹೆಚ್ಚಾದಂತೆ ಜನರ ಮನಸ್ಸು ಸುಸಂಸ್ಕೃತವಾಗುವುದು. ಈ ಪ್ರಕಾರ ನಡೆಯುವ ವಿದ್ಯಾ-ದಾನದಿಂದ ಜನರ ಬಡತನವೂ, ದುಃಖಗಳೂ ಹಿಂಗಿ ಅವರು ಉನ್ನತ ಸ್ಥಿತಿಯನ್ನು ಹೊಂದುವರು. ಮುಖ್ಯವಾಗಿ ಬಾಲಕರಲ್ಲಿ ಜ್ಞಾನದ ಬಗ್ಗೆ ಪ್ರೇಮವುಂಟಾಗುವಂತೆ ಶಿಕ್ಷಣವನ್ನು ಕೊಡುವುದು ಅವಶ್ಯವು. ಸುಶಿಕ್ಷಿ-ತರು ಎಲ್ಲಿ ಹೋದರೂ ಆನಂದ ಹೊಂದುವರು. ತಮ್ಮ ದೇಶದ ಧರ್ಮ, ಇತಿಹಾಸ, ವಾಙ್ಮಯ ಮೊದಲಾದುವುಗಳ ವಿಷಯವಾಗಿ ಅವರಲ್ಲಿ ಅಭಿ-ಮಾನವೂ ತತ್ಪರತೆಯೂ ಉಂಟಾಗುವವು. ಇನ್ನು ಹುಡುಗರಿಂದ ವಿಷಯಗಳನ್ನು ಗಿಳಿಗಳಂತೆ ಪಾಠಮಾಡಿಸುವ ಪಾಠಶಾಲೆಗಳು ಶಿಕ್ಷಣಾ-ಲಯಗಳಲ್ಲ. ಆದರೆ ನೈತಿಕ ಪ್ರವೃತ್ತಿಗಳನ್ನೂ ಬುದ್ಧಿಸಾಮರ್ಥ್ಯವನ್ನೂ

ಬಲಪಡಿಸಿ, ಹುಡುಗರನ್ನು ಕರ್ತವ್ಯದಕ್ಷರನ್ನಾಗಿ ಮಾಡುವ ಶಾಲೆಗಳೇ ಶಿಕ್ಷಣಾಲಯಗಳು ಸುಶಿಕ್ಷಣದಿಂದ, ಜ್ಞಾನವು ಎಷ್ಟು ಅಗಾಧವೆಂಬುದೂ ನಮಗಿದ್ದ ಜ್ಞಾನವು ಎಷ್ಟು ಅಲ್ಪವೆಂಬುದೂ ಗೊತ್ತಾಗುವುದು. ಸಂಸಾರದಲ್ಲಿ ದುಃಖಗಳು ನಮ್ಮ ತಪ್ಪಿನಿಂದಲೇ ಒದಗುವುವು. ಶಿಕ್ಷಣದಿಂದುಂಟಾದ ಜ್ಞಾನವೇ ದುಃಖಗಳನ್ನು ಮರೆಯಿಸಿ ಸುಖವನ್ನೀಯುವ ಸಮೀಚೀನ ಸಾಧನವು. "ಶಾಂತಮನಸ್ಕನಾಗಿ ಅಭ್ಯಾಸಮಾಡುವಾಗ ಸತ್ಯದೇವತೆಯ ಸುಂದರಮೂರ್ತಿಯು ನಮ್ಮೆದುರಿಗೆ ನಿಂತಂತಾಗುವುದು."

—**ಮಿಲ್ಟನ್**.

ಮತ್ತು "ಸತ್ಯದೇವತೆಯ ಅನುಜ್ಞೆಯಂತೆ ನಡೆಯುವುದರಿಂದ ಪರಮ ಸುಖವಾಗುವುದೆಂಬ ಮಾತಿಗೆ ಏನೂ ಸಂದೇಹವಿಲ್ಲ." —**ಬೇಕನ್**.

ಪರಮೇಶ್ವರನು ನಮ್ಮನ್ನು ಜನ್ಮಕ್ಕೆ ತಂದು ಆಯುರಾರೋಗ್ಯಗಳನ್ನು ಕೊಟ್ಟ ಬಗ್ಗೆ ಆತನ ಉಪಕಾರವನ್ನು ಚಿರಕಾಲ ಸ್ಮರಿಸಿದರೂ ತೀರದೆಂಬ ಮಾತು ಸಹ ಶಿಕ್ಷಣದಿಂದಲೇ ನಮಗೆ ತಿಳಿಯುವುದು.

—·✧· **ಸಮಾಪ್ತ** ·✧·—

# ೨ನೆಯ ಭಾಗ.

---

## ಪ್ರಥಮಾಧ್ಯಾಯ.

---

### ಮಹತ್ವಾಕಾಂಕ್ಷೆ.

“स जीवति यशो यस्य कीर्तिर्यस्य स जीवति ।
अयशोऽकीर्तिसंयुक्तो जीवन्नपि मृतोपमः ॥” —सुभाषित.

(ಯಶಸ್ವಿಯೇ ಜೀವವಂತನು; ಕೀರ್ತಿವಂತನೇ ಸಜೀವಿಯು. ಹೆಸರು ಪಡೆಯದ ಅಪ್ರಸಿದ್ಧ ಪಾಮರನು ಜೀವನ್ಮೃತನೇ ಸರಿ.)




ಗತ್ತಿನಲ್ಲಿ ಇದುವರೆಗೆ ಆಗಿಹೋದ ಪ್ರಸಿದ್ಧ ಪುರುಷರೆಲ್ಲರಲ್ಲಿಯೂ ಮಹತ್ವಾಕಾಂಕ್ಷೆಯಿತ್ತೆಂಬುದು ಪುರಾಣೇತಿಹಾಸಗಳಿಂದ ಗೊತ್ತಾಗುತ್ತದೆ. ಮಹತ್ವಾಕಾಂಕ್ಷೆಯು ಇಷ್ಟವಾದ ಗುಣವಲ್ಲವೆಂದು ಕೆಲವರ ಅಭಿಪ್ರಾಯವಿದ್ದರೂ ಆ ಗುಣದಿಂದ ಅಹಿತವೇ ಆಗುತ್ತದೆಂತಲ್ಲ; ಅದರ ಸದುಪಯೋಗದಿಂದ ಧೈರ್ಯ, ಸಾಹಸ, ಕಾರ್ಯತತ್ಪರತೆ ಮೊದಲಾದ ಸದ್ಗುಣಗಳುಂಟಾಗುವುವು. ಆದರೆ ಅದರಿಂದ ಖ್ಯಾತಿಕಾಮುಕತೆ, ಸ್ವಾರ್ಥಪರಾಯಣತೆ, ಮೊದಲಾದ ಅವಗುಣಗಳು ಸಹ ತಲೆದೋರುವುವೆಂಬುದಿಷ್ಟೇ ಅನಿಷ್ಟವು.

“ಸತ್ಕೀರ್ತಿ ಸದ್ಗುಣಗಳನ್ನು ಸಂಪಾದಿಸುವುದೇ ಆಯುಷ್ಯದ ಅಂತಿಮಹೇತುವೆಂಬ ತತ್ವವನ್ನು ಗುರುಗಳಿಂದಲೂ ಗ್ರಂಥಗಳಿಂದಲೂ ನಾನು ಕಲಿತುದರಿಂದ ಅವುಗಳನ್ನು ಸಂಪಾದಿಸಲಿಕ್ಕೆ ಎಡೆಬಿಡದೆ

ಪ್ರಯತ್ನಿಸಿದೆನು. ಅಂಥ ಪ್ರಯತ್ನದಲ್ಲಿ ಶರೀರಯಾತನೆಗಳನ್ನೂ ದೇಶ-ತ್ಯಾಗವನ್ನೂ ಲೆಕ್ಕಿಸದೆ, ಕೈಕೊಂಡ ಕಾರ್ಯಗಳನ್ನು ಕೊನೆಗಾಣಿಸು-ವವನೇ ಶೂರನು; ಅವನೇ ವೀರನು." — **ಸಿಸಿರೊ.**

"ಅನೇಕರು ಒಂದೇ ಪ್ರಕಾರದ ಕಾರ್ಯವನ್ನು ಆರಂಭಿಸಿದರೆ ಅವ-ರೆಲ್ಲರಿಗೂ ಕಾರ್ಯಸಿದ್ಧಿಯಾಗಲಾರದು; ಅವರಲ್ಲಿ ಯಾವನಾದರೂ ಒಬ್ಬನಿಗೆ ಯಶಃಪ್ರಾಪ್ತಿಯಾಗುವುದು." — **ಟೆನಿಸನ್.**

ಈ ಅಭಿಪ್ರಾಯವು ಪೂರ್ಣವಾಗಿ ನಿಜವಲ್ಲೆಂದು ಕಂಡುಬರುತ್ತದೆ. ಯಾಕೆಂದರೆ ಯೋಗ್ಯತೆಯುಳ್ಳ ಜನರಿಗೆಲ್ಲ ಯಶಃಪ್ರಾಪ್ತಿಯಾಗದೆ ಇರದು. ಸನ್ಮಾರ್ಗದಿಂದ ನಡೆಯುತ್ತಿದ್ದ ಕಾಲಕ್ಕೆ ಒದಗಿದ ಅಪಜಯವು ಕಾಪಟ್ಯದಿಂದ ದೊರಕಿಸಿದ ಜಯಕ್ಕಿಂತ ಹೆಚ್ಚು ಇಷ್ಟವು. ಧೈರ್ಯ-ಶಾಲಿಗಳಿಗೆ ಅಪಜಯದಿಂದ ಕಾರ್ಯದಲ್ಲಿ ಹೆಚ್ಚು ಪ್ರವೃತ್ತಿಯಾಗು-ವುದೇ ಹೊರತು ಅದರಿಂದ ನಿವೃತ್ತಿ(ನಿರುತ್ಸಾಹ)ಯಾಗದು. ಮನೋ-ರಥಗಳನ್ನೆಲ್ಲ ಕೊನೆಗಾಣಿಸುವುದು ಕಠಿಣವಾದರೂ ಪ್ರಯತ್ನಮಾಡದೆ ಸುಮ್ಮನೆ ಕೂಡ್ರುವವರು ಹೇಡಿಗಳು. ಕರ್ತವ್ಯದಕ್ಷನಾದವನನ್ನು ಲಕ್ಷ್ಮಿಯು ವರಿಸುವಳು; ತತ್ವಶೋಧಕನಿಗೆ ಸರಸ್ವತಿಯು ಒಲಿಯುವಳು; ಅವರಿರ್ವರ ಮೇಲೂ ಯಶೋದೇವಿಯು ಅನುಗ್ರಹಮಾಡುವಳು. ನಾವು ಕೈಕೊಳ್ಳತಕ್ಕ ಕಾರ್ಯಗಳ ಮೆಟ್ಟನ್ನು ಅರಿತುಕೊಂಡು ವೇಳೆ-ಯನ್ನು ವ್ಯರ್ಥ ಕಳೆಯದೆ ಉದ್ಯೋಗ ಮಾಡಿದರೆ ಪ್ರತಿಫಲ ದೊರಕು-ವುದು ನಿಜವು. ಕೀರ್ತಿಯು ಮನುಷ್ಯನಲ್ಲಿ ಗುಪ್ತವಾಗಿದ್ದ ಕರ್ತೃತ್ವ ಶಕ್ತಿಯನ್ನು ಬೈಲಿಗೆ ತರುತ್ತದೆ; ಹಾಗು ಸ್ವಾರ್ಥವನ್ನು ತೊರೆದು ಅನನು-ಕೂಲತೆಗಳನ್ನು ಲೆಕ್ಕಿಸದೆ ಸತತವಾಗಿ ದುಡಿಯಬೇಕೆಂಬ ಹಂಬಲವನ್ನು ಹುಟ್ಟಿಸಿ ಅವನನ್ನು ಯಾವುದಾದರೂ ಮಹತ್ವದ ಕಾರ್ಯಕ್ಕೆ ಹಚ್ಚುತ್ತದೆ.

ಯುದ್ಧದಲ್ಲಿ ಜಯಾಪಜಯಗಳು ಕೊನೆಕೊನೆಯ ಅರೆಗಳಿಗೆಯ ಹೋರಾಟದಿಂದ ನಿಶ್ಚಿತವಾಗುವಂತೆ ಎಲ್ಲ ಕಾರ್ಯಗಳಲ್ಲಿ ಸಹ ಪ್ರತಿಫಲ ದೊರಕುವುದು ಅಥವಾ ಬಿಡುವುದು. ಕಟ್ಟಕಡೆಯ ಅರೆಗಳಿಗೆಯ ಉದ್ಯೋಗದಿಂದಲೇ ನಿಶ್ಚಿತವಾಗುವುದು. "ಮಾಂಟ್ ಬೆಲೋದ ಯುದ್ಧ-

ದಲ್ಲಿ ನಾನು ನನ್ನ ಸೇನಾಪತಿಯಾದ ಕೆಲರಮಾನನಿಗೆ ೮೦೦ ರಾಹುತ-ರೊಂದಿಗೆ ಹಂಗರಿಯ ೬೦೦೦ ಸೈನಿಕರ ಪ್ರಚಂಡ ಸೇನೆಯನ್ನು ಹಿಂದ-ಕ್ಕಟ್ಟೆಂದು ಅಪ್ಪಣೆಮಾಡಲು, ಸಮೀಪದಲ್ಲಿಯೇ ಆಸ್ಟ್ರಿಯದ ಅಶ್ವಸೈನ್ಯವು ಬರುತ್ತಿದ್ದರೂ, ಅವರ ಮೇಲೆ ಧೈರ್ಯದಿಂದ ಸಾಗಿ ಅರೆಗಳಿಗೆಯಲ್ಲಿ ಅವರನ್ನು ಹಿಮ್ಮೆಟ್ಟಿಸಿದನು" ಎಂದು ನೆಪೋಲಿಯನ್ನನು ಸಾಭಿಮಾನ-ದಿಂದ ಹೇಳುತ್ತಾನೆ.

ಮೇಲೆ ಹೇಳಿದ ನೀತಿಯ ಮಾತು ನಿಜವೆಂಬುವುದಕ್ಕೆ ವಾಟರ್ಲೂದ ಯುದ್ಧವೇ ಸಾಕ್ಷಿಯು. ೧೮೧೫ನೇ ಇಸವಿಯ ಜೂನ್ ೧೮ನೆಯ ತಾರೀಖಿನ ದಿವಸ ಸಂಜೆಗೆ ಯುದ್ಧವು ಮುಗಿಯುವ ಕಾಲಕ್ಕೆ ಜರ್ಮನ್ ಸೇನಾಧಿಪತಿಯಾದ ಬ್ಲುಚರನು ವೆಲಿಂಗ್ಟನ್ನನ ಸಹಾಯಕ್ಕೆ ಅರೆಗಳಿಗೆ ತಡನಾಗಿ ಬಂದಿದ್ದರೆ ನೆಪೋಲಿಯನ್ನನು ಜಯದುಂದುಭಿಯನ್ನು ಹೊಡೆ-ಸಬಹುದಾಗಿತ್ತು; ಹಾಗೂ ಜಗತ್ತಿನ ಇತಿಹಾಸದಲ್ಲಿ ಬಹು ದೊಡ್ಡ ಕ್ರಾಂತಿಯನ್ನು ನೆರವೇರಿಸಬಹುದಾಗಿತ್ತು.

ಆದುದರಿಂದ ಅರೆಗಳಿಗೆಯನ್ನು ಸಹ ವ್ಯರ್ಥ ಕಳೆಯದೆ ಎಡರು-ಗಳನ್ನು ಬದಿಗೊತ್ತಿ ವಿಘ್ನಗಳನ್ನು ಲೆಕ್ಕಿಸದೆ, ಪ್ರಾರಂಭಿಸಿದ ಕಾರ್ಯ-ಗಳನ್ನು ಕೊನೆಗಾಣಿಸುವವರೇ ಉತ್ತಮರು.

> "प्रारभ्यते न खलु विघ्नभयेन नीचैः
> प्रारभ्य विघ्नविहता विरमंति मध्याः ।
> विघ्नैः पुनः पुनरपि प्रतिहन्यमानाः
> प्रारब्धमुत्तमजना न परित्यजंति" ॥ —भर्तृहरि.

(ಎಡರುಗಳು ಬರುವುವೆಂಬ ಅಂಜಿಕೆಯಿಂದ ನೀಚರು ಕೆಲಸಗಳನ್ನು ಆರಂಭಿ-ಸುವುದಿಲ್ಲ. ಸಾಧಾರಣ ಜನರು ಎಡರುಗಳು ಬಂದಕೂಡಲೆ ಪ್ರಾರಂಭಿಸಿದ ಕಾರ್ಯ-ಗಳನ್ನು ಬಿಟ್ಟುಬಿಡುತ್ತಾರೆ. ಆದರೆ ಉತ್ತಮ ಜನರು ಆರಂಭಿಸಿದ ಕೆಲಸಗಳನ್ನು ಎಷ್ಟು ಎಡರುಗಳು ಬಂದರೂ ಬಿಡರು.)

ಮೇಲಿನ ಶ್ಲೋಕದಲ್ಲಿ ವರ್ಣಿಸಿದ ಉತ್ತಮ ಜನರು ಯಾವ ಉದ್ದೇಶ್ಯ-ದಿಂದ ದುಡಿಯುವರೆಂಬುದನ್ನು ನೋಡುವ. ಅವರಲ್ಲಿ ಹಲವರು ವೈಭವ-

ವನ್ನು ದೊರಕಿಸಬೇಕೆಂದೂ, ಕೆಲವರು ಕೀರ್ತಿಯನ್ನು ಸಂಪಾದಿಸಬೇಕೆಂದೂ, ಮತ್ತೆ ಕೆಲವರು ಧನವಂತರಾಗಬೇಕೆಂದೂ ದುಡಿಯುತ್ತಾರೆ. ಇನ್ನು ನಿಜವಾದ ವೈಭವವು ಯಾವುದೆಂಬುದನ್ನು ಗೊತ್ತುಹಚ್ಚುವುದು ಕಠಿಣವಾದರೂ ಅವಶ್ಯವಾದ ಮಾತಾಗಿದೆ. ಸಾತ್ವಿಕವೃತ್ತಿಯಿಂದಿದ್ದು ಪರೋಪಕಾರದಲ್ಲಿ ತನುಮನೋಧನಗಳನ್ನು ವಿನಿಯೋಗಿಸುವುದೇ ನಿಜವಾದ ವೈಭವಸಂಪಾದನೆಯ ಮಾರ್ಗವು. ಇಂಥ ವೈಭವವನ್ನು ಸಂಪಾದಿಸಲಿಕ್ಕೆ ಹವಣಿಸುವವರು ಅತಿಸ್ವಲ್ಪ ಜನರು. "ಮೀನುಗಾರನು ಮೀನುಗಳನ್ನು ಹಿಡಿಯುವುದರಲ್ಲಿಯೂ, ಬೇಟೆಗಾರನು ಹುಲಿಚಿಗರಿಗಳ ಬೇಟೆಯಲ್ಲಿಯೂ, ಅರಸನು ಶತ್ರುಗಳನ್ನು ಜಯಿಸುವುದರಲ್ಲಿಯೂ ಆನಂದ ಹೊಂದುತ್ತಾನೆ."

—**ಮಾರ್ಕಸ್ ಅರೇಲಿಯಸ್**.

ಜಗಜ್ಜೇತೃಗಳೆಂದು ಹೆಸರಾದ ಸಿಕಂದರ, ಸೀಝುರ, ನೆಪೋಲಿಯನರು ಮಹತ್ವಾಕಾಂಕ್ಷಿಗಳಾಗಿದ್ದರು. ಅವರೆಲ್ಲರಲ್ಲಿಯೂ ಹೆಚ್ಚುಹೆಚ್ಚು ರಾಜ್ಯಗಳನ್ನು ಗೆಲ್ಲಬೇಕೆಂಬ ಅಭಿಲಾಷೆಯಿತ್ತು. ಸಿಕಂದರನ ತಂದೆಯಾದ ಫಿಲಿಪನು ಅನೇಕ ಪ್ರಾಂತಗಳನ್ನು ಜಯಿಸಿ ವಶಮಾಡಿಕೊಂಡನೆಂಬ ವೃತ್ತಾಂತವನ್ನು ಕೇಳಿ, ತನ್ನ ತಂದೆಯು ಹೀಗೆ ಎಲ್ಲ ಪ್ರಾಂತಗಳನ್ನು ಗೆದ್ದುಕೊಂಡರೆ ತನಗೆ ಗೆಲ್ಲಲಿಕ್ಕೆ ಒಂದೂ ರಾಜ್ಯವು ಉಳಿಯಲಿಕ್ಕಿಲ್ಲವೆಂದು ಅವನು ವ್ಯಸನಪಡುತ್ತಿದ್ದನು ಜಯಿಸಲಸಾಧ್ಯವಾದ ಅಸಂಖ್ಯ ನಕ್ಷತ್ರಗಳುಂಟೆಂಬುದನ್ನು ನೋಡಿ ಅವನಿಗೆ ಬಹಳ ದುಃಖವಾಗುತ್ತಿತ್ತಂತೆ. ಮಹತ್ವಾಕಾಂಕ್ಷಿಗಳು ಸ್ವಕಾರ್ಯಸಾಧನೆಯಲ್ಲಿ ನೀಚಕೃತ್ಯಗಳನ್ನಾದರೂ ಮಾಡಲು ಹೇಸುವುದಿಲ್ಲ.

ತಾತ್ವಿಕರೀತಿಯಿಂದ ವಿಚಾರಮಾಡಿದರೆ, ಅಪರಿಮಿತ ಹಣವುಳ್ಳವನಾಗಲಿ, ಅನೇಕ ರಾಜ್ಯಗಳ ಸಾರ್ವಭೌಮನಾಗಲಿ ಸುಖಿಯಲ್ಲ. ಆತ್ಮೋನ್ನತಿಯನ್ನು ಮಾಡಿಕೊಳ್ಳುವ ಸತ್ಪುರುಷರೇ ಸುಖಿಗಳು; ಅವರೇ ಕೀರ್ತಿವಂತರು. ಪ್ರಾಚೀನಕಾಲದ ಋಷಿಗಳೂ, ತಪಸ್ವಿಗಳೂ, ರಾಜರ್ಷಿಗಳೂ, ಅರ್ವಾಚೀನಕಾಲದ ಧರ್ಮಸ್ಥಾಪಕರೂ, ಧರ್ಮಸುಧಾರ-

ಕರೂ, ಸಾಧುಗಳೂ, ದಾಸರೂ, ಸಂತರೂ ಮೇಲಿನ ವರ್ಗಕ್ಕೆ ಒಳ-
ಪಡುತ್ತಾರೆ.

ಜಗತ್ತಿನಲ್ಲಿ ಆಗಿಹೋದ ಕಲಿಗಳೂ ವೀರರೂ ಸಹ ಕೀರ್ತಿವಂತ-
ರೆಂದು ಹೆಸರಾಗಿದ್ದಾರೆ. ಆದರೆ ಅವರ ನೆನಪು ಕೆಲಕಾಲ ಉಳಿಯು-
ವುದೇ ಹೊರತು ಚಿರಕಾಲ ಬಾಳಲಾರದು. ಅಪಕೀರ್ತಿಯಿಂದ ಇತಿ-
ಹಾಸದಲ್ಲಿ ಪ್ರಸಿದ್ಧರಾಗುವುದಕ್ಕಿಂತ ಅಪ್ರಸಿದ್ಧರಾಗಿದ್ದು ಸತ್ಕೃತ್ಯಗಳಲ್ಲಿ
ಆಯುಷ್ಯವನ್ನು ಕಳೆಯುವುದು ಹೆಚ್ಚು ಅಭಿನಂದನೀಯವಾದುದು. ಮಗನ
ಕೊಲೆಯನ್ನು ಮಾಡಿಸಿದ ದುರುಳ ಆನಂದೀಬಾಯಿಯಂಥ ಸ್ತ್ರೀಯರು
ಹುಟ್ಟುವುದು ದೇಶದ ದುರ್ಭಾಗ್ಯವು. ಆದರೆ ಸುಶೀಲೆಯರೂ ಪತಿವ್ರತೆ-
ಯರೂ ಧಾರ್ಮಿಕರೂ ಆದ ಸ್ತ್ರೀಯರು ದರಿದ್ರರಾಗಿ ಅಪ್ರಸಿದ್ಧರಿದ್ದರೂ
ಸಹ ದೇಶದ ಭಾಗ್ಯೋದಯವನ್ನು ಸೂಚಿಸುವರು.

ದುಷ್ಕೃತ್ಯಗಳಿಂದ ಪ್ರಸಿದ್ಧರಾದ ಅಸಂಖ್ಯಜನರ ಚರಿತ್ರಗಳನ್ನು ಇತಿ-
ಹಾಸದಲ್ಲಿ ಕಾಣಬಹುದು. ಪೃಥ್ವೀರಾಜನನ್ನು ಬಗ್ಗುಬಡಿಯುವ ಉದ್ದೇ-
ಶ್ಯದಿಂದ ಘೋರೀಮಹಮ್ಮದನಿಗೆ ಸಹಾಯಮಾಡಿದ ಕನೋಜದ ಅರಸ-
ನಾದ ಜಯಚಂದನೂ, ಹಾದಿಕಾರರನ್ನು ಬಡಿಯುವ ಪೆಂಡಾರಿಗಳ
ನಾಯಕರಾದ ಚಿತು ಅಹಮ್ಮದರೂ, ಕನಿಕರವಿಲ್ಲದೆ ದಿಲ್ಲಿಯ ಅಸಂಖ್ಯ
ನಿವಾಸಿಗಳನ್ನು ಕೊಲ್ಲಿಸಿದ ನಾದಿರಶಹನೂ ಕುಟಿಲ ಇಲ್ಲವೆ ಕ್ರೂರ
ಕೃತ್ಯಗಳಿಂದ ಇತಿಹಾಸ ಪ್ರಸಿದ್ಧರಾಗಿದ್ದಾರೆ.

ಗ್ರೀಸದೇಶದಲ್ಲಿ ಲಿಯೊನಿಡಾಸನೆಂಬ ವೀರನು ಥರ್ಮಾಪಿಲಿಯ
ಇಕ್ಕಟ್ಟಾದ ಪ್ರದೇಶದಲ್ಲಿ ಮುನ್ನೂರು ಮಂದಿ ಸೈನಿಕರೊಂದಿಗೆ, ಇರಾಣದ
ಬಾದಶಹನಾದ ಝರ್ಕಿಸನ ೩ ಲಕ್ಷ ಸೈನ್ಯದ ಕೂಡ ಹೋರಾಡಿ ರಣ-
ದಲ್ಲಿ ಮಡಿದನು. ಆದರೇನಾಯಿತು? ಅವನ ಕೀರ್ತಿಯು ಅಜರಾಮರ-
ವಾಗಿರುವುದು.

ನೆಪೋಲಿಯನ್ ಸಿಕಂದರರು ಚಕ್ರವರ್ತಿಗಳೆಂದು ಹೊಗಳಿಸಿ-
ಕೊಂಡರೂ ಮೊದಲಿನವನ ಸಂಗ್ರಾಮಗಳ ನೆನಪು ಅವನ ತೋಫುಗಳ
ಮದ್ದುಗುಂಡಿನ ಹೊಗೆಯಂತೆ ಹಾರಿ ಅಡಗಿಹೋಯಿತು; ಎರಡನೆಯವನು

ಗೆದ್ದುಕೊಂಡ ವಿಸ್ತಾರವಾದ ರಾಜ್ಯದಲ್ಲಿ ಅವನ ಮರಣದ ತರುವಾಯ ಭಾಗಗಳಾಗಿ ಅನೇಕ ಸಣ್ಣಸಣ್ಣ ಸಂಸ್ಥಾನಗಳಾದುವು.

ಸ್ವಾರ್ಥರಹಿತರಾಗಿ ಸನ್ಮಾರ್ಗಪ್ರವರ್ತನೆಯಿಂದ ಮಾನವಸುಖವನ್ನು ಹೆಚ್ಚಿಸಲಿಕ್ಕೆ ಪ್ರಯತ್ನಿಸಿದ ಸತ್ಪುರುಷರ ಯಶೋದುಂದುಭಿಯು ಯಾವಾಗಲೂ ಮೊಳಗುತ್ತಿರುತ್ತದೆ. ಪೃಥ್ವಿಯಲ್ಲಿ ಆ ಆ ಕಾಲಕ್ಕೆ ಅಸಂಖ್ಯ ಅರಸರು ಪ್ರಸಿದ್ಧರಾಗಿ ಹೋಗಿದ್ದರೂ ಅವರಲ್ಲಿ ಕೆಲವರ ಹೆಸರುಗಳು ಮಾತ್ರ ಉಳಿದಿರುತ್ತವೆ. ಮಿಕ್ಕವರ ನೆನಪು ಸಹ ಯಾರಿಗೂ ಇಲ್ಲ. ಆದರೆ ಧರ್ಮಸ್ಥಾಪಕರೂ ಧರ್ಮಸುಧಾರಕರೂ ಆದ ಕಾನಫೂಸಿಯಸ್*, ಗೌತಮಬುದ್ಧ, ಕ್ರೈಸ್ತ, ಮುಹಮ್ಮದ, ಶಂಕರಾಚಾರ್ಯ, ಮಧ್ವಾಚಾರ್ಯ ಮೊದಲಾದ ಮಹಾನುಭಾವರ ಕೀರ್ತಿಯು ಅಜರಾಮರವಾಗಿರುವುದು.

ರಾಜಕಾರ್ಯಧುರಂಧರರೂ ವೀರರೂ ಜೀವದಿಂದಿದ್ದಾಗ ಪ್ರಸಿದ್ಧರಾಗಿರುತ್ತಾರೆ. ಅವರು ಏನು ಮಾಡುತ್ತಾರೆ, ಎಲ್ಲಿ ಹೋಗುತ್ತಾರೆ, ಏನು ಮಾತಾಡುತ್ತಾರೆಂಬುದರ ವಿಷಯವಾಗಿ ಎಲ್ಲರಿಗೂ ಕುತೂಹಲವಿರುತ್ತದೆ. ಆದರೆ ಅವರ ಪಶ್ಚಾತ್ ಅವರನ್ನು ಯಾರೂ ಸ್ಮರಿಸುವುದಿಲ್ಲ. ಸಾಧು, ಕವಿ, ಜ್ಞಾನಿಗಳ ಕೀರ್ತಿಯು ಅಜರಾಮರವಾಗಿರುವುದು. ವಾಲ್ಮೀಕಿ, ವ್ಯಾಸ, ಪ್ಲೇಟೊ, ಶೇಕ್ಸಪಿಯರ್ ಮೊದಲಾದ ಮಹಾತ್ಮರ ಚರಿತ್ರಗಳು ಉಪಲಬ್ಧವಿರದಿದ್ದರೂ ಅವರನ್ನು ಈಗಲೂ ಜನರು ಪೂಜ್ಯಭಾವನೆಯಿಂದ ಆದರಪೂರ್ವಕವಾಗಿ ಸ್ಮರಿಸುವರು.

ಮನದೊಳಗು ನುಡಿಯೊಳಗು ಪೊಡಲೊಳಗು ಸಕಲಜನ ।
ವಿನುತ ವಿಮಲತರದಮೃತಪರಿಪೂರ್ಣರುಮಾಗಿ ।
ಯನವರತ ಭುವನಂಗಳಿಗುಪಕಾರಪರಂಪರೆಗಳಿಂದ ತುಷ್ಟಿಗಳನೂ ॥

ಮನವಾರೆ ತವೆಗೈವುತನ್ಯಗುಣಪರಮಾಣು ।
ವನತುಲಗಿರಿವರದಂತೆಣಿಸಿ ನಿರುತವು ನೈಜ ।
ಮನದೊಳಗೆ ತೋಷದಿಂದಿರುವ ಸುಜನರೆ ನಿಜದಿ ಭೂಮಿಯನಲಂಕರಿಸರ್ೆ ॥

---

* ಚೀನದ ಪ್ರಸಿದ್ಧ ತತ್ವಜ್ಞಾನಿಯು.

ಆದರೆ ರಾಜಕಾರ್ಯಧುರಂಧರರ ನೆನಪು ಉಳಿಯಬೇಕೆಂದು ಸ್ಮಾರಕಸ್ತಂಭಗಳನ್ನಾಗಲಿ, ಶಿಲಾಮೂರ್ತಿಗಳನ್ನಾಗಲಿ, ಸ್ಥಾಪಿಸಬೇಕಾಗುತ್ತದೆ. ಲೋಕೋಪಕಾರಿಗಳಾದ ಸತ್ಪುರುಷರಿಗೆ ಸ್ಮಾರಕಗಳನ್ನು ಕಟ್ಟಿಸುವ ಆವಶ್ಯಕತೆಯಿಲ್ಲ. ಯಾಕೆಂದರೆ ಅವರು ಮಾಡಿದ ಉಪಕಾರ ಕೃತ್ಯಗಳೇ ಸ್ಮಾರಕದ ಶಾಶ್ವತ ಸ್ತಂಭಗಳು; ಅವರು ಬರೆದ ಗ್ರಂಥಗಳೇ ಶಿಲಾಮೂರ್ತಿಗಳು.

ಜ್ಞಾನಿಗಳು ಜನರ ಮನಸ್ಸನ್ನು ಗೆದ್ದುಕೊಂಡು ಜ್ಞಾನವೆಂಬ ರಾಜ್ಯವನ್ನು ಎಲ್ಲ ಕಡೆಗೂ ಹಬ್ಬಿಸುವರು. ಶೂರರು ಕೆಲವು ಪ್ರಾಂತಗಳನ್ನು ಮಾತ್ರ ಕೈವಶಮಾಡಿಕೊಳ್ಳಬಹುದಲ್ಲದೆ, ಜನರ ಮನಸ್ಸನ್ನು ಗೆಲ್ಲಲಾರರು. ಆದಕಾರಣ ಜ್ಞಾನಿಗಳೇ ಜಗಜ್ಜೇತೃಗಳು.

ಇನ್ನು ಅರಸರಲ್ಲಿ ಕೆಲವರು ವರಕವಿಗಳ ಸಹವಾಸದಿಂದಾಗಲಿ ಸಾಧುಗಳ ಸೇವೆಯಿಂದಾಗಲಿ ಈಗಲೂ ಪ್ರಸಿದ್ಧರಿರುವರು. ಕಾಲಿದಾಸನಿಂದ ಭೋಜರಾಜನೂ, ಬೇಕನ್ನನಿಂದ ಜೇಮ್ಸರಾಜನೂ, 'ಸೆನೆಕಾ' ತತ್ವಜ್ಞಾನಿಯಿಂದ ನೀರೋ ಚಕ್ರವರ್ತಿಯೂ ಹೆಸರಾಗಿರುವರು. ಶೂದ್ರಕರಾಜನು ಕವಿಯೆಂದು ಪ್ರಸಿದ್ಧನಿರುವನೇ ಹೊರತು ರಾಜನೆಂದಲ್ಲ.

**भुजतरुवनच्छायां येषां निषेव्य महौजसाम् ।**
**जलधिरशनामेदिन्यासीदसावकुतोभया ॥**
**स्मृतिमपि न ते यांति क्ष्मापा विना यदनुग्रहम ।**
**प्रकृतिमहतेकुर्मस्तस्मै नमः कविकर्मणे ॥**

(ಭೂಮಂಡಲವೆಲ್ಲ ಯಾವನ ತೋಳುಗಳೆಂಬ ವೃಕ್ಷಗಳ ನೆರಳಿನಲ್ಲಿ ಆಶ್ರಯವನ್ನು ಹೊಂದಿತೋ ಅಂಥ ಶೂರ ಅರಸನ ನೆನಪು ಮಹಾನುಭಾವರಾದ ಕವಿಗಳ ಅನುಗ್ರಹವಿಲ್ಲದೆ ಉಳಿಯದು. ಆದುದರಿಂದ ಅಂಥ ಕವಿಶ್ರೇಷ್ಠರ ಕೃತಿಗಳಿಗೆ ವಂದನೆಯು!)

ಕೀರ್ತಿಯೂ ಬುದ್ಧಿಯೂ, ಸಂಪತ್ತು, ಜಾತಿ, ಕುಲ, ವಯೋಮಾನಗಳನ್ನವಲಂಬಿಸುವಂತೆ ಕಂಡುಬರುವುದಿಲ್ಲ. ಉದಾಹರಣಾರ್ಥವಾಗಿ ಶಾಸ್ತ್ರಶೋಧಕರನ್ನು ತೆಗೆದುಕೊಳ್ಳುವ. ಉಗಿಯ ಶಕ್ತಿಯನ್ನು ಪರೀಕ್ಷಿಸಿ

ಅದನ್ನು ಯಾಂತ್ರಿಕ ಕಾರ್ಯಕ್ಕೆ ಹಚ್ಚುವ ಯುಕ್ತಿಯನ್ನು ಶೋಧಿಸಿದ ವಾಟನು ಒಬ್ಬ ಬಡಗಿಯ ಮಗನು; ವಿದ್ಯುತ್ತಿನ ಉಪಯುಕ್ತತೆಯನ್ನು ಹುಡುಕಿದ ಫ್ರಾಂಕ್ಲಿನ್ನನು ಕೀಳುಜಾತಿಯವನು; ಜ್ಯೋತಿರ್ವಿದನಾದ ಲಾಪ್ಲೇಸನು ಒಕ್ಕಲಿಗನು. ಗ್ಯಾಲಿಲಿಯೋ, ಕೆಪ್ಲರ್, ಹರ್ಶಲ್ ಮೊದ-ಲಾದ ಶೋಧಕರು ಬಡವರ ಮಕ್ಕಳು. ನಮ್ಮ ದೇಶದಲ್ಲಿ ಪ್ರಸಿದ್ಧರಾಗಿ-ಹೋದ ಸಾಧುಸಂತರಲ್ಲಿ ತುಕಾರಾಮನು ಬಣಜಿಗನು; ಕನಕದಾಸನು ಬೇಡರವನು, ನಾಮದೇವನು ಸಿಂಪಿಗನು, ಶೇಕಮುಹಮ್ಮದನು ಕಟಕನ ಮಗನು. ಅಕ್ಷರಗಳನ್ನೂ ಬೆಂಕೀಮಾಡುವ ಯುಕ್ತಿಯನ್ನೂ ಶೋಧಿಸಿ-ದವರು ಯಾರೆಂಬುದು ಇನ್ನೂ ಗೊತ್ತಾಗಿಲ್ಲ.

ಇಂಗ್ಲಂಡದೇಶಕ್ಕೂ ಅಲ್ಲಿಯ ಇತಿಹಾಸಕ್ಕೂ ಶಾಸ್ತ್ರಜ್ಞರಿಂದ ಮಹತ್ವವುಂಟಾಗಿದೆ. ಅವರ ಉದಾತ್ತವಿಚಾರಗಳಿಂದ, ಹಾಗೂ ಅಗಾಧ ಶೋಧಗಳಿಂದ ಜನರಿಗೆ ಹೆಚ್ಚು ಸುಖವುಂಟಾಗಿದೆ. ಬೇಕನ್, ಹಾಬ್ಸ, ಲಾಕ್, ಬರ್ಕಲೆ, ಹ್ಯೂಮ, ಹಾಮಿಲ್ಟನ್ ಮೊದಲಾದ ತತ್ವಜ್ಞಾನಿಗಳು ಮಾನವ ವಿಚಾರಪ್ರಗತಿಯನ್ನು ಮಾಡಿದವರಲ್ಲಿ ಅಗ್ರಗಣ್ಯರು. ಐಝಾಕ್ ನ್ಯೂಟನ್ನನು ಗುರುತ್ವಾಕರ್ಷಣದ ನಿಯಮಗಳನ್ನು ಗೊತ್ತುಹಚ್ಚಿದನು. ಅಡಾಮ್ ಸ್ಮಿಥನು ಅರ್ಥಶಾಸ್ತ್ರವನ್ನು ನವೀನವಾಗಿ ರಚಿಸಿದನು. ಯಂಗ-ನೆಂಬವನಿಂದ ಪ್ರಕಾಶದ ವೇಗವು ನಿಶ್ಚಿತವಾಯಿತು. ಹರ್ಶಲನು ಯುರೇನಸ್ ಗ್ರಹವನ್ನು ಶೋಧಿಸಿದನು. ಜೆನ್ನರನ ಯುಕ್ತಿಯಿಂದ ವೈಲೀರೋಗದ ಹಾವಳಿಯು ನಿಂತುಹೋಯಿತು. ಕ್ಲೋರೋ-ಫಾರ್ಮದ ಆಘ್ರಾಣದಿಂದ ಎಚ್ಚರತಪ್ಪಿಸಿ ಬೇಕಾದ ಹಾಗೆ ಶಸ್ತ್ರಕ್ರಿಯೆ-ಯನ್ನು ಮಾಡಬಹುದೆಂದು ಸಿಂಪಸನ್ನನು ಕಂಡುಕೊಂಡನು. ಡಾರ್ವಿ-ನ್ನನು ಉತ್ಕ್ರಾಂತಿತತ್ವವನ್ನು ನೆಲೆಗೊಳಿಸಿದನು.

ಭರತಖಂಡದಲ್ಲಿ ಇವರಷ್ಟೇ ಪ್ರಸಿದ್ಧರಾದ ಶಾಸ್ತ್ರಜ್ಞರು ಆಗಿಹೋಗಿ-ರುವರಲ್ಲದೆ ಈಗ ಸಹ ಅನೇಕ ಶೋಧಕರು ನವೀನಶೋಧಗಳನ್ನು ಮಾಡತೊಡಗಿದ್ದಾರೆ. ಪ್ರಾಚೀನ ಕಾಲದಲ್ಲಿ ವರಾಹಮಿಹಿರ, ಭಾಸ್ಕ-ರಾಚಾರ್ಯ, ಆರ್ಯಭಟ್ಟ ಮೊದಲಾದ ಜ್ಯೋತಿರ್ವಿದರೂ, ಚರಕ,

ಸುಶ್ರುತ ಮೊದಲಾದ ಧನ್ವಂತರಿಗಳೂ, ಪಾಣಿನಿ, ಪತಂಜಲಿ, ವ್ಯಾಸ ಮೊದಲಾದ ಸೂತ್ರಕಾರರೂ ಆಗಿಹೋಗಿರುವರು. ಈಗ ರೇ, ಬೋಸ, ಗಜ್ಜರ, ರಾಮನ್ ಮೊದಲಾದವರು ತಮ್ಮ ಶೋಧಗಳಿಂದ ಪಾಶ್ಚಾತ್ಯರನ್ನು ಬೆರಗುಗೊಳಿಸಹತ್ತಿರುವರು.

---

# ದ್ವಿತೀಯಾಧ್ಯಾಯ.

## ಸಂಪತ್ತು.

ಹಿಂದಿನ ಅಧ್ಯಾಯದಲ್ಲಿ ಮಹತ್ವಾಕಾಂಕ್ಷೆಯ ಬಗ್ಗೆ ವಿವೇಚಿಸುವಾಗ ರಾಜ್ಯ, ಕೀರ್ತಿ, ಸಂಪತ್ತು ಮೊದಲಾದುವುಗಳನ್ನು ಸಂಪಾದಿಸುವುದಕ್ಕೋಸ್ಕರ ಮಹತ್ವಾಕಾಂಕ್ಷಿಗಳು ಎಡೆಬಿಡದೆ ಪ್ರಯತ್ನಮಾಡುತ್ತಾರೆಂಬುದನ್ನು ಹೇಳಿದ್ದೇವೆ. ಈ ಅಧ್ಯಾಯದಲ್ಲಿ ಸಂಪತ್ತಿನ ವಿಷಯವಾಗಿ ವಿಚಾರಮಾಡಿದರೆ ತೀರಿತು.

ಜಗತ್ತಿನಲ್ಲಿ ಕಾವ್ಯಗಳನ್ನು ಓದದವರಾಗಲಿ ಶಾಸ್ತ್ರಗಳನ್ನು ಅಭ್ಯಾಸಿಸದವರಾಗಲಿ ಬಹುಜನರಿರುವರು. ಆದರೆ ಉದರನಿರ್ವಾಹದ ಸಲುವಾಗಿ ದ್ರವ್ಯಾರ್ಜನೆಯನ್ನು ಮಾಡದೆ ಇರುವವರು ವಿರಳ. ಹಣ ದೊರಕಿಸುವುದರ ಸಲುವಾಗಿ ನಾವೆಲ್ಲರೂ ದುಡಿಯುತ್ತೇವಷ್ಟೇ?

ಮನುಷ್ಯರ ಆದಾಯವು ಬೆಳೆಯುತ್ತ ಹೋದಹಾಗೆ ಆನಂದವಾಗುವಂತೆ ಒಮ್ಮೆಲೆ ಶ್ರೀಮಂತನಾದರೆ ಆಗುವುದಿಲ್ಲ. ಹಾಗಾದಲ್ಲಿ ಅವನು ಕೆಲವು ಕಾಲದ ತರುವಾಯ ಅಸಂತುಷ್ಟನಾಗುವನು.

ದ್ರವ್ಯದ ಕಾರ್ಯಗಳು ಆವುವೆಂಬುದು ಕೆಳಗಿನ ಶ್ಲೋಕದಲ್ಲಿ ಸೂಚಿಸಲ್ಪಟ್ಟದೆ.

**दानं भोगो नाशस्तिस्रो गतयो भवंति वित्तस्य ।**
**यन्न ददाति न भुंक्ते तस्य तृतीया गतिर्भवति ॥**

(ದ್ರವ್ಯಕ್ಕೆ ದಾನ ಭೋಗ ನಾಶಗಳೆಂಬ ಮೂರು ಗತಿಗಳಿರುವುವು. ದಾನದಲ್ಲಾಗಲಿ ಭೋಗದಲ್ಲಾಗಲಿ ವೆಚ್ಚಮಾಡದ ದ್ರವ್ಯವು ತೃತೀಯ ಗತಿಯನ್ನು ಹೊಂದುವುದು; ಅಂದರೆ ನಾಶಹೊಂದುವುದು.)

ದಾನದ ಮಹತ್ವವು ವಿಶೇಷವೆಂದು ಎಲ್ಲ ಧರ್ಮಗಳೂ ಸಾರುವುದರಿಂದ ಸಂಪಾದಿಸಿದ ಸಂಪತ್ತನ್ನು ದಾನಧರ್ಮಗಳಿಗೆ ಉಪಯೋಗಿಸುವುದು ಶ್ರೇಷ್ಠವಾದುದು. ದಾನಶೂರರಾದ ಶ್ರೀಮಂತರು ಕಟ್ಟಿಸಿದ ದೇವಾಲಯ-ಜಲಾಶಯಗಳೂ ಅವರು ಸ್ಥಾಪಿಸಿದ ಅನ್ನಛತ್ರ-ವಿದ್ಯಾಷಧಾಲಯಗಳೂ ಬಡಜನರಿಗೆ ಅತ್ಯುಪಯುಕ್ತವಾದುದರಿಂದ ಅವರ ಔದಾರ್ಯವು ಅಭಿನಂದನೀಯವಾಗಿರುವುದು. ಅಂಥ ಮಹಾತ್ಮರನ್ನು ಎಷ್ಟು ಹಾಡಿಹರಸಿದರೂ ಕಡಿಮೆ.

ದ್ರವ್ಯವನ್ನು ಯೋಗ್ಯ ಉಪಭೋಗಗಳಲ್ಲಿ ಕೆಲಮಟ್ಟಿಗೆ ವೆಚ್ಚಮಾಡಬಹುದು. ಆದರೆ ಇದ್ದ ಸಂಪತ್ತನ್ನೆಲ್ಲ ಅದರಲ್ಲಿಯೇ ಹಾಳುಮಾಡುವವರು ದುಂದುಗಾರರು.

ಇನ್ನು ಇವೆರಡೂ ಕಾರ್ಯಗಳಿಗೆ ಯೋಜಿಸದೆ ಹಣವನ್ನು ಕೂಡಿಟ್ಟರೆ ಅದು ಒಂದಿಲ್ಲೊಂದು ರೀತಿಯಿಂದ ಹಾಳಾಗುವುದು.

ಸಂಪತ್ತಿನಿಂದ ಸುಖವಾಗುತ್ತದೆಂದು ಸಾಧಾರಣವಾಗಿ ಜನರ ತಿಳಿವಳಿಕೆಯುಂಟು. ಈ ಮಾತು ಕೆಲವಂಶದಿಂದ ಮಾತ್ರ ನಿಜವು. ಯಾಕೆಂದರೆ ದರಿದ್ರರೆಲ್ಲರೂ ದುಃಖಿಗಳಿರುವುದಿಲ್ಲ; ಹಾಗೆಯೇ ಶ್ರೀಮಂತರೆಲ್ಲರೂ ಸುಖಿಗಳಿರುವುದಿಲ್ಲ. ದರಿದ್ರರು ದುಡಿದು ಬಂದ ದ್ರವ್ಯದಿಂದ, ಸುಖವಾಗಿ ಕಾಲಹರಣ ಮಾಡುವರು. ಹಣವನ್ನು ಹೇಗೆ ಕಾದುಕೊಳ್ಳಬೇಕೆಂಬ ಚಿಂತೆಯಿಂದ ಶ್ರೀಮಂತರು ಹಣ್ಣಾಗುತ್ತಾರೆ.

ಧನಾಶೆಯು ಕೆಲಮಟ್ಟಿಗೆ ಇಷ್ಟವಾದರೂ ಅತ್ಯಾಶೆಯಿಂದ ಯಾರಿಗೂ ಸುಖವಾಗದು. ಮದ್ಯಪಾನದ ವ್ಯಸನವಿದ್ದವನಿಗೆ ಮದ್ಯವನ್ನು ಎಷ್ಟು ಕುಡಿದರೂ ಹೇಗೆ ಸಮಾಧಾನವಾಗುವುದಿಲ್ಲವೋ ಹಾಗೆಯೇ ಹಣವನ್ನು ಎಷ್ಟು ಕೂಡಿಸಿದರೂ ಜೀನರಿಗೆ ಸಮಾಧಾನವಾಗದು.

ಹಣಕ್ಕೆ ಗಂಡಾಂತರಗಳು ಬಹಳವಾದುದರಿಂದ ಅದನ್ನು ರಕ್ಷಿಸಿಕೊಳ್ಳುವುದು ಕಠಿಣವಾದುದು. ಕಳ್ಳರು ಕದ್ದೊಯ್ಯಾರೆಂಬ ಭೀತಿಯಿಂದ ಶ್ರೀಮಂತರಿಗೆ ಸ್ವಾಸ್ಥ್ಯವಿರುವುದಿಲ್ಲ. ಇದ್ದ ದ್ರವ್ಯವು ಹೋಯಿತೆಂದು ಆತ್ಮಹತ್ಯಮಾಡಿಕೊಂಡ ಶ್ರೀಮಂತರ ಉದಾಹರಣೆಗಳು ಅನೇಕ-

ವಾಗಿವೆ. ಎಪಿಸಿಯಸನೆಂಬ ಶ್ರೀಮಂತ ಗೃಹಸ್ಥನು ಹತ್ತುಲಕ್ಷ ಪೌಂಡು-ಗಳನ್ನು ಸವಿಯೂಟದಲ್ಲಿಯೂ ಮೇಜವಾನಿಗಳಲ್ಲಿಯೂ ಹಾಳುಮಾಡಿ ಇನ್ನೂ ೨-೩ ಲಕ್ಷ ಮೊಹರುಗಳು ಅವನಲ್ಲಿದ್ದರೂ ದುಡ್ಡು ಹೋಯಿ-ತೆಂದು ಆತ್ಮಹತ್ಯಮಾಡಿಕೊಂಡನಂತೆ. ಕ್ಲೈವನು ಕೊಡಲೊಪ್ಪಿದ ೩೦-ಲಕ್ಷ ರೂಪಾಯಿಗಳು ತನಗೆ ಸಿಗುವುದಿಲ್ಲೆಂಬುದು ತಿಳಿದಕೂಡಲೆ, ಓಮಿ-ಚಂದನು ಆತ್ಮಹತ್ಯಮಾಡಿಕೊಂಡುದು ಇತಿಹಾಸಪ್ರಸಿದ್ಧವದೆ. ಸಾರಾಂಶ, ಸಂಪತ್ತನ್ನುಪಭೋಗಿಸುವುದು ಅತಿಸ್ವಲ್ಪ ಜನರ ಭಾಗ್ಯದಲ್ಲಿದ್ದಂತೆ ಕಂಡು-ಬರುತ್ತದೆ.

**जनयंत्यर्जने दुःखं तापयंति विपत्तिषु ।**
**मोहयंति समृद्धौ च कथमर्थाः सुखावहाः ॥**

(ಹಣವನ್ನು ಗಳಿಸುವಾಗ ಕಷ್ಟವಾಗುತ್ತದೆ; ಅದು ನಾಶವಾದಲ್ಲಿ ದುಃಖವ-ನ್ನುಂಟುಮಾಡುತ್ತದೆ; ಸಮೃದ್ಧಿಯಲ್ಲಿ ಮೋಹವನ್ನುಂಟುಮಾಡುತ್ತದೆ. ಆದಕಾರಣ ಸಂಪತ್ತಿನಿಂದ ಸುಖವಾಗುತ್ತದೆಂಬುದು ಹೇಗೆ?) ಎಂದು ಒಬ್ಬ ಸಂಸ್ಕೃತಕವಿಯು ಕೇಳುತ್ತಾನೆ.

ಸುಸಂಪಾದನೆಯಿಂದ ಬಂದ ಸಂಪತ್ತನ್ನು ಸದುಪಯೋಗಕ್ಕೆ ಹಚ್ಚು-ವುದರಲ್ಲಿಯೇ ಸುಖವುಂಟೆಂದು ಭಾವಿಸುವ ಜನರು ಕಡಿಮೆ. "ದ್ರವ್ಯವು ಮಾದಕಪದಾರ್ಥದಂತೆ ಅಮಲೇರಿಸುವುದು. ಆದುದರಿಂದ ಶ್ರೀಮಂತರು ಬಹುಶಃ ಗರ್ವಿಷ್ಠರೂ ದುರಭಿಮಾನಿಗಳೂ ಆಗಿರುವರು. ಆದುದರಿಂದ ಹಣದ ಉಪಭೋಗ ಸದುಪಯೋಗಗಳಿಗೆ ಸದ್ಗುಣಗಳು ಅವಶ್ಯವಾಗಿವೆ. ಅವು ಇಲ್ಲದವರ ದ್ರವ್ಯವು ಕೇಡಿಗೆ ಕಾರಣವಾಗುವುದು. ಗುಣಿಗಳು ಬಡವರಾದರೂ ಆಯುಷ್ಯವನ್ನು ಆನಂದದಲ್ಲಿ ಕಳೆಯುವರು, ಸುಖಕ್ಕೆ ಹಣವು ಆದಿಕಾರಣವಲ್ಲ." — **ಎಪಿಕ್ಟೆಟಸ್.**

ಸಂಪತ್ತನ್ನು ಕಾದುಕೊಳ್ಳುವುದು ಕಠಿಣವಾದುದೆಂದು ಮೇಲೆ ಹೇಳಿ-ದ್ದೇವೆ. ಯಾಕೆಂದರೆ ಲಕ್ಷ್ಮಿಯು ಶೂರನನ್ನೂ ಸದ್ಗುಣಿಯನ್ನೂ ಆಶ್ರ-ಯಿಸುವಳಲ್ಲದೆ ಹೇಡಿಯನ್ನೂ ದುರ್ಗುಣಿಯನ್ನೂ ನಂಬುವುದಿಲ್ಲ. ಆದುದ-ರಿಂದ ದ್ರವ್ಯರಕ್ಷಣೆಗೆ ಶೌರ್ಯವೂ ಶೀಲವೂ ಬೇಕು.

आपद्गतं हससि किं द्रविणांधमूढ ।
लक्ष्मीः स्थिरा न भवतीति किमत्रचित्रं ॥
एतान्न पश्यसि घटान् जलयंत्रचक्रे ।
रिक्ता भवंति भरिता भरिताश्च रिक्ताः

(ಎಲೋ ಮೂಢ ಧನಮದಾಂಧನೇ! ಆಪತ್ತಿನೊಳಗಿದ್ದವನನ್ನು ನೋಡಿ ಯಾಕೆ ನಗುತ್ತೀ? ಲಕ್ಷ್ಮಿಯು ಸ್ಥಿರವಲ್ಲೆಂಬುದು ನಿನಗೆ ಗೊತ್ತಿಲ್ಲವೇ? ಜಲಯಂತ್ರದಲ್ಲಿ ಬರಿದಾದ ಪಾತ್ರೆಗಳು ತುಂಬುತ್ತವೆಂಬುದೂ, ತುಂಬಿದ ಪಾತ್ರೆಗಳು ಬರಿಯವಾಗುತ್ತವೆಂಬುದೂ ನಿನಗೆ ಕಾಣುವುದಿಲ್ಲವೇ?)

ದ್ರವ್ಯದ ಅತ್ಯಾಶೆಯಿಂದ ಗತಿಗೆಟ್ಟವರೇ ಬಹಳ. ಪ್ರಾಚೀನಕಾಲದಲ್ಲಿ ಮಿಡಾಸನೆಂಬ ಗ್ರೀಸದೇಶದ ಅರಸನು ಅತಿಶ್ರೀಮಂತನೆಂದು ಪ್ರಸಿದ್ಧನಾಗುವ ಉದ್ದೇಶ್ಯದಿಂದ ದೇವರನ್ನು ಭಜಿಸಿ, ತನ್ನ ಹಸ್ತ ಸ್ಪರ್ಶದಿಂದ ವಸ್ತುಗಳು ಸುವರ್ಣಮಯವಾಗುವಂತೆ ವರವನ್ನು ಪಡೆದುಕೊಂಡನು. ಆಗ ಅತ್ಯಾನಂದಭರಿತನಾಗಿ ಪರ್ಯಂಕವನ್ನು ಮುಟ್ಟಿದ ಕೂಡಲೆ ಅದು ಸುವರ್ಣಮಯವಾಗಿ ಹೊಳೆಯಹತ್ತಿತು. ಮೇಲುಪ್ಪರಿಗೆಯಿಂದ ಸೋಪಾನದ ಗುಂಟ ಕೆಳಗಿಳಿಯಲು ಅದೂ ಚಿನ್ನದ್ದಾಯಿತು. ಆ ಮೇಲೆ ತೋಟದಲ್ಲಿ ಹೋಗಿ ಅರಳಿದ ಗುಲಾಬೀ ಹೂಗಳನ್ನು ಕೊಯ್ಯಲು ಅವುಗಳಿಗೆ ಬಂಗಾರದ ಪಕಳಿಗಳುಂಟಾದುವು; ಆದರೆ ಸುವಾಸನೆಯೆಲ್ಲ ಅಡಗಿಹೋಯಿತು. ಪುಷ್ಪಗಳ ಸ್ವಾಭಾವಿಕ ಸೌಂದರ್ಯವೂ ಸುವಾಸನೆಯೂ ಹೆಚ್ಚು ಮನೋಹರವೆಂಬುದು ಅವನ ಲಕ್ಷ್ಯಕ್ಕೆ ಬಂದಕೂಡಲೆ ಅವನಿಗೆ ಇದನ್ನು ನೋಡಿ ಸ್ವಲ್ಪ ಪಶ್ಚಾತ್ತಾಪವೆನಿಸಿತು. ಹಾಗೆಯೇ ತೋಟದಲ್ಲಿ ಕೆಲಹೊತ್ತು ತಿರುಗಿ ಹಸಿವೆಯಾದ ಕೂಡಲೆ ಉಪಾಹಾರದ ದೆಶೆಯಿಂದ ಭೋಜನಗೃಹಕ್ಕೆ ಹೋಗಿ ತನ್ನ ಪ್ರೀತಿಯ ಮಗಳನ್ನು ಕರೆದು ಸೇವಕರಿಗೆ ಭೋಜನಪಾತ್ರೆಗಳನ್ನು ತರಹೇಳಿದನು. ಅವರು ಅನೇಕ ತರದ ಪಕ್ವಾನ್ನಗಳನ್ನು ತಂದು ಮುಂದಿಡಲು ಅವುಗಳನ್ನು ಬಾಯಿಯಲ್ಲಿ ಹಾಕಬೇಕೆಂದು ಮುಟ್ಟಿದ ಕೂಡಲೆ ಅವೆಲ್ಲ ಬಂಗಾರದ ಘಟ್ಟಗಳಾದುವು. ಆ ಮೇಲೆ ನೀರನ್ನಾದರೂ ಕುಡಿದು ತೃಷಾಪರಿಹಾರಮಾಡಿಕೊಳ್ಳಬೇಕೆಂದು ಪಾತ್ರೆಯನ್ನು

ಎತ್ತಿದ ಕೂಡಲೆ ನೀರು ಬಂಗಾರದ ಮುದ್ದಿಯಾಯಿತು. ಹೀಗೆ ಹಸಿವೆನೀರಡಿಕೆಗಳಿಂದ ಕಳವಳಪಡಹತ್ತಿದನು. ಆದರೆ ನಿರುಪಾಯನಾಗಿ, ಮಗಳನ್ನು ಆಲಿಂಗಿಸಿ ಮುದ್ದಿಟ್ಟು ಸ್ವಲ್ಪಾದರೂ ಸಮಾಧಾನ ಹೊಂದಬೇಕೆಂದು ಅವಳನ್ನು ಅಪ್ಪಿಕೊಳ್ಳಲು ಆ ಕುಮಾರಿಯು ಸುವರ್ಣದ ಮೂರ್ತಿಯಾದಳು. ಹೀಗೆ ಅತಿದುಃಖಿಯಾಗಿ ದೇವರನ್ನು ಪ್ರಾರ್ಥಿಸಲು ಆ ಅನಿಷ್ಟವರದ ನಿವಾರಣೆಯಾಯಿತು. ಈ ಕಥೆಯ ಬೋಧವನ್ನು ವಾಚಕರೇ ಊಹಿಸಬಹುದು.

ಯಾವುದಾದರೊಂದು ವಸ್ತುವಿನ ಸದುಪಯೋಗದಿಂದ ಹಿತವಾಗುವಂತೆ ಅದರ ದುರುಪಯೋಗದಿಂದ ಅಹಿತವಾಗುವುದು. ಸಂಪತ್ತು, ಸಾಮರ್ಥ್ಯ, ಜ್ಞಾನ, ಕೌಶಲ್ಯ ಮೊದಲಾದುವುಗಳಿಂದ ಸುಖವಾಗಬೇಕಾದರೆ ಅವುಗಳನ್ನು ಸತ್ಕಾರ್ಯಕ್ಕೆ ವಿನಿಯೋಗಿಸುವುದು ಇಷ್ಟವು. ಮತ್ತು ಅವುಗಳಿಂದ ದೇಶಕ್ಕೆ ಹಿತವಾಗುವಂತೆ ವರ್ತಿಸುವುದು ಪ್ರತಿಯೊಬ್ಬ ದೇಶಾಭಿಮಾನಿಯ ಕರ್ತವ್ಯವು.

ಸದ್ಗುಣಗಳ ಪೂರ್ಣ ವಿಕಾಸವಾಗಲಿಕ್ಕೆ ಶಿಕ್ಷಣವೂ, ಶಿಕ್ಷಣಪ್ರಾಪ್ತಿಗೆ ವಿಶ್ರಾಂತಿಯೂ ಬೇಕು. ಹೊಟ್ಟೆಬಟ್ಟೆಗೆ ಕೊರತೆ ಇಲ್ಲದವರ ಮನಃಸ್ವಾಸ್ಥ್ಯವು ಅಚಲವಾಗಿರುವದರಿಂದ ಅಂಥ ಜನರು ಶಿಕ್ಷಣವನ್ನು ಅನಾಯಾಸವಾಗಿ ಹೊಂದಬಹುದು. ಉಳಿದವರು ಉದರಭರಣಕ್ಕಾಗಿ ಬೆಳಗಿನಿಂದ ಸಂಜೆಯು ವರೆಗೂ ದುಡಿಯಬೇಕಾಗುವುದರಿಂದ ಅವರಿಗೆ ವಿಶ್ರಾಂತಿಯು ಸಿಗಲಾರದು; ಮತ್ತು ಶಿಕ್ಷಣವು ಲಭಿಸಲಾರದು.

ದ್ರವ್ಯಸಂಪಾದನೆಯು ಇಷ್ಟವಾದರೂ ಅದೇ ಜೀವಿತದ ಧ್ಯೇಯವಲ್ಲ. ಧನವಿದ್ದವನು ವ್ಯಾಪಾರೋದ್ಯೋಗಗಳನ್ನು ಮಾಡಿ, ಇಷ್ಟಮಿತ್ರರಿಗೆ ಸಹಾಯಮಾಡಬಹುದು; ದರಿದ್ರರ ದುಃಖಗಳನ್ನು ಹಿಂಗಿಸಬಹುದು.

ಧನದ ಉಪಯುಕ್ತತೆಯು ಬಹಳವಾದರೂ ಅದರಿಂದ ದ್ವೇಷವು ಹೆಚ್ಚಾಗುತ್ತದೆಂಬ ಮಾತನ್ನು ಅಲ್ಲಗಳೆಯಲಾಗದು. ಉಪಯುಕ್ತವಸ್ತುಗಳಲ್ಲಿ ಒಂದಾದರೂ ವ್ಯಂಗವಿರುವಂತೆ ನಿರುಪಯುಕ್ತವೆಂದು ಕಂಡುಬರುವ ವಸ್ತುಗಳಲ್ಲಿ ಒಂದಾದರೂ ಗುಣವು ಇದ್ದೇ ಇರುತ್ತದೆ.

ದ್ರವ್ಯಾರ್ಜನದ ಮಾರ್ಗಗಳು ಅನೇಕವಾಗಿವೆ; ಎಷ್ಟೋ ಜನರು ಕೃಷಿಯಿಂದ, ಹಲವರು ವಾಣಿಜ್ಯದಿಂದ, ಕೆಲವರು ಕೃಪಣತನದಿಂದ, ಉಳಿದವರು ಸೇವಾವೃತ್ತಿಯಿಂದ ಹಣವನ್ನು ಕೂಡಿಹಾಕುತ್ತಾರೆ. ಕೃಷಿಯ ಅಭಿವೃದ್ಧಿಗೆ, ಋತುಮಾನದಂತೆ ಮಳೆಯು ಬೇಕು; ಇಲ್ಲವೆ ಇಡಿ ವರ್ಷ ಹರಿಯುವ ಕಾಲುವೆಗಳಿರಬೇಕು. ವ್ಯಾಪಾರೋತ್ಕರ್ಷಕ್ಕೆ ಪ್ರಾಮಾಣಿಕ-ತನ ಕಾರ್ಯತತ್ಪರತೆಗಳು ಅವಶ್ಯವು. ಉದ್ಯೋಗವೃದ್ಧಿಗೆ ಶೋಧಕ-ಬುದ್ಧಿ, ಹಸ್ತಕೌಶಲ್ಯಗಳು ಅಗತ್ಯ. ಕೃಷಿಯಿಂದಾಗಲಿ, ವ್ಯಾಪಾರೋ-ದ್ಯೋಗಗಳಿಂದಾಗಲಿ ಮಾಡಿದ ಸಂಪಾದನೆಗೆ ಸುಸಂಪಾದನೆಯೆನ್ನಬಹುದು. ಕೃಪಣತನದಿಂದಾಗಲಿ ಸೇವಾವೃತ್ತಿಯಿಂದಾಗಲಿ ಮಾಡಿದ ಸಂಪಾದನೆಯು ನೀಚಸಂಪಾದನೆಯೇ ಸರಿ. ಸುಸಂಪಾದನೆಯಿಂದ ಬಂದ ಹಣದ ವಿನಿ-ಯೋಗವು ಸತ್ಕಾರ್ಯಗಳ ಕಡೆಗೆ ಆಗುವುದು.

ದ್ರವ್ಯವನ್ನು ಲೋಕಹಿತಕ್ಕೆ ವಿನಿಯೋಗಿಸುವವರೇ ವಿಚಾರವಂತರು; ಅವರೇ ಧನ್ಯರು.

---

# ತೃತೀಯಾಧ್ಯಾಯ.

## ಆರೋಗ್ಯ.

**धर्मार्थकाममोक्षाणां मूलमुक्तं कलेवरम् ।**
**तच्च सर्वार्थसंसिद्ध्यै भवेद्यदि निरामयम् ॥**

(ಶರೀರವು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಪುರುಷಾರ್ಥಗಳಿಗೆ ಮೂಲವಾಗಿರುವುದು. ಆದುದರಿಂದ ಶರೀರವು ನಿರೋಗಿಯಾಗಿದ್ದರೆ, ಎಲ್ಲ ಕಾರ್ಯಗಳೂ ಕೈಗೂಡುವುವು.)

ಧನಸಂಪತ್ತಿನಿಂದ ಯಾವಾಗಲೂ ಹಿತವಾಗುತ್ತದೆಂಬ ಮಾತು ಎಲ್ಲರಿಗೂ ಸಮ್ಮತವಾಗದಿದ್ದರೂ, ಆರೋಗ್ಯಭಾಗ್ಯದ ವಿಷಯಕ್ಕೆ ಜನರಲ್ಲಿ ಮತ್ತೈಕ್ಯವಿರುವುದು. ಮನುಷ್ಯನ ಸುಖಕ್ಕೆ ಮೊದಲು ಆರೋಗ್ಯವು ಬೇಕು. ಬಳಿಕ ಸುಸಂಪಾದನೆಯು ಮತ್ತು ಮಿತ್ರರ ಸಮಾಗಮವು.

ಆರೋಗ್ಯರಕ್ಷಣೆಗೆ ನಿಯಮಿತ ವರ್ತನವೂ, ವ್ಯಾಯಾಮವೂ, ಸ್ವಚ್ಛತೆಯೂ, ಮಿತಭಾವವೂ ಅವಶ್ಯವಾಗಿರುವುವು. ಅಳತೆತಪ್ಪಿ ಆಹಾರವನ್ನು ತೆಗೆದುಕೊಳ್ಳುವುದರಿಂದ ಜೀರ್ಣಕೋಶವು ಕೆಟ್ಟು ಅಗ್ನಿಮಾಂದ್ಯವಾಗುವುದು. ವ್ಯಾಯಾಮವನ್ನು ಮಾಡದೆಹೋದರೆ ಆರೋಗ್ಯವು ಕೆಡುವುದು. ಮದ್ಯಪ್ರಾಶನದಿಂದಾಗುವ ಅನಿಷ್ಟಗಳನ್ನು ಇಲ್ಲಿ ಹೇಳುವುದು ಅವಶ್ಯವಿಲ್ಲ. ದೀರ್ಘಾಯುಗಳಾಗಬೇಕಾದರೆ ಅಲ್ಪಾಹಾರವನ್ನು ಮಾಡುತ್ತಿರುವುದು ಅವಶ್ಯವು. ಆಹಾರದಲ್ಲಿ ಮಿತಭಾವವನ್ನು ಪಾಲಿಸುವುದರಿಂದ ಅಗ್ನಿಮಾಂದ್ಯ ಮೊದಲಾದ ರೋಗಗಳು ತಗಲಿದರೂ, ಅವು ಕೆಲಕಾಲದಮೇಲೆ ವಾಸಿಯಾಗುವುವು.

೧೯ನೆಯ ಶತಕದ ಕೊನೆಯಲ್ಲಿ ಆಗಿಹೋದ ಇಂಗ್ಲಂಡದ ಪ್ರಸಿದ್ಧ ಮಂತ್ರಿಯಾದ ಗ್ಲಾಡಸ್ಟನ್ನನು ಮುಪ್ಪಿನವನಾದರೂ, ನೀರೋಗಿಯೂ, ಸುದೃಢನೂ ಆಗಿದ್ದನು. ಅಂಥ ಆರೋಗ್ಯವುಂಟಾಗಲಿಕ್ಕೆ ಕಾರಣ-

ವೇನೆಂದು ಒಮ್ಮೆ ಅವನ ಮಿತ್ರರು ಅವನನ್ನು ಕೇಳಲು, "ನಾನು ಪ್ರತಿ-ಯೊಂದು ತುತ್ತನ್ನು ೨೫ ಸಾರೆ ಅರೆಯದೆ ನುಂಗುವುದಿಲ್ಲೆಂದು" ಉತ್ತರ-ಕೊಟ್ಟನು. ಆವನು ಆ ಕ್ರಮವನ್ನು ಸಣ್ಣವನಿದ್ದಾಗಿನಿಂದ ಪಾಲಿಸಿದ್ದ-ರಿಂದ ಮುಪ್ಪಿನವನಾದರೂ ತರುಣನಂತೆ ನೀರೋಗಿಯೂ ಸುಶಕ್ತನೂ ಆಗಿದ್ದನು.

ಶರೀರವೂ ಮನಸ್ಸೂ ಶುದ್ಧವಾಗಿದ್ದು ತಕ್ಕ ವ್ಯಾಯಾಮವನ್ನು ಮಾಡಿದರೆ ಹಸಿವೆಯಾಗುವುದು. ವ್ಯಾಯಾಮವಿಲ್ಲದೆ ಹಸಿವೆಯಾಗದು. ಶ್ರಮಮಾಡದೆ ಮನುಷ್ಯನಿಗೆ ಏನೂ ದೊರಕಲಾರದೆಂಬ ಸಿದ್ಧಾಂತವು, ಹಸಿವೆಯ ಸಂಬಂಧದಿಂದಾದರೂ ನಿಜವು. ಗುಡ್ಡದಮೇಲಾಗಲಿ, ಸಮುದ್ರ-ದಂಡೆಯ ಮೇಲಾಗಲಿ ತಿರುಗಾಡಿ ಬಂದು ಊಟಕ್ಕೆ ಕೂತರೆ ಎಂಥ ಆಹಾರವಾದರೂ ಸವಿಹತ್ತುವುದು.

ನಗುತ್ತ ಕೆಲೆಯುತ್ತ ಊಟಮಾಡುವುದರಿಂದ ಆನಂದವಾಗುವು-ದಲ್ಲದೆ, ಶರೀರಪುಷ್ಟಿಯೂ ಆಗುವುದು. ಆದುದರಿಂದಲೇ ಆಂಗ್ಲ ಜನರಲ್ಲಿ "ನಕ್ಕು ಪುಷ್ಟನಾಗು" ಎಂಬ ನಾಣ್ಣುಡಿಯು ಸಾಮಾನ್ಯವಾಗಿದೆ. ಸವಿನುಡಿಗಳೂ ವಿನೋದದ ಮಾತುಗಳೂ ಊಟಕ್ಕೆ ಉಪ್ಪಿನ ಕಾಯಿ-ಯಂತೆ ಅವಶ್ಯವಾಗಿರುವುವು. ನಗುವುದರಿಂದ ರುಧಿರಾಭಿಸರಣವು ಒತ್ತರದಿಂದ ಸಾಗಿ ಜೀರ್ಣಕ್ರಿಯೆಯು ನಡೆದಾಗ ಜೀರ್ಣಕೋಶಗಳಿಗೆ ಶುದ್ಧ ರಕ್ತದ ಪೂರೈಕೆಯು ಚೆನ್ನಾಗಿ ಆಗುವುದು.

"ಮಾತು ಬಲ್ಲವನಿಗೆ ಜಗಳವಿಲ್ಲ" ಸವಿಮಾತಾಡುವವನು ಜಗಳ-ಗಳನ್ನು ಸಹ ತೀರಿಸಬಲ್ಲನು. ಒಬ್ಬರಿಗೊಬ್ಬರು ಚೇಷ್ಟೆಯ ಮಾತು-ಗಳನ್ನಾಡುವುದರಿಂದ ಮನಸ್ಸಿಗೆ ವಿನೋದವಾಗುತ್ತದೆ; ಮತ್ತು ನಗೆ ಬರುತ್ತದೆ. ಒಬ್ಬನು ನಕ್ಕ ಕೂಡಲೆ ಉಳಿದವರು ಸಹ ನಗಹತ್ತುವರು. ಚೇಷ್ಟೆಗಾರರು ತಾವು ಆನಂದದಲ್ಲಿರುವುದಲ್ಲದೆ ಎರಡನೆಯವರಿಗೆ ಸಹ ವಿನೋದವನ್ನುಂಟುಮಾಡುವರು.

ಜನರಿಗೆ ಉಪದೇಶಮಾಡುವುದು ಸುಲಭವು; ಆದರೆ ಅದರಂತೆ ನಡೆಯುವುದು ಕಠಿಣವು. ಆಹಾರವ್ಯವಹಾರಗಳಲ್ಲಿ ಮಿತಭಾವವನ್ನು

ಪಾಲಿಸುವುದು ಹಿತಕರವಾದುದೆಂದು ಎಲ್ಲರೂ ಹೇಳುವರಷ್ಟೆ. ಆದರೆ ಅನೇಕರು ಅದಕ್ಕೆ ವಿರೋಧವಾಗಿ ವರ್ತಿಸಿ ಆರೋಗ್ಯವನ್ನು ಕೆಡಿಸಿ-ಕೊಳ್ಳುವರು. ತಿಂಬುಂಬುವುದರಿಂದ ಆಗುವ ಸುಖವು ಉಳಿದ ಅನೇಕ ಸುಖಗಳಿಗಿಂತ ಕಡಿಮೆಯಾದರೂ ಅದರಿಂದಾಗುವ ಸುಖವನ್ನು ಅಲ್ಲ-ಗಳೆಯಲಾಗದು.

ಪಟ್ಟಣಗಳಲ್ಲಿರುವವರಿಗೆ ಸ್ವಚ್ಛಹವೆಯ ಆವಶ್ಯಕತೆಯು ವಿಶೇಷ-ವಾಗಿರುವುದು; ಯಾಕೆಂದರೆ ನಿಬಿಡವಾದ ವಸತಿಯಿಂದಲೂ, ಕಲ್ಲಿದ್ದ-ಲಿಯ ಅಪಾಯಕರವಾದ ಹೊಗೆ ಬಿಡುವ ಸಾವಿರಾರು ಗಿರಣಿಗಳಿಂದಲೂ ಅಲ್ಲಿಯ ಹವೆಯು ದೂಷಿತವಾಗಿರುವುದು. ಆದುದರಿಂದ ಅವರು ಸಮು-ದ್ರದ ದಂಡೆಯ ಮೇಲಾಗಲಿ, ನದಿಯ ತೀರದಲ್ಲಾಗಲಿ, ವಿಶಾಲವಾದ ಉದ್ಯಾನಗಳಲ್ಲಾಗಲಿ ದಿನಾಲು ಆದಷ್ಟು ಕಾಲವನ್ನು ಕಳೆಯುವುದು ಹಿತಕರವು. ಹಾಗೆ ಮಾಡಿದರೆ ಅವರ ಶರೀರಕ್ಕೆ ಅವಶ್ಯವಾದ ಪ್ರಾಣ-ವಾಯುವು ದೊರೆತು, ರಕ್ತವು ಶುದ್ಧವಾಗಿರುವುದು. ಬಹುಶಃ ಸಾಕಷ್ಟು ಶುದ್ಧ ಹವೆಯು ದೊರೆಯದೆ ಇರುವುದರಿಂದಲೇ ಪಟ್ಟಣಿಗರು ಹಳ್ಳಿಯ-ವರಿಗಿಂತ ನಿಸ್ತೇಜರೂ ಅಶಕ್ತರೂ ಆಗಿರುವರು. ಅವರು ಅಲ್ಪಾಯುಗ-ಳಾಗುವರು. ಗ್ರಂಥವಾಚನದಲ್ಲಿ ಮಗ್ನರಾಗಿ ಒತ್ತಟ್ಟಿಗೆ ಕುಳಿತುಕೊಳ್ಳು-ವುದರಿಂದ ಎಷ್ಟೋ ಜನರು ಬೇನೆಯನ್ನು ತಂದುಕೊಳ್ಳುವರು.

ಹೋದ ಶತಕದಲ್ಲಿ ಆಗಿಹೋದ ವರ್ಡ್ಸ್‌ವರ್ಥನೆಂಬ ಆಂಗ್ಲ ಕವಿಯು ಎಂಥ ಋತುವಿನಲ್ಲಾದರೂ ಹೊರಗೆ ತಿರುಗಾಡುವುದನ್ನು ಬಿಡುತ್ತಿದ್ದಿಲ್ಲ-ವಂತೆ. ಅದರಿಂದ ಅವನಿಗೆ ಎಂದೂ ವೈದ್ಯರನ್ನು ಕರೆಯುವ ಪ್ರಸಂಗವು ಒದಗಲಿಲ್ಲೆಂದು ಹೇಳುತ್ತಾರೆ.

ಬೈಲಲ್ಲಿ ತಿರುಗುವುದರಿಂದ ಗಾಢವಾದ ನಿದ್ದೆಯು ಹತ್ತುತ್ತದೆ; ರಾತ್ರಿಯಲ್ಲಿ ಕೆಟ್ಟಕನಸುಗಳು ಬೀಳುವುದಿಲ್ಲ. ನಿದ್ದೆಮಾಡಿ ಬೆಳಗ್ಗೆ ಎದ್ದ-ಕೂಡಲೆ “ಏನುಮಾಡಲಿ ಏನುಬಿಡಲಿ” ಎಂಬ ಉತ್ಸಾಹವು ಉಂಟಾಗು-ವುದು. ಹಾಗೆ ಮಾಡದೆ ಇದ್ದರೆ ರಾತ್ರಿಯಲ್ಲಿ ನಾನಾತರದ ಕನಸುಗಳು ಬೀಳುವುದರಿಂದ ನಿದ್ದೆ ಇಲ್ಲದೆ ಆರೋಗ್ಯವು ಕೆಡುವುದು.

ಆಟದಕಡೆಗೆ ಸಣ್ಣ ಹುಡುಗರ ಒಲವು ಇರುತ್ತದೆಂಬುದನ್ನು ಬಹು ಜನರು ನೋಡಿರಬಹುದು. ಆಟವು ಅವರ ಶರೀರದ ವೃದ್ಧಿಗೆ ಕಾರಣೀಭೂತವಾಗಿರುವುದು. ಶಾಲೆಗಳಲ್ಲಿ ಹುಡುಗರಿಂದ ಆಟಗಳನ್ನು ಆಡಿಸುವ ಪದ್ಧತಿಯು ನಮ್ಮಲ್ಲಿ ಇನ್ನೂ ಸಂಪೂರ್ಣವಾಗಿ ನೆಲೆಗೊಂಡಿಲ್ಲ. ಆದುದರಿಂದಲೇ ಹುಡುಗರು ಹೆಚ್ಚು ಹೆಚ್ಚು ಅಭ್ಯಾಸಮಾಡಿದಂತೆ ಅವರ ಶರೀರವು ಕ್ಷೀಣವಾಗುತ್ತ ನಡೆಯುತ್ತದೆ. ಶಾರೀರಿಕ ಶಿಕ್ಷಣವು ಮಾನಸಿಕ ಶಿಕ್ಷಣದಷ್ಟೇ ಅಥವಾ ಅದಕ್ಕಿಂತಲೂ ಹೆಚ್ಚು ಮಹತ್ವವುಳ್ಳದ್ದೆಂಬ ಮಾತನ್ನು ನೆನಪಿನಲ್ಲಿಟ್ಟು, ಮಕ್ಕಳಿಗೆ ಆ ತರದ ಶಿಕ್ಷಣವನ್ನು ಕೊಡುವುದು ಅವಶ್ಯವು. ಫಣಿಚಂಡು, ಚಿನ್ನಿದಾಂಡು, ಖೋ, ತಿಳ್ಳಿ ಮೊದಲಾದ ಆಟಗಳನ್ನು ಆಡುವುದರಿಂದಲೂ ಈಸುವುದರಿಂದಲೂ ಕುದುರೆ ಹತ್ತಿ ತಿರುಗುವುದರಿಂದಲೂ ಮನಸ್ಸಿಗೆ ಆನಂದವಾಗುವುದಲ್ಲದೆ ವ್ಯಾಯಾಮವೂ ಆಗುತ್ತದೆ.

ಕಾಯಿ, ತಂತಿ, ಕಿವಿ ಮೊದಲಾದುವುಗಳು ಸರಿಯಾಗಿ ಕೂಡಿದರೆ ತಂಬೂರಿಯಾಗುವಂತೆ ಅಸ್ಥಿ, ಮಜ್ಜಾ, ಸ್ನಾಯು, ತ್ವಚೆ, ಮಿದುಳು ಮೊದಲಾದ ಅನೇಕ ಅವಯವಗಳು ಕೂಡಿ ಶರೀರವಾಗುತ್ತದೆ. ಶರೀರದ ರಚನೆಯು ಸೂಕ್ಷ್ಮವಾದರೂ, ಅದು ಬಹುಕಾಲ ಬಾಳುತ್ತದೆಂಬುದನ್ನು ನೋಡಿ ಆಶ್ಚರ್ಯವಾಗುತ್ತದೆ. ಮನುಷ್ಯದೇಹದಲ್ಲಿ ಬೇರೆ ಬೇರೆ ಆಕಾರದ ಅಸ್ಥಿಗಳು ೨೦೦ಕ್ಕಿಂತ ಹೆಚ್ಚಿಗಿರುವುವು. ಅವುಗಳಲ್ಲಿ ಒಂದಕ್ಕೆ ಅಪಾಯವುಂಟಾದರೂ ಕೂಡ ನಮ್ಮ ಗತಿಯು ಕುಂಠಿತವಾಗುತ್ತದೆ. ಅಸ್ಥಿಗಳಲ್ಲದೆ ಶರೀರದಲ್ಲಿ ೫೦೦ ಸ್ನಾಯುಗಳೂ ಅವುಗಳನ್ನು ಪೋಷಿಸುವಂಥ ಅಸಂಖ್ಯರಕ್ತವಾಹಿನಿಗಳೂ ಇರುವುವು. ನಮ್ಮ ಸ್ನಾಯುಮಂಡಲಗಳಲ್ಲಿ ಒಂದಾದ ರಕ್ತಾಶಯವು ವರ್ಷದಲ್ಲಿ ೩ಕೋಟಿ ಸಾರೆ ಹಾರುತ್ತದೆ. ನಮ್ಮ ತ್ವಚೆಯ ರಚನೆಯಾದರೂ ಹೀಗೆಯೇ ಆಶ್ಚರ್ಯಕರವಾಗಿರುವುದು. ಅದರಲ್ಲಿ ೨೦ಲಕ್ಷ ಬೆವರಿನ ಗ್ರಂಥಿಗಳಿರುವುವು. ಈ ೨೦ಲಕ್ಷ ಮಾಂಸಪಿಂಡಗಳನ್ನು ತ್ವಚೆಯ ಮೇಲ್ಭಾಗಕ್ಕೆ ಕೂಡಿಸುವ ವಾಹಿನಿಗಳ ಉದ್ದಳತೆಯು ೩೧೧ ಹರದಾರಿಯಾಗುವುದು. ಇದಲ್ಲದೆ

ಶುದ್ಧ ಹಾಗು ಅಶುದ್ಧ ರಕ್ತವಾಹಿನಿ, ಸಣ್ಣಸ್ನಾಯು, ಮಜ್ಜಾತಂತು ಇವುಗಳ ಉದ್ದಳತೆಯು ತ್ವಚೆಯ ವಾಹಿನಿಗಳಿಗಿಂತ ಹೆಚ್ಚಿಗಿರುವುದು. ರಕ್ತದಲ್ಲಿ ಕೋಟ್ಯವಧಿ ಅಣುಗಳಿರುವುವು. ಜ್ಞಾನೇಂದ್ರಿಯಗಳ ವಿಷಯವಾಗಿ ವಿಚಾರಮಾಡಿದರಂತೂ ಆಶ್ಚರ್ಯವಾಗದೆ ಇರದು. ಅವುಗಳಲ್ಲಿ ಕಣ್ಣಿನ ರಚನೆಯಂತೂ ಬಹು ವಿಚಿತ್ರವಾಗಿರುವುದು ಅದರಲ್ಲಿ ಕರಿಯಗುಡ್ಡಿ, ಕನೀನಿಕೆ, ಲೆನ್ಸ ಮೊದಲಾದ ಅನೇಕ ಭಾಗಗಳಿರುವುವು. ಲೆನ್ಸ ಎಂಬುದು ಕಾಗದದಷ್ಟು ತಿಳುವಾಗಿದ್ದು ೯ ಪದರುಳ್ಳದ್ದಾಗಿರುತ್ತದೆ. ಅದರಲ್ಲಿ ಕಡೆಯ ಪದರು ೩ಕೋಟಿ ಮಾಂಸದ ರೇಖೆಗಳಿಂದಲೂ ೩೦ಲಕ್ಷ ಕಣಗಳಿಂದಲೂ ಆಗಿರುವುದು. ಶರೀರದ ಮುಖ್ಯಾಂಗವಾದ ತಲೆಯಲ್ಲಿ ಇರುವ ಮಿದುಳು ೬೦ಕೋಟಿ ಕೋಶಗಳಿಂದ ಮಾಡಲ್ಪಟ್ಟದೆ. ಅಂಥ ಒಂದು ಕೋಶದಲ್ಲಿ ಸಾವಿರಾರು ಕಣಗಳಿರುವುವು; ಮತ್ತು ಒಂದು ಕಣದಲ್ಲಿ ಲಕ್ಷಾವಧಿ ಅಣುಗಳಿರುವುವು. ಇಷ್ಟು ಸೂಕ್ಷ್ಮವಾಗಿದ್ದರೂ ಕೂಡ ಯೋಗ್ಯವಾಗಿ ಜೋಪಾನ ಮಾಡಿದರೆ ಶರೀರವು ನೀರೋಗಿಯಾಗಿದ್ದು ಅದರ ವ್ಯಾಪಾರವು ಸುವ್ಯವಸ್ಥಿತವಾಗಿ ನಡೆದು ಬಹುಕಾಲ ಬಾಳುವುದು; ಮತ್ತು ವೃದ್ಧಾಪ್ಯವು ಬಂದರೂ ಮನುಷ್ಯನು ಉದಾಸೀನನಾಗದೆ ಆನಂದವೃತ್ತಿಯಲ್ಲಿಯೇ ಇರುವನು.

ಶರೀರವನ್ನು ಜೋಪಾನ ಮಾಡದೆ ಮನಬಂದಂತೆ ನಡೆದರೆ ಬೇನೆ ಬರುವುದು. ಆಗ ವೈದ್ಯರ ಕಡೆಗೆಹೋಗಿ, ಪ್ರಕೃತಿಯನ್ನು ತೋರಿಸಿ ಔಷಧ ತೆಗೆದುಕೊಂಡು ಅವರಿಗೆ ದ್ರವ್ಯವನ್ನು ಕೊಡುವುದು ಸುಧಾರಿಸಿದ ದೇಶಗಳಲ್ಲಿ ಪ್ರಚಾರದಲ್ಲಿದೆ. ಇನ್ನು ಕಾಡು ಸ್ಥಿತಿಯಲ್ಲಿದ್ದ ಜನರು ರೋಗದ ವಿಷಯವಾಗಿ ಆವ ತಿಳಿವಳಿಕೆಯುಳ್ಳವರಿರುತ್ತಾರೆಂಬುದನ್ನು ನೋಡುವ. ರೋಗಗಳು ಭೂತಪಿಶಾಚಗಳಿಂದ ಉಂಟಾಗುತ್ತವೆಂದು ಅವರು ನಂಬುತ್ತಾರೆ; ಮತ್ತು ಆ ಬಾಧೆಯನ್ನು ಪರಿಹರಿಸಿಕೊಳ್ಳಲಿಕ್ಕೆ ಮಾಂತ್ರಿಕರನ್ನು ಕರೆದೊಯ್ಯುತ್ತಾರೆ. ಅವರು ಮಂತ್ರಸಾಮರ್ಥ್ಯದಿಂದ ದೆವ್ವಗಳನ್ನು ಬಿಡಿಸಿ ರೋಗಪರಿಹಾರಮಾಡುತ್ತಾರೆಂಬ ದೃಢವಾದ ವಿಶ್ವಾಸವು ಅವರಲ್ಲಿ ನೆಲೆಗೊಂಡಿರುವುದು.

ಸ್ವಲ್ಪಮಟ್ಟಿಗೆ ಸುಧಾರಿಸಿದ ಕೆಲವು ದೇಶಗಳಲ್ಲಿ ಮಂತ್ರ ಬರೆದ ತಾಯಿತವನ್ನು ತೊಳೆದು ನೀರನ್ನು ತೀರ್ಥವೆಂದು ಕುಡಿಯುತ್ತಾರೆ. ಕೆಲದೇಶಗಳಲ್ಲಿ ರೋಗಿಯ ಬದಲು ವೈದ್ಯನೇ ಔಷಧವನ್ನು ತೆಗೆದುಕೊಳ್ಳುತ್ತಾನೆ. ಆದರೆ ಬಹಳ ರೋಗಿಗಳಿಗೆ ಉಪಚಾರಮಾಡುವ ವೈದ್ಯನು ಈ ಕ್ರಮವನ್ನು ನಡಿಸಿದರೆ ಅವನೇ ಪ್ರಾಣಕ್ಕೆ ಎರವಾಗಬಹುದು. ವೈದ್ಯರಿಗೆ ಅವರ ಶ್ರಮದ ಬಗ್ಗೆ ಹಣಕೊಡುವ ಪ್ರಕಾರಗಳಾದರೂ ಅನೇಕವಾಗಿವೆ. ಚೀನದೇಶದ ಜನರಲ್ಲಿ ಮನೆಯವರೆಲ್ಲರೂ ನೆಟ್ಟಗಿರುವ ವರೆಗೆ ಕುಟುಂಬದ ವೈದ್ಯನಿಗೆ ವೇತನವನ್ನು ಕೊಡುವರು; ಯಾರಿಗಾದರೂ ಬೇನೆ ಬಂದಕೂಡಲೆ ಅದನ್ನು ನಿಲ್ಲಿಸುವರು. ಇಜಿಪ್ತದೇಶದ ಪದ್ಧತಿಯು ಇದಕ್ಕೂ ವಿಚಿತ್ರವಾಗಿರುವುದು. ಅಲ್ಲಿ ರೋಗಿಗೆ ನೆಟ್ಟಗಾಗುವ ವರೆಗೆ ವೈದ್ಯನು ಅವರಿಗೆ ತಪ್ಪುಗಾಣಿಕೆಯನ್ನು ಕೊಡಬೇಕಾಗುತ್ತದೆ. ಅದರಿಂದ ರೋಗಿಗೆ ಬೇಗನೆ ವಾಸಿಯಾಗಲೆಂದು ವೈದ್ಯನು ಕಠಿಣವಾದ ಉಪಾಯಗಳನ್ನು ಮಾಡುವ ಮೋಹಕ್ಕೆ ಒಳಗಾಗುತ್ತಾನೆ.

ವೈದ್ಯರಿಂದ ರೋಗಗಳು ವಾಸಿಯಾಗುತ್ತವೆಂಬ ಮಾತು ನಿಜವಾದರೂ ನಾವೇ ಅವುಗಳನ್ನು ಪರಿಹರಿಸಿಕೊಳ್ಳಬಹುದು. ಎಷ್ಟೋ ಜನರು ಅತಿವರ್ತನದಿಂದ ಚಿಕ್ಕಂದಿನಲ್ಲಿಯೇ ಮುಪ್ಪಿನವರಾಗುತ್ತಾರೆ; ಇಲ್ಲವೆ ಮರಣಹೊಂದುತ್ತಾರೆ. ಮಾಡತಕ್ಕದ್ದನ್ನು ಮಾಡದೆ ಇರುವುದರಿಂದಲೂ ಬಿಡತಕ್ಕದ್ದನ್ನು ಮಾಡುವುದರಿಂದಲೂ ನಮ್ಮ ಪ್ರಕೃತಿಯು ಕೆಟ್ಟು, ರೋಗಗಳುಂಟಾಗುತ್ತವೆ.

ಆರೋಗ್ಯದ ವಿಷಯವಾಗಿ ಎಷ್ಟು ಬರೆದರೂ ಕಡಿಮೆಯೇ. ಎಲ್ಲರೂ ಈ ನಿಬಂಧದ ಆರಂಭದಲ್ಲಿ ಉಲ್ಲೇಖಿಸಿದ ಆರೋಗ್ಯರಕ್ಷಣೆಯ ನಿಯಮಗಳಂತೆ ವರ್ತಿಸಿದರೆ, ಮುಂದೆ ಪಶ್ಚಾತ್ತಾಪಪಡುವ ಪ್ರಸಂಗವು ಒದಗದು.

---

# ಚತುರ್ಥಾಧ್ಯಾಯ.

## ಪ್ರೇಮ.

**दर्शने स्पर्शने वापि श्रवणे भाषणेऽपिवा।**
**यत्र द्रवत्यंतरंगं स स्नेह इति कथ्यते ॥**

(ನೋಡುವಾಗ, ಮುಟ್ಟುವಾಗ, ಕೇಳುವಾಗ, ಮಾತಾಡುವಾಗ ಅಂತಃಕರಣವು ಕರಗುವುದೇ ಸ್ನೇಹದ ಲಕ್ಷಣವು.)

ಪ್ರೇಮವು ಇಹಲೋಕದಲ್ಲಿ ಅಮೃತದಂತಿರುವುದು. ಅಮೃತಪಾನಮಾಡಿ ದೇವತೆಗಳು ಸುಖವನ್ನು ಭೋಗಿಸುವಂತೆ ಕುಟುಂಬದ ಜನರು ಪ್ರೇಮಾಮೃತಪಾನಮಾಡಿದರೆ, ಅಂದರೆ ಪ್ರೇಮದಿಂದಿದ್ದರೆ ಸುಖವನ್ನು ಭೋಗಿಸುವುದು ನಿಶ್ಚಯ.

ಇಹಲೋಕದಲ್ಲಿ ನಮ್ಮ ಪ್ರೀತಿಗೆ ಪಾಲುಗಾರರು ಯಾರೂ ಇಲ್ಲದೆ ಹೋದರೆ ನಾವು ದುಃಖಿಗಳಾಗಲಿಕ್ಕಿಲ್ಲವೋ? ಬಾಲ್ಯದಲ್ಲಿ ತಾಯಿತಂದೆಗಳು ನಮ್ಮ ಮೇಲೆ ಪ್ರೀತಿಮಾಡುವರು. ತಾರುಣ್ಯಾವಸ್ಥೆಯಲ್ಲಿ ಪುರುಷರಿಗೆ ಪತ್ನೀಪ್ರೇಮವೂ, ಸ್ತ್ರೀಯರಿಗೆ ಪತಿಪ್ರೇಮವೂ ಸ್ವಭಾವಸಿದ್ಧವಾಗಿರುವುವು. ವೃದ್ಧಾಪ್ಯದಲ್ಲಿ ಪುತ್ರಪೌತ್ರಾದಿಗಳನ್ನು ಪ್ರೀತಿಸುವುದು ಸಹಜವಲ್ಲವೋ? ಎಲ್ಲರೂ ಬಾಲ್ಯ, ತಾರುಣ್ಯ, ವೃದ್ಧಾಪ್ಯಾವಸ್ಥೆಗಳಲ್ಲೆಲ್ಲ ಅಣ್ಣತಮ್ಮಂದಿರು, ಅಕ್ಕತಂಗಿಯರು, ಆಪ್ತೇಷ್ಟರು, ಮಿತ್ರರು ಮೊದಲಾದವರ ಮೇಲೆಲ್ಲ ಪ್ರೀತಿ ಮಾಡುವರು. ಆದರೆ ಅನೇಕರು ಈ ಸಾಮಾನ್ಯನಿಯಮಕ್ಕೆ ವಿರೋಧವಾಗಿ ಬ್ರಹ್ಮಚರ್ಯಾವಸ್ಥೆಯಲ್ಲಿಯೇ ಉಳಿಯುವರು. ಅವರು ಬಹುಶಃ ಪಾರಮಾರ್ಥಿಕ ವಿಷಯದಲ್ಲಿಯೇ ಮಗ್ನರಾಗಿರುವುದರಿಂದ, ಸಂಸಾರಸುಖವೇ ತುಚ್ಛವೆಂದೆಣಿಸುತ್ತಾರೆ. ಅವರ ಪ್ರೇಮವು ಸಂಪೂರ್ಣವಾಗಿ ಈಶ್ವರನಲ್ಲಿಯೇ ಲಯಹೊಂದಿರುವುದು.

ಮಿತ್ರಪ್ರೇಮದ ವಿಷಯವಾಗಿ ಮೊದಲನೆಯ ಭಾಗದ ಐದನೆಯ ಅಧ್ಯಾಯದಲ್ಲಿ ವಿಸ್ತೃತವಾದ ವಿವೇಚನವು ಮಾಡಲ್ಪಟ್ಟದ್ದರಿಂದ ಮತ್ತೆ ಚರ್ವಿತ ಚರ್ವಣ ಮಾಡಿ ವಾಚಕರಿಗೆ ಬೇಸರಿಕೆಯನ್ನುಂಟುಮಾಡುವುದು ಸರಿಯಲ್ಲ.

ಪ್ರೇಮವು ನಾನಾವಿಧವಾಗಿದೆ. ತಾಯಿತಂದೆಗಳು ಮಕ್ಕಳ ಮೇಲೆ ಮಾಡುವ ಪ್ರೇಮಕ್ಕೆ ವಾತ್ಸಲ್ಯವೆನ್ನುತ್ತಾರೆ. ಹಿರಿಯರಲ್ಲಿಯೂ, ಗುರುಗಳಲ್ಲಿಯೂ, ಈಶ್ವರನಲ್ಲಿಯೂ ಇರುವ ಪ್ರೇಮವೇ ಭಕ್ತಿಯು. ಅಣ್ಣತಮ್ಮಂದಿರು, ಅಕ್ಕತಂಗಿಯರು, ಸ್ನೇಹಿತರು ಮುಂತಾದವರಲ್ಲಿರುವ ಪ್ರೇಮಕ್ಕೆ ಸ್ನೇಹವೆಂಬ ಹೆಸರು. ಶ್ರೀಮಂತನಿಗೆ ಬಡವನಲ್ಲಿರುವ ಪ್ರೇಮಕ್ಕೆ ದಯೆಯೆಂಬ ಸಂಜ್ಞೆ. ಶರೀರಗಳು ಎರಡಿದ್ದರೂ ಪ್ರಾಣಗಳು ಒಂದಾಗಿರುವಂತೆ ವರ್ತಿಸುವ ದಂಪತಿಗಳಲ್ಲಿರುವ ಅನುರಾಗಕ್ಕೆ ಪ್ರೇಮವೆಂದಲ್ಲದೆ ಬೇರೆ ಹೆಸರಿಲ್ಲ.

ಪ್ರೇಮದಲ್ಲಿ ನಿಷ್ಕಾಮ, ಸಕಾಮ ಎಂಬೆರಡು ಭೇದಗಳನ್ನು ಕಲ್ಪಿಸಬಹುದು. ತಾಯಿತಂದೆಗಳು ಚಿಕ್ಕಮಕ್ಕಳ ಮೇಲೆ ಮಾಡುವ ಪ್ರೇಮವೇ ನಿಜವಾದ ನಿಷ್ಕಾಮಪ್ರೇಮವು. ಎರಡನೆಯವರಿಂದ ಯಾವ ತರದ ಲಾಭವನ್ನೂ ಅಪೇಕ್ಷಿಸದೆ ಅವರ ಮೇಲೆ ಮಾಡುವ ಪ್ರೇಮವೇ ನಿಷ್ಕಾಮಪ್ರೇಮವು. ನಿಷ್ಕಾಮ ಪ್ರೀತಿಯು ನಿಶ್ಚಲವಾದುದು. ಅದು ಯಾವ ಕಾರಣದಿಂದಲೂ ಅಳಿಯದು. ತಂದೆಗಿಂತ ತಾಯಿಯ ಪ್ರೇಮವು ಹೆಚ್ಚು ನಿಷ್ಕಾಮವಾದುದು. ತಂದೆಗೆ ಹುಚ್ಚು ಅಥವಾ ದಡ್ಡಮಕ್ಕಳ ವಿಷಯವಾಗಿ ಒಮ್ಮೆಲ್ಲೊಮ್ಮೆ ತಿರಸ್ಕಾರಬುದ್ಧಿಯು ಹುಟ್ಟುತ್ತದೆ. ಆದರೆ ತಾಯಿಯು ಅಂಥ ಮಕ್ಕಳನ್ನು ಉಳಿದವರಿಗಿಂತ ಹೆಚ್ಚು ಪ್ರೀತಿಸುವಳು. ನಿಷ್ಕಾಮ ಪ್ರೇಮದಲ್ಲಿ ದೇವತಾಂಶವಿರುವುದೆಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

ತಾಯಿತಂದೆಗಳ ವಾತ್ಸಲ್ಯವು ದೇವರು ಎಲ್ಲಾ ಪ್ರಾಣಿಗಳ ಮೇಲೆ ಮಾಡುವ ದಯೆಗೆ* ಸರಿಹೋಲುತ್ತದೆ. ತಾಯಿಯು ಎಲ್ಲ ಮಕ್ಕಳನ್ನು

* ಪ್ರೀತಿ

ಭೇದವಿಲ್ಲದೆ ಹೇಗೆ ಪ್ರೀತಿಸುತ್ತಾಳೋ ಹಾಗೆಯೇ ಅನಾದ್ಯನಂತನಾದ ಪರಮೇಶ್ವರನು ಭೇದ ಭಾವವನ್ನಿಡದೆ ಎಲ್ಲರ ಮೇಲೂ ಒಂದೇ ಸಮನಾಗಿ ಪ್ರೀತಿಮಾಡುತ್ತಾನೆ.

ಪ್ರೇಮದಿಂದ ಮನುಷ್ಯನ ಮನಸ್ಸು ಸ್ಥಿರವಾಗುವುದು; ಕಠೋರ ವೃತ್ತಿಯು ನಾಶಹೊಂದುವುದು; ವೈರವು ಕಡಿಮೆಯಾಗುವುದು; ಶತ್ರುಗಳು ಸಹ ಮಿತ್ರರಾಗುವರು. ಪ್ರೇಮದಿಂದ ಸಜ್ಜನರಿಗೆ ಆನಂದವೂ, ಜಾಣರಿಗೆ ಆಶ್ಚರ್ಯವೂ ಆಗುವುವು. ಎಲ್ಲರೂ ಅದನ್ನು ಬಯಸುವರು. ಅದರಿಂದ ಕೋಮಲತೆ, ಮಮತ್ವ, ಸಹೃದಯತೆ, ಕಾರುಣ್ಯ ಮೊದಲಾದ ಗುಣಗಳು ವಿಕಾಸಹೊಂದುತ್ತವೆ. ಪ್ರೇಮವು ಮನುಷ್ಯನ ವಿಚಾರ, ಭಾಷಣ, ಕೃತಿಗಳಿಗೆ ಒಳ್ಳೇ ಮಾರ್ಗದರ್ಶಕವಾಗಿರುವುದು. ಅದು ತೋರಿಸಿದ ಮಾರ್ಗದಂತೆ ನಡೆದರೆ ಕಲ್ಯಾಣವಾಗುವುದೇ ಹೊರತು ಅಕಲ್ಯಾಣವಾಗದು.

ದಾಂಪತ್ಯ ಪ್ರೇಮದ ಉತ್ಪತ್ತಿಯು ಹೇಗಾಯಿತೆಂಬುದರ ಬಗ್ಗೆ ಜ್ಞಾನಿಗಳು ಬಹು ಪ್ರಾಚೀನ ಕಾಲದಿಂದ ಶೋಧಿಸಹತ್ತಿದ್ದಾರೆ. ಅವರಲ್ಲಿ ಪ್ಲೇಟೊ ಎಂಬ ಗ್ರೀಸ ದೇಶದ ತತ್ವಜ್ಞಾನಿಯು ಬರೆದುದೇನಂದರೆ:— ಪ್ರಾಚೀನ ಕಾಲದಲ್ಲಿ ಮನುಷ್ಯನ ಆಕಾರವು ದುಂಡಗಿದ್ದು ಅವನಿಗೆ ನಾಲ್ಕು ಕಾಲುಗಳೂ, ನಾಲ್ಕು ಕೈಗಳೂ, ಒಂದು ತಲೆಯೂ, ಎರಡು ಮೋರೆಗಳೂ ಇದ್ದುವು. ಅವನು ಬೇಕಾದ ಹಾಗೆ ನಡೆಯುತ್ತಿದ್ದನು; ಮತ್ತು ಪ್ರಸಂಗಬಿದ್ದಾಗ ನಾಲ್ಕು ಕೈ ನಾಲ್ಕು ಕಾಲುಗಳ ಮೇಲೆ ಭಾರವಿಟ್ಟು ಉರುಳಾಡುತ್ತ ಹೋಗುತ್ತಿದ್ದನು. ಅವನು ಗಟ್ಟಿಗನಿದ್ದು, ಮಹತ್ವಾಕಾಂಕ್ಷಿಯಾದುದರಿಂದ ಸ್ವರ್ಗಕ್ಕೆಹೋಗಿ ದೇವತೆಗಳನ್ನು ಸೋಲಿಸಬೇಕೆಂದು ನಿಶ್ಚಯಮಾಡಿ ಮೇಲಕ್ಕೇರಹತ್ತಿದನು. ಇದನ್ನು ನೋಡಿ ದೇವತೆಗಳಿಗೆ ಚಿಂತೆಯುಂಟಾಗಿ ಅವರು ಇಂದ್ರನಿಗೆ ಮೊರೆಯಿಟ್ಟರು. ಆಗ ಇಂದ್ರನು ಅವರನ್ನೆಲ್ಲ ಸಮಾಧಾನಗೊಳಿಸಿ ಕಳುಹಿಸಿದನು. ಎಲ್ಲ ಮನುಷ್ಯರನ್ನೂ ಕೊಂದು ಹಾಕಿದರೆ ಯಜ್ಞಗಳೆಲ್ಲ ಇಲ್ಲದಂತಾಗಿ ತನಗೆ ಆಹಾರವು ಸಿಗಲಿಕ್ಕಿಲ್ಲೆಂದು ನೆನಿಸಿ, ಅವರ ಶರೀರವನ್ನು ಸರಿಯಾಗಿ

ದ್ವಿಭಾಗಿಸಬೇಕೆಂದೂ, ಅವರ ಶಕ್ತಿಯು ಅದರಿಂದ ಕಡಿಮೆಯಾಗಿ ಗರ್ವ-ವೆಲ್ಲ ನಷ್ಟವಾಗುವುದೆಂದೂ ಆಲೋಚಿಸಿದನು. ಮುಂದೆ ಅದರಂತೆಯೇ ಅವರಿಗೆ ಹೇಳಿದನು. ಕೂಡಲೆ ಆಲೋಚಿಸಿದಂತೆ ಎಲ್ಲವೂ ಕೈಗೂಡಿತು. ದಂಪತಿಗಳಿಬ್ಬರೂ ಆ ಶರೀರದ ಇಬ್ಭಾಗಗಳಾಗಿದ್ದಾರೆ. ಅವರಿಬ್ಬರೂ ಪ್ರೇಮಪಾಶದಿಂದ ಕಟ್ಟಲ್ಪಟ್ಟದ್ದಾರೆ.

ತಂತುವಾದ್ಯಗಳ ತಂತಿಗಳನ್ನೆಲ್ಲ ಸರಿಯಾಗಿ ಕೂಡಿಸುವುದರಿಂದ ಮನೋಹರವಾದ ರಾಗಗಳುಂಟಾಗುವಂತೆ ಸ್ತ್ರೀಪುರುಷರ ಪ್ರೇಮದಿಂದ ಅವರಿಗೆ ಸಂಸಾರದಲ್ಲಿ ಅನುಪಮಸುಖವುಂಟಾಗುತ್ತದೆ. ಸ್ತ್ರೀಯರಾಗಲಿ, ಪುರುಷರಾಗಲಿ ತಮ್ಮ ಪ್ರಿಯ ಜನರ ದೆಶೆಯಿಂದ ಜೀವವನ್ನು ಕೊಡಲಿಕ್ಕೆ ಸಹ ಹಿಂದೆ ಮುಂದೆ ನೋಡುವುದಿಲ್ಲ. ಇದೇ ಕಾರಣದಿಂದಲೇ ನಮ್ಮ ದೇಶದಲ್ಲಿ ಸಹಗಮನ ಮಾಡುವ ಪದ್ಧತಿಯು ಪ್ರಚಾರದಲ್ಲಿತ್ತೆಂದು ತರ್ಕಿಸ-ಬಹುದು.

ದಾಂಪತ್ಯಸಂಬಂಧವುಳ್ಳ ಸ್ತ್ರೀಪುರುಷರು ಒಬ್ಬರನ್ನೊಬ್ಬರು ನೋಡಿದ-ಮಾತ್ರಕ್ಕೇ ಅನ್ಯೋನ್ಯವಾಗಿ ಪ್ರೀತಿಯು ಹುಟ್ಟುವುದು. ಮುಂದೆ ಅದೇ ಪ್ರೇಮವು ಕಾಲಹೋದ ಹಾಗೆ ದೃಢವಾಗುತ್ತ ಹೋಗುವುದು. ಹೀಗೆ ಪ್ರೇಮವು ದೃಢವಾದ ಮೇಲೆ ಪ್ರೇಮಕಲಹಗಳಲ್ಲದೆ ಬೇರೆ ಗೃಹಕಲಹ-ಗಳೆಲ್ಲ ಅಡಗಿಹೋಗುವುವು. ಈ ಬಗೆಯಾಗಿ ಅಂದರೆ ಅನ್ಯೋನ್ಯ-ದರ್ಶನದಿಂದ ಉಂಟಾಗುವ ಪ್ರೀತಿಯ ಪ್ರಾದುರ್ಭಾವದಿಂದ ಜನ್ಮಾಂತರ-ದಲ್ಲಿ ಅವರ ನಡುವೆ ಪ್ರೇಮವಿತ್ತೆಂಬುದು ಸೂಚಿತವಾಗುತ್ತದೆ. ಪೂರ್ವ-ಜನ್ಮದ ಋಣಾನುಬಂಧವಿದ್ದವರನ್ನು ನೋಡಿದ ಕೂಡಲೆ ಅವರ ಮೇಲೆ ಪ್ರೇಮವುಂಟಾಗುತ್ತದೆ.

“ **भावस्थिराणि जननान्तरसौहृदानि** ” —शाकुंतलम्-

ಇಂಗ್ಲಂಡ್, ಫ್ರಾನ್ಸ್, ಜರ್ಮನಿ ಮೊದಲಾದ ಪಾಶ್ಚಾತ್ಯರಾಷ್ಟ್ರಗಳಲ್ಲಿ ಪ್ರೀತಿ ವಿವಾಹವು ರೂಢಿಯಲ್ಲಿದೆ. ಅದು, ಪುರಾತನ ಕಾಲದಲ್ಲಿ ನಮ್ಮಲ್ಲಿ ಪ್ರಚಲಿತವಾಗಿದ್ದ ಗಾಂಧರ್ವವಿವಾಹವನ್ನು ಹೋಲುತ್ತದೆ. ಆದರೂ, ಅವರ ದಾಂಪತ್ಯಸ್ಥಿತಿಯು ಅಷ್ಟು ಸುಖಕರವಾಗಿರುವುದಿಲ್ಲ. ನಮ್ಮ

ದೇಶದಲ್ಲಿ ಬಹುತರ ತಾಯಿತಂದೆಗಳೇ ವಧೂವರರನ್ನು ಗೊತ್ತುಮಾಡು-ವುದರಿಂದ ಒಮ್ಮೊಮ್ಮೆ ದಂಪತಿಗಳಲ್ಲಿ ಪ್ರೀತಿಯು ಕಂಡುಬರುವುದಿ-ಲ್ಲೆಂಬುದು ನಿಜ. ಪ್ರೇಮವು ಅಂತಃಕರಣದಲ್ಲಿ ತನ್ನಿಂದ ತಾನೇ ಹುಟ್ಟು-ವುದೇ ಹೊರತು ಬಲಾತ್ಕಾರದಿಂದ ಉಂಟಾಗಲಾರದು.

ಪರಸ್ಪರ ಪ್ರೇಮವಿದ್ದವರು ಎಷ್ಟು ದೂರವಿದ್ದರೂ ಹತ್ತಿರವಿದ್ದಂತೆ ಸುಖವನ್ನು ಹೊಂದುತ್ತಾರೆ; ಇಲ್ಲವೆ ಅತಿ ವಿರಹದುಃಖಕ್ಕೆ ಒಳಗಾ-ಗುತ್ತಾರೆ. ಉತ್ತರರಾಮಚರಿತೆಯಲ್ಲಿ ರಾಮಚಂದ್ರನು ಸೀತೆಯ ವಿರಹ ವನ್ನನುಲಕ್ಷಿಸಿ ಪೂರ್ವದ ಸುಖಸ್ಮರಣೆಯಿಂದ ವಿಹ್ವಲನಾಗಿ ಈ ಪ್ರಕಾರ ಕೇಳುತ್ತಾನೆ.

(ಮತ್ತೇಭವಿಕ್ರೀಡಿತ.)

ನೆನಪುಂಟೇಲಲಿತಾಂಗಿ? ಈಗಿರಿಯೊಳಂದಾವಿರ್ದುದೀಲಕ್ಷ್ಮಣಂ ।
ಮನಸಿಂಮಾಡಿದ ಸೇವೆಯಿಂದ ಸುಖದಿಂ ಪೋದಾದಿನಂಗಳ್ಸಖೀ ॥
ನೆನಪುಂಟೇ ಪ್ರಿಯೆ? ಇರ್ಪಳಲ್ಲಿ ಮಧುರಾಂಭೋಯುಕ್ತೆ ಗೋದಾವರಿ ।
ವಿನಯಂ ಭಾಷಿಣಿ ತತ್ತಟಂಗಳೊಳೆ ನಾವಾಡಿದ್ದು ಗೊತ್ತುಂಟೆ ಪೇಳ್ ॥

—**ಉತ್ತರರಾಮಚರಿತ್ರ.**

ಪ್ರೇಮವು ಮನುಷ್ಯರೆಲ್ಲರನ್ನೂ ತನ್ನ ಅಧೀನದಲ್ಲಿಟ್ಟುಕೊಂಡಿದೆ. ದೇಶದಲ್ಲಿ ಶಾಂತತೆಯಿದ್ದಾಗ ಜನರು ಪ್ರೇಮದ ಆಸ್ವಾದವನ್ನು ಸವಿಯು-ತ್ತಾರೆ. ವೀರರು ತಮ್ಮ ಪ್ರಿಯವಸ್ತುಗಳ ದೆಶೆಯಿಂದಲೇ ಯುದ್ಧಗಳಲ್ಲಿ ಬಹು ಶೂರತನದಿಂದ ಕಾದುತ್ತಾರೆ. ಪ್ರೇಮವು ಅರಸನ ಅರಮನೆಯಲ್ಲಿ ಕಂಡುಬರುವಂತೆ ಬಡವನ ಗುಡಿಸಲಿನಲ್ಲಾದರೂ ಕಂಡುಬರುವುದು. ಅದು ಸ್ವರ್ಗಲೋಕದಲ್ಲಿದ್ದಂತೆ ಭೂಲೋಕದಲ್ಲಾದರೂ ಇರುವುದು.

ನಮ್ಮ ಧರ್ಮದಲ್ಲಿ ಕಲ್ಪಿಸಿದ ನಾಲ್ಕು ಆಶ್ರಮಗಳಲ್ಲಿ ಗೃಹಸ್ಥಾಶ್ರ-ಮವು ಒಂದಾದರೂ ಅದರಲ್ಲಿ ವಿಶೇಷ ಆಸಕ್ತಿಯು ಇರಕೂಡದೆಂದು ಧರ್ಮಶಾಸ್ತ್ರಜ್ಞರು ಪ್ರತಿಪಾದಿಸುತ್ತಾರೆ. ಆದರೆ ಕಾವ್ಯಗಳಲ್ಲಿ ತದ್ವಿಪರೀ-ತವಾದ ಅಭಿಪ್ರಾಯವು ದೃಷ್ಟಿಗೆ ಬೀಳುವುದು. ಅವುಗಳಲ್ಲಿ ಶೃಂಗಾರವೇ ಪ್ರಧಾನಹೇತುವಾಗಿರುವುದು. ಆದುದರಿಂದಲೇ ಭರ್ತೃಹರಿಯು "ದೀಪ,

ಅಗ್ನಿ, ಸೂರ್ಯ, ಚಂದ್ರನಕ್ಷತ್ರಗಳು ಲೋಕಕ್ಕೆಲ್ಲ ಪ್ರಕಾಶವನ್ನುಂಟು-ಮಾಡುತ್ತಿದ್ದರೂ, ಎಳೆಚಿಗರಿಯಂತೆ ಕಣ್ಣುಳ್ಳ ಪ್ರಿಯತಮೆಯಿಲ್ಲದೆ ನನ್ನ ಪಾಲಿಗೆ ಅದೆಲ್ಲ ಅಂಧಕಾರಮಯವಾಗಿದೆ” ಎಂದು ಅಂದಿದ್ದಾನೆ.

**सति प्रदीपे सत्यग्नौ, सत्सु तारारवीन्दुषु ।**

**विना मे मृगशावाक्ष्या तमो भूतमिदं जगत् ।**

ಗೃಹಿಣಿಯು ಗೃಹಸುಖದ ಮುಖ್ಯ ಘಟಕಳಾಗಿದ್ದಾಳೆ. ಅವಳಿ-ಲ್ಲದೆ ಮನುಷ್ಯನಿಗೆ ಜಗತ್ತಿನಲ್ಲಿ ಸೌಖ್ಯವು ಲಭಿಸುವುದಿಲ್ಲ. ಪ್ರೇಮವು ಅಂತಃಕರಣದಲ್ಲಿ ಗುಪ್ತವಾಗಿ ಹುಟ್ಟಿ ಗಂಡಹೆಂಡಂದಿರನ್ನು ಆನಂದೋ-ತ್ಸಾಹಗಳೆಂಬ ಸುವರ್ಣದ ಸಂಕೋಲೆಗಳಿಂದ ಬಂಧಿಸುವುದರಿಂದ ಅದು ನಾಶವಾಗುವುದಿಲ್ಲ.

ಸಂಸಾರದಲ್ಲಿ ಪ್ರೇಮಕ್ಕೆ ಸುವಿಚಾರದ ಜೋಡು ಅವಶ್ಯವಾಗಿ ಬೇಕು. ಸುವಿಚಾರವಿಲ್ಲದೆ ಪ್ರೇಮದಿಂದಲೇ ಆಗಲಿ, ಪ್ರೇಮವಿಲ್ಲದೆ ಸುವಿಚಾರ-ದಿಂದಲೇ ಆಗಲಿ ಸುಖವಾಗದು. ಪ್ರೇಮದಿಂದ ಮನಸ್ಸಿನಲ್ಲಿ ಸದಿಚ್ಛೆ-ಗಳು ಅಂಕುರಿಸುತ್ತವೆ. ಪ್ರೇಮದ ದೆಶೆಯಿಂದಲೇ ಜನರು ಕಷ್ಟಗಳನ್ನು ಭೋಗಿಸುತ್ತಾರೆ.

ಆಂಗ್ಲದೇಶದ ಪ್ರಸಿದ್ಧಕವಿಯಾದ ಮಿಲ್ಟನ್ನನು ಮಾಡಿದ ಪ್ರೇಮ ಪ್ರಶಂಸೆಯು ಮನೋಹರವಾಗಿರುವುದು. “ಪ್ರಿಯ ಪತ್ನಿಯ ಸಂಗಡ ಮಾತಾಡುವಾಗ ಕಾಲವು ಹೋದದ್ದೂ, ಋತುಗಳು ಬದಲಾದದ್ದೂ ಸಹ ಗೊತ್ತಾಗುವುದಿಲ್ಲ. ಎಲ್ಲ ಋತುಗಳಲ್ಲಿಯೂ ಏಕಪ್ರಕಾರವಾಗಿ ಆನಂದವಾಗುತ್ತದೆ. ಮುಂಜಾವಿನ ಮಂದವಾದ ಸುಳಿಗಾಳಿಯು ಬಹು ಸೊಗಸಾಗಿ ಮೈಗೆ ಸೋಂಕುವುದು; ಪಕ್ಷಿಗಳ ಗಾನವು ಇಂಪಾಗಿ ಕೇಳ-ಬರುವುದು; ಸೂರ್ಯನಾರಾಯಣನು ತನ್ನ ಹೊಂಬಣ್ಣದ ಕಿರಣಗಳನ್ನು ಎಲ್ಲ ಕಡೆಯಲ್ಲಿಯೂ ಬೀರಿ ಆನಂದವನ್ನುಂಟುಮಾಡುವನು; ಹಸರು ಮುರಿಯುವ ಬೆಳೆಯಮೇಲೆ ತುಸುಮಳೆಯಾದದ್ದನ್ನು ನೋಡಿದರೆ ಹಸಿ-ವೆಯು ಹಿಂಗಿಹೋಗುವುದು; ಸಂಧ್ಯಾಕಾಲವಂತೂ ಬಹು ರಮಣೀಯ-ವಾಗಿ ಕಂಡುಬರುವುದು. ಅಂದವಾದ ಇಂದುತಾರಕಗಳಿಂದ ಶರ್ವರೀ

ಶೋಭೆಯು ಮನೋಹರವಾಗಿ ಕಾಣುವುದು. ಆದರೆ ಪ್ರಿಯ ಪತ್ನಿಯಿಲ್ಲದಿದ್ದರೆ ಅವೆಲ್ಲವುಗಳ ಪರಿಣಾಮವು ವಿಪರೀತವಾಗುವುದಲ್ಲವೆ?"

ಉತ್ತಮ ಸ್ತ್ರೀಯು ಎಲ್ಲರಿಗೂ ಲಭಿಸುವುದು ಅಸಂಭವವೆಂದು ಕಂಡುಬಂದರೂ ಜನರು ಭಿನ್ನ ಭಿನ್ನ ರುಚಿಯುಳ್ಳವರಾದುವರಿಂದ ಅವರವರಿಗೆ ಅನುರೂಪಳಾದ ಸ್ತ್ರೀಯು ದೊರೆಯುವುದು ಕಠಿಣವಾಗಲಾರದು. ನಮ್ಮ ದೇಶದಲ್ಲಿ ತಾಯಿತಂದೆಗಳೇ ಮಕ್ಕಳ ಲಗ್ನಮಾಡುವರು. ಆದರೂ ವಧೂವರರ ದಾಂಪತ್ಯಸ್ಥಿತಿಯು ಸುಖಕರವಾಗಲಿಕ್ಕೆ ಏನೂ ಪ್ರತಿಬಂಧವಿಲ್ಲ. ಗಂಡನು ಹೆಂಡತಿಯ ಮೇಲೆ ಪ್ರೀತಿಮಾಡಹತ್ತಿದರೆ ಅವಳಾದರೂ ಅವನನ್ನೇ ಪ್ರೀತಿಸುವಳು. ಪ್ರೀತಿಯಿಂದಲೇ ಪ್ರೀತಿಯು ಬೆಳೆಯುವುದು.

ವಧೂವರರಲ್ಲಿ ಪರಸ್ಪರಪ್ರೇಮವಿದ್ದರೆ ಅವರು ಒಮ್ಮನಸ್ಸಿನಿಂದ ನಡೆಯುವರು. ಆದರೂ ಒಮ್ಮೊಮ್ಮೆ ಕ್ಷುದ್ರ ಕಾರಣಗಳಿಂದ ಅವರಲ್ಲಿ ವಿರಸವುಂಟಾಗುತ್ತದೆ. ಆದುದರಿಂದ ಅವರು ಅಂಥ ಕಾರಣಗಳಿಗೆ ಎಳ್ಳಷ್ಟಾದರೂ ಇಂಬುಗೊಡದಂತೆ ಎಚ್ಚರದಿಂದ ನಡೆಯತಕ್ಕದ್ದು. ಇಲ್ಲದಿದ್ದರೆ ಅಂಥ ಸಣ್ಣ ಕಾರಣಗಳಿಂದ ಸಹ ಮುಂದೆ ವಿಪರೀತವಾದ ಪರಿಣಾಮವುಂಟಾಗಬಹುದು. ತಂಬೂರಿಯ ಕಾಯಿಗೆ ಬಿದ್ದ ಸಣ್ಣ ಛಿದ್ರವು ದೊಡ್ಡದಾಗುತ್ತ ಹೋದ ಹಾಗೆ ತಂಬೂರಿಯ ಸ್ವರವು ಕೆಡುತ್ತ ಹೋಗುವಂತೆ ಪ್ರೇಮವು ಸಣ್ಣ ಪುಟ್ಟಕಾರಣಗಳಿಂದ ಕಡಿಮೆಯಾಗುವುದು. ತಂತುವಾದ್ಯಗಳನ್ನು ಸೂಕ್ಷ್ಮರೀತಿಯಿಂದ ಉಪಯೋಗಿಸದೆ ಹುಂಬತನದಿಂದ ಉಪಯೋಗಿಸಿದರೆ ಅವು ಬಹುಕಾಲ ಬಾಳವು. ಪ್ರೇಮದ ಸ್ಥಿತಿಯಾದರೂ ಹಾಗೆಯೇ ಇರುವುದು.

**अर्धं भार्या मनुष्यस्य भार्या श्रेष्ठतमः सखा ।**
**भार्या मूलं त्रिवर्गस्य भार्या मूलं तरिष्यतः ॥**

—**महाभारत**.

(ಧರ್ಮಪತ್ನಿಯು ಪುರುಷನ ಅರ್ಧಾಂಗಿಯೂ ಶ್ರೇಷ್ಠಳಾದ ಮಿತ್ರಳೂ ಆಗಿರುವಳು. ಅವಳು ಧರ್ಮಾರ್ಥಕಾಮಮೋಕ್ಷಗಳೆಂಬ ಪುರುಷಾರ್ಥಗಳ ಮೂಲದಂತೆಯೂ, ಸಂಸಾರಸಾಗರವನ್ನು ದಾಟಲಿಕ್ಕೆ ಅವಶ್ಯವಾದ ನಾವಿನಂತೆಯೂ ಇರುವಳು.)

ಆದುದರಿಂದಲೇ ಆಂಗ್ಲಜನರಲ್ಲಿ ಹೆಂಡತಿಗೆ 'ಉತ್ತಮಾಂಗಿ'ಯೆಂಬ ಸಂಜ್ಞೆಯು ಪ್ರಚಾರದಲ್ಲಿ ಬಂದಿದೆ.

ಪತ್ನೀಪ್ರೇಮದಿಂದುಂಟಾಗುವ ಪರಿಣಾಮವನ್ನು ಭವಭೂತಿಯು ಉತ್ತರರಾಮಚರಿತೆಯಲ್ಲಿ—

(ಮತ್ತೇಭವಿಕ್ರೀಡಿತ.)

ಸುಖದುಃಖಂಗಳೊಳಂ ಸಮಾನಮಖಿಲಾವಸ್ಥಾನುಕೂಲಂ ಸುರಂ ।
ಜಕಮಾಜೀವಕೆಮೇಣ್ ಶ್ರಮಾಪಹರಣಂ ಮುಪ್ಪಲ್ಲಿಯುಂ ಸ್ನೇಹವ ॥
ರ್ಧಕಮಾಚ್ಛಾದನೆ ಪೋಗೆ ಕಾಲವಶದಿಂ ಪೂರ್ಣಾನುರಾಗೋಜ್ವಲಂ, ।
ಪ್ರಕಟಂ ಭದ್ರಮಿದಪ್ಪುದಾ ಸುಪುರುಷಂಗೆಂತೆಂತೊ ಸತ್ಪುಣ್ಯದಿಂ ॥

ಎಂದು ಸರಸವಾಗಿ ಬಣ್ಣಿಸಿದ್ದಾನೆ.

ಸ್ತ್ರೀಪುರುಷರಲ್ಲಿಯ ನಿಜವಾದ ಪ್ರೇಮವು ಕಾಲಕ್ರಮದಿಂದ ಬೆಳೆಯುತ್ತಹೋಗಿ ನೋಡುವವರಿಗೆ ಅವರು ಭಿನ್ನವ್ಯಕ್ತಿಗಳಂತೆ ಕಂಡರೂ ಅಂತರಂಗದಲ್ಲಿ ಐಕ್ಯವನ್ನು ಹೊಂದಿರುವರು. ಅಂಥ ದಂಪತಿಗಳ ವಿಯೋಗವು ಎಂದೂ ಆಗದು. ಉಳಿದ ಮನೋವಿಕಾರಗಳಂತೆ ಪ್ರೇಮವು ನಷ್ಟವಾಗುವುದಲ್ಲ.

# ಪಂಚಮಾಧ್ಯಾಯ.

## ಚಿತ್ರಕಲೆ.

"ಈ ಸೃಷ್ಟಿಯಲ್ಲಿ ಶುದ್ಧವಾದ ಹಾಗು ರಮ್ಯವಾದ ವಸ್ತುಗಳಲ್ಲಿದ್ದ ಸೌಂದರ್ಯವನ್ನು ಜನರಿಗೆ ತೋರ್ಪಡಿಸಿ ಅವರ ಮನಸ್ಸನ್ನು ಆಕರ್ಷಣಮಾಡಿಕೊಳ್ಳುವ ಚಿತ್ರಕಾರರ ಕೃತಿಗೆ ಕಲೆಯೆಂದು ಹೆಸರು." —**ರಸ್ಕಿನ್ನ.**

ಹಿಂದುಸ್ತಾನದೊಳಗೆ ಅತಿ ಪ್ರಾಚೀನಕಾಲದಲ್ಲಿ ಚಿತ್ರಕಲೆಯು ಎಷ್ಟು ಊರ್ಜಿತಾವಸ್ಥೆಯಲ್ಲಿತ್ತೆಂಬುದನ್ನು ಗೊತ್ತುಮಾಡಲಿಕ್ಕೆ ಸಾಕಷ್ಟು ಸಾಧನಗಳಿಲ್ಲ. ಆದರೆ ಜನರಲ್ಲಿ ಮೂರ್ತಿಪೂಜೆಯು ರೂಢವಾಗಿದ್ದುದರಿಂದ ಮೂರ್ತಿಗಳನ್ನು ಮಾಡುವ ಶಿಲ್ಪಿಗರ ಸಂಖ್ಯೆಯು ಕೆಲಮಟ್ಟಿಗೆ ಇತ್ತೆಂದು ಹೇಳಬಹುದು. ಮತ್ತು ಪ್ರಾಚೀನಕಾಲದಲ್ಲಿ ಕಟ್ಟಲ್ಪಟ್ಟ ಗುಡಿಗಳಲ್ಲಾಗಲಿ, ಗವಿಗಳಲ್ಲಾಗಲಿ ಇರುವ ಮೂರ್ತಿಗಳು ಸುಂದರವಾಗಿಯೂ ಪ್ರಮಾಣಾನುಸಾರವಾಗಿಯೂ ಇರುತ್ತವೆಂದು ಚಿತ್ರಕಲೆಯ ಮೀಮಾಂಸಕರಾದ ಹಾವೆಲ್, ಆನಂದ ಕೆ. ಕುಮಾರಸ್ವಾಮಿ ಮೊದಲಾದ ಪಂಡಿತರು ಬರೆದಿದ್ದಾರೆ. ಮುಸಲ್ಮಾನರ ಆಳಿಕೆಯು ಆರಂಭವಾದಂದಿನಿಂದ ಎಷ್ಟೋ ಉತ್ತಮವಾದ ಕಟ್ಟಡಗಳು ಕಟ್ಟಲ್ಪಟ್ಟರೂ, ಚಿತ್ರಕಲೆಯು ಊರ್ಜಿತಾವಸ್ಥೆಯನ್ನು ಹೊಂದಲಿಲ್ಲವೆಂದು ಹೇಳಬಹುದು. ಆಗಿನ ಕಾಲದಲ್ಲಿದ್ದ ಪ್ರಸಿದ್ಧ ಪುರುಷರ ಚಿತ್ರಪಟಗಳನ್ನು ನೋಡಿದರೆ ಮೇಲೆ ಹೇಳಿದ ಮಾತಿನ ಸತ್ಯತೆಯು ಚೆನ್ನಾಗಿ ಬೋಧವಾಗುವುದು.

ಪ್ರಾಚೀನಕಾಲದ ಗುಡಿಗಂಹರಗಳಲ್ಲಿರುವ ಮೂರ್ತಿಗಳಿಂದಲೂ ಚಿತ್ರಗಳಿಂದಲೂ ಆ ಕಾಲದ ಇತಿಹಾಸವು ಸ್ವಲ್ಪಮಟ್ಟಿಗೆ ಗೊತ್ತಾಗುವುದು. ಎಷ್ಟೋ ಯುದ್ಧದ ಚಿತ್ರಗಳಲ್ಲಿ ಅರಸರೂ ಸೇನಾಪತಿಗಳೂ ಸೈನಿಕರಿಗಿಂತ ಶರೀರದಲ್ಲಿ ಹೆಚ್ಚು ಪುಷ್ಟರೂ ನಿಲುವಿಕೆಯಲ್ಲಿ ಹೆಚ್ಚು ಎತ್ತರ-

ವುಳ್ಳವರೂ ಆಗಿದ್ದರೆಂಬುದೂ, ಆ ಕಾಲದಲ್ಲಿ ಯುದ್ಧದ ಭಾರವೆಲ್ಲ ಅವರ ಮೇಲೆ ಬೀಳುತ್ತಿತ್ತೆಂಬುದೂ ಸ್ಪಷ್ಟವಾಗುತ್ತದೆ.

ಚಿತ್ರಕಲೆಯು ಸುಖಪ್ರಾಪ್ತಿಯ ಸಾಧನಗಳಲ್ಲಿ ಒಂದಾಗಿದೆ. ಅದರ ಯೋಗದಿಂದ ದೃಷ್ಟಿಯೂ ಮನಸ್ಸೂ ಸುಸಂಸ್ಕೃತವಾಗುತ್ತವೆ. ಸೂರ್ಯನ ಪ್ರಕಾಶದಿಂದ ಹೂಗಳಿಗೆ ಬಣ್ಣವು ಬರುವಂತೆ ಚಿತ್ರಕಲೆಯಿಂದ ಆಯು-ಷ್ಯಕ್ಕೆ ರಮ್ಯತೆಯುಂಟಾಗುತ್ತದೆ.

ಚಿತ್ರಕಾರನ ಬುದ್ಧಿಯೂ, ಕೌಶಲ್ಯವೂ ಯಾವ ಕೃತಿಯಲ್ಲಿ ಮಗ್ನವಾ-ಗುತ್ತವೆಯೋ ಅದೇ ಚಿತ್ರವು. ಚಿತ್ರಕಲೆಯ ಜ್ಞಾನವು ಕೇವಲ ಅಭ್ಯಾಸ-ದಿಂದ ಪ್ರಾಪ್ತವಾಗದು. ಅದರಿಂದ ಮನೋರಂಜನವಾಗುತ್ತದೆಂಬುದು ನಿಜವಾದರೂ ಅದು ಚಿತ್ರಕಲೆಯ ಪ್ರಧಾನಹೇತುವಲ್ಲ. ಮನಸ್ಸು ಸುಸಂಸ್ಕೃತವಾಗುವಂತೆ ಮಾಡುವುದೇ ಇದರ ಮುಖ್ಯೋದ್ದೇಶವು. ಸೃಷ್ಟಿಯಲ್ಲಿ ಕಂಡುಬರುವ ಸೌಂದರ್ಯಕ್ಕಿಂತಲೂ ಹೆಚ್ಚಿನ ಸೌಂದರ್ಯ-ವನ್ನು ಚಿತ್ರಕಲೆಯ ಸಹಾಯದಿಂದ ಪ್ರಕಟಮಾಡಬಹುದು.

ಸೃಷ್ಟಿಯಲ್ಲಿದ್ದ ವಿಷಯಗಳನ್ನು ಚಿತ್ರಕಾರನು ಚೆನ್ನಾಗಿ ಮನನಮಾಡಿ ತನ್ನ ಬುದ್ಧಿಬಲದಿಂದ ಅವುಗಳಿಗೆ ಹೊಸ ಸೌಂದರ್ಯವನ್ನು ಉಂಟು-ಮಾಡುವುದೇ ಚಿತ್ರಕಲೆಯ ಪ್ರಧಾನಹೇತುವು. ಇದ್ದಕ್ಕಿದ್ದ ಹಾಗೆ ಸೃಷ್ಟಿಸೌಂದರ್ಯವನ್ನು ಪ್ರಕಟಿಸುವುದು ಸಹ ಚಿತ್ರಕಲೆಯ ಒಂದು ಅಂಗವಾಗಿದೆ. ಕಟ್ಟಿಗೆಯ ಹಣ್ಣುಗಳನ್ನು ಮಾಡಿ ಬಣ್ಣಕೊಟ್ಟು ಅವು-ಗಳಿಂದ ಮನುಷ್ಯರನ್ನಾಗಲಿ ಪಕ್ಷಿಗಳನ್ನಾಗಲಿ ಮೋಹಗೊಳಿಸಿದರೆ ಚಿತ್ರ-ಕಲೆಯಿಂದಾಗತಕ್ಕ ಹೇತುವು ಸಫಲವಾಯಿತೆಂದು ತಿಳಿಯಕೂಡದು. ಜಗತ್ತಿನಲ್ಲಿ ಆಗಿಹೋದ ಪ್ರಸಿದ್ಧ ಚಿತ್ರಕಾರರು ಕೇವಲ ಸೃಷ್ಟಿಸೌಂದರ್ಯ-ವನ್ನು ಅನುಕರಿಸುವುದರಲ್ಲಿ ಸಮಾಧಾನಹೊಂದದೆ, ತಮ್ಮ ಕಾಲ್ಪನಿಕ ಶಕ್ತಿಯಿಂದ ಹೊಸ ರಚನೆಗಳನ್ನು ಮಾಡಿದರು. ಸೌಂದರ್ಯದ ಯಥಾ-ರ್ಥವಾದ ಕಲ್ಪನೆಯು ಚಿತ್ರಕಾರರ ಮನಸ್ಸಿನಲ್ಲಿರುವುದು. ಸೃಷ್ಟಿಯ-ಲ್ಲಿದ್ದ ಸೌಂದರ್ಯಕ್ಕೆ ಚಿತ್ರಕಾರನಿಂದ ಕಲ್ಪಿತವಾದ ಸೌಂದರ್ಯವು ಕೂಡಿದ ಹೊರತು ಉತ್ತಮಾಕೃತಿಯ ನಿರ್ಮಾಣವಾಗುವುದಿಲ್ಲ.

"ಚೊಕ್ಕ ಬಂಗಾರಕ್ಕೆ ಮುಲಮು ಮಾಡುವುದಾಗಲಿ, ಗುಲಾಬೀ ಹೂವಿನ ವಾಸನೆಯನ್ನು ಹೆಚ್ಚಿಸುವುದಾಗಲಿ, ಇಂದ್ರಧನುಷ್ಯಕ್ಕೆ ಬಣ್ಣ-ಕೊಡುವುದಾಗಲಿ, ಆಕಾಶದಲ್ಲಿಯ ನಕ್ಷತ್ರಗಳಿಗೆ ದೀಪದಿಂದ ಕಾಂತಿ-ಯುಂಟಾಗುವಂತೆ ಮಾಡುವುದಾಗಲಿ ಹಾಸ್ಯಾಸ್ಪದವಾದುದು. ಅದ-ರಂತೆಯೇ ಸೃಷ್ಟಿಯಲ್ಲಿ ಕಂಡುಬರುವ ಶೋಭೆಗಿಂತ ಹೆಚ್ಚಿನ ಸೊಬಗ-ನ್ನುಂಟುಮಾಡುವೆನೆಂಬ ಅಹಂಕಾರವು ಚಿತ್ರಕಾರನಿಗಿರುವುದು ಸಹ ಲಜ್ಜಾಸ್ಪದ"ವೆಂದು ಶೇಕ್ಸಪೀಯರಕವಿಯು ಅನ್ನುತ್ತಾನೆ. ಆದರೆ ಜಗ-ತ್ತಿನಲ್ಲಿದ್ದ ವಸ್ತುಗಳೆಲ್ಲವೂ ಬಂಗಾರದವಲ್ಲ; ಎಲ್ಲಾ ಹೂಗಳಿಗೆ ಗುಲಾಬೀ ಹೂವಿನಂತೆ ಸುವಾಸನೆ ಇಲ್ಲ. ಆದುದರಿಂದ ಬಂಗಾರ ಗುಲಾಬೀ ಹೂವು ಮೊದಲಾದುವುಗಳು ಉಪಮಾನ ವಸ್ತುಗಳಾಗಿವೆ. ಅವುಗಳ-ಲ್ಲಿದ್ದ ಗುಣಗಳನ್ನು ಕಡಿಮೆಪ್ರತಿಯವಸ್ತುಗಳಲ್ಲಿ ಆರೋಪಿಸಿ ಮನಸ್ತೃ-ಪ್ತಿಯನ್ನು ಸ್ವಲ್ಪಮಟ್ಟಿಗೆ ಹೊಂದಬಹುದು.

ಸೃಷ್ಟಿಯಲ್ಲಿ ಕಂಡುಬರುವ ಮನೋಹರವಾದ ಸುಂದರ ವಸ್ತುಗಳು ಅನಂತಕೋಟಿ ಬ್ರಹ್ಮಾಂಡನಾಯಕನಾದ ಪರಮೇಶ್ವರನ ಭಿನ್ನ ಭಿನ್ನ ರೂಪಗಳಾಗಿವೆ.

"ತಾಜಮಹಾಲಿನಂಥ ಅತಿಸುಂದರವಾದ ಕಟ್ಟಡವನ್ನು ನೋಡಿ ಅತ್ಯಾನಂದವಾಗುವುದಲ್ಲದೆ ಇಂಥ ಅಲೌಕಿಕವಾದ ಮಂದಿರವು ದೈವಿಕ-ಕೃತಿಯಿಂದಲೇ ನಿರ್ಮಿತವಾಗಿರಬಹುದೆಂಬ ದೃಢವಾದ ಕಲ್ಪನೆಯು ಉಂಟಾಗುತ್ತದೆ. ಈ ಅಪ್ರತಿಮವಾದ ಮಂದಿರವು ಆಕಾಶದಲ್ಲಿ ಬರ್ಫ-ದಿಂದ ರಚಿಸಲ್ಪಟ್ಟು ಭೂಮಿಯ ಮೇಲೆ ಬಿದ್ದಬಳಿಕ ಕಲ್ಲಾದಂತೆ ಕಾಣು-ತ್ತದೆ. ಈ ಮಹಾಲು ಅತಿಸುಂದರಿಯಾದ ತರುಣಿಯಂತೆ ಕಾಣಿಸುತ್ತ-ದೆಂದು ರಶಿಯಾದ ಒಬ್ಬ ಪ್ರಸಿದ್ಧ ಶಿಲ್ಪಿಯು ಬರೆದಿದ್ದಾನೆ. ಈ ಮಹಾ-ಲಿನೊಳಗೆ ಮಾಡಿದ ಶಬ್ದದ ಪ್ರತಿಧ್ವನಿಯು ಒಬ್ಬ ಅತಿ ಸುಂದರಿ-ಯಾದ ತರುಣಿಯು ಮುಖದಿಂದ ಹೊರಡುವ ಗಾಯನದಂತೆ ಕೇಳಿ-ಸುತ್ತದೆಂದು ಸರ್ ಎಡ್ವಿನ್ ಅರ್ನೋಲ್ಡ್ ಸಾಹೇಬರು ವರ್ಣಿಸಿ-ರುವರು."

ಕವಿಯು ಶಬ್ದಗಳಿಂದ ಯಾವುದಾದರೊಂದು ವಸ್ತುವಿನ ಚಿತ್ರವನ್ನು ತೆಗೆಯುತ್ತಾನೆ. ಚಿತ್ರಕಾರನು ತನ್ನ ಕೃತಿಯಿಂದ ಜಗತ್ತಿನ ಕೂಡ ಮಾತಾಡುತ್ತಾನೆ. ಕವಿಗಳಿಗಿಲ್ಲದ ಅನುಕೂಲತೆಯು ಚಿತ್ರಕಾರನಿಗುಂಟು. ಅದೇನಂದರೆ—ಯಾವುದಾದರೊಂದು ಸುಂದರ ಚಿತ್ರವನ್ನಾಗಲಿ, ಮೂರ್ತಿಯನ್ನಾಗಲಿ ನೋಡಿ ಮೂಲವಸ್ತುವಿನ ಯಾಥಾತಥ್ಯವಾದ ಕಲ್ಪನೆಯಾಗುವಂತೆ ಮಾಡಲು ಎಂಥ ಸವಿಸ್ತರ ವರ್ಣನೆಯಿಂದಾದರೂ ಕವಿಗೆ ಸಾಧ್ಯವಿಲ್ಲ. ಇದಲ್ಲದೆ ಅವನು ಒಂದೇ ಭಾಷೆಯಲ್ಲಿ ವರ್ಣಿಸಬಲ್ಲನು. ಚಿತ್ರಕಾರನು ಸಾರ್ವತ್ರಿಕ ಭಾಷೆಯಲ್ಲಿ ಅಂಥ ವರ್ಣನೆಯನ್ನು ಮಾಡುವುದರಿಂದ ಅದು ಎಲ್ಲರಿಗೂ ಸಕೃದ್ದರ್ಶನಕ್ಕೆ ಗೋಚರವಾಗುವುದು. ಮಿಕಾಯಿಲ್ ಎಂಜೆಲೊ, ಟರ್ನರ, ಜೋಸುಆ ರೆನಾಲ್ಡ್ಸ ಮೊದಲಾದ ಪಾಶ್ಚಾತ್ಯ ಚಿತ್ರಕಾರರ ಪ್ರಸಿದ್ಧ ಚಿತ್ರಗಳನ್ನು ನೋಡಿ ಆ ದೇಶಗಳ ಜನರಿಗೆ ಆನಂದವಾಗುವಂತೆ ನಮಗಾದರೂ ಆನಂದವಾಗುವುದು. ಅದರಂತೆ ನಮ್ಮ ದೇಶದಲ್ಲಿ ಪ್ರಸಿದ್ಧರಾದ ರಾಜಾರವಿವರ್ಮಾ, ಅವನೀಂದ್ರನಾಥಟಾಗೋರ, ಸುರೇಂದ್ರನಾಥ ಗಂಗೋಳಿ ಮೊದಲಾದ ಚಿತ್ರಕಾರರ ಚಿತ್ರಗಳು ಅನ್ಯದೇಶೀಯರಿಗೆ ಆನಂದವನ್ನುಂಟುಮಾಡದೆ ಇರವು.

ಚಿತ್ರಕಲೆಯ ಊರ್ಜಿತಾವಸ್ಥೆಯು ದೇಶದ ಉತ್ಕರ್ಷಸೂಚಕವಾಗಿದೆ. ರೋಮ ಹಾಗೂ ಗ್ರೀಸ ದೇಶಗಳ ಇತಿಹಾಸವನ್ನು ಓದಿದರೆ ಮೇಲೆ ಹೇಳಿದ ಮಾತಿನ ಮನವರಿಕೆಯಾಗುವುದು. ನಮ್ಮ ದೇಶದಲ್ಲಿ ಚಿತ್ರಕಲೆಯೂ ಶಿಲ್ಪಕಲೆಯೂ ಪ್ರಾಚೀನಕಾಲದಲ್ಲಿ ಊರ್ಜಿತಾವಸ್ಥೆಯಲ್ಲಿದ್ದುವು. ಆದರೆ ೨೦೦ ವರ್ಷಗಳಿಂದೀಚೆಗೆ ಅವು ವಿಪನ್ನಾವಸ್ಥೆಯನ್ನು ಹೊಂದಿವೆ. ದೇಶದ ಸಾಂಪತ್ತಿಕ ಸ್ಥಿತಿಯಾದರೂ ಅದಕ್ಕೆ ಅನುರೂಪವಾಗಿಯೇ ಇದೆ. ವ್ಯಾಪಾರೋದ್ಯೋಗಗಳ ಸಂಬಂಧದಿಂದ ಜಗತ್ತಿನಲ್ಲಿ ನಡೆದ ಸೆಣಸಾಟದಲ್ಲಿ ಕಲೆಗಳಲ್ಲಿ ಮುಂದುವರಿದ ದೇಶವೇ ಅಗ್ರಸ್ಥಾನವನ್ನು ಸಂಪಾದಿಸುವುದು. ಜರ್ಮನಿ, ಜಪಾನ ದೇಶಗಳ ವ್ಯಾಪಾರೋದ್ಯೋಗಗಳು ವೃದ್ಧಿಗೊಳ್ಳಲಿಕ್ಕೆ ಆ ದೇಶೀಯರ ಕಲಾಕೌಶಲ್ಯವೇ ಕಾರಣವು. ಅವರು ಮಾಡಿದ ಪದಾರ್ಥಗಳು ಹೆಚ್ಚು ಸೊಬಗುಳ್ಳವುಗಳಾ-

ದುದರಿಂದ ಉಳಿದ ದೇಶಗಳಲ್ಲಾಗುವ ಪದಾರ್ಥಗಳನ್ನು ಹಿಂದಕ್ಕಟ್ಟ-ಹತ್ತಿವೆ.

ಇತ್ತಿತ್ತಲಾಗಿ ನಮ್ಮ ದೇಶದಲ್ಲಿ ಚಿತ್ರಕಲೆಯ ಅಭಿವೃದ್ಧಿಯು ಆಗ-ಹತ್ತಿದೆ. ಅದರಂತೆ ವ್ಯಾಪಾರೋದ್ಯೋಗಗಳಾದರೂ ತಮ್ಮ ತಮ್ಮ ತಲೆ-ಯನ್ನು ಮೇಲಕ್ಕೆತ್ತಹತ್ತಿವೆ.

ಶಾಸ್ತ್ರವೂ ಕಲೆಯೂ ಸ್ತ್ರೀಪುರುಷರಂತೆ ಇರುತ್ತವೆ. ಕಲೆಯ ಅಭಿ-ವೃದ್ಧಿಗೆ ಶಾಸ್ತ್ರವು ಬೇಕು. ಶಾಸ್ತ್ರದ ಅಭಿವೃದ್ಧಿಗೆ ಕಲೆಯು ಬೇಕು. ಸಂಸಾರರಥವು ಸುಸೂತ್ರವಾಗಿ ಸಾಗಬೇಕಾದರೆ ಸ್ತ್ರೀಪುರುಷರೆಂಬ ಎರಡು ಚಕ್ರಗಳು ಅವಶ್ಯವಾಗಿರುವುವು. ಸ್ತ್ರೀಯರು ಗೃಹಕೃತ್ಯಗಳನ್ನು ನೆರ-ವೇರಿಸಿ ಮನೆಗೆ ಶೋಭೆಯನ್ನುಂಟುಮಾಡುತ್ತಾರೆ. ಪುರುಷರು ಸಂಸಾ-ರಕ್ಕೆ ಅವಶ್ಯವಾದ ಪದಾರ್ಥಗಳನ್ನೆಲ್ಲ ಪೂರೈಸಿಕೊಡುತ್ತಾರೆ. ಅದ-ರಂತೆಯೇ ಕಲೆಯಿಂದ ದೇಶಕ್ಕೆ ಶೋಭೆಯುಂಟಾಗುತ್ತದೆ. ಶಾಸ್ತ್ರದಿಂದ ಉಪಯೋಗವಾಗುತ್ತದೆ.

ಶಾಸ್ತ್ರದಲ್ಲಿ ಸುಧಾರಣೆಯು ಬೇಗನೆ ಆಗುವುದು. ಆದರೆ ಚಿತ್ರ-ಕಲೆಯಲ್ಲಿ ಸುಧಾರಣೆಯಾಗಲಿಕ್ಕೆ ವಿಶೇಷ ಕಾಲಾವಧಿಯು ಅವಶ್ಯವು. ಪ್ರಾಚೀನಕಾಲದ ಚಿತ್ರಕಾರರು ತೆಗೆದ ವನಶೋಭೆಯು ಇಲ್ಲವೆ ಭೂಪ್ರ-ದೇಶದ ಚಿತ್ರಗಳು ತೀರ ವಿರಲವೆಂದು ಹೇಳಬಹುದು. ಆದರೆ ಇತ್ತ-ಲಾಗಿ ಚಿತ್ರಕಾರರು ತಮ್ಮ ಲಕ್ಷ್ಯವನ್ನು ಚಿತ್ರಕಲೆಯ ಈ ಶಾಖೆಯ ಕಡೆಗೆ ಸಹ ಪೂರೈಸಹತ್ತಿದ್ದಾರೆ.

ಚಿತ್ರಕಲೆಯ ಅಭ್ಯಾಸದಿಂದ ಜ್ಞಾನಚಕ್ಷುಗಳುಂಟಾಗುವುವು. ಜಗ-ತ್ತಿನಲ್ಲಿ ನೂರು ಜನರೊಳಗೆ ಒಬ್ಬನು ವಿಚಾರಿಯಾಗಿರುವನು; ಸಾವಿರ ವಿಚಾರಿಗಳೊಳಗೆ ಒಬ್ಬನಿಗೆ ಮಾತ್ರ ಜ್ಞಾನಚಕ್ಷುಗಳಿರುವುವು; ಜ್ಞಾನ-ಚಕ್ಷುಗಳಿದ್ದವರಿಗೆ ಮಂತ್ರ, ಕಾವ್ಯ, ಶಾಸ್ತ್ರ, ಧರ್ಮ ಮೊದಲಾದುವುಗಳ ರಹಸ್ಯವು ಗೊತ್ತಾಗುವುದು.

ಚಿತ್ರಕಲೆಯ ಅಭಿವೃದ್ಧಿಯಾಗಲಿಕ್ಕೆ ಚಿತ್ರಕಾರರು ಜಗತ್ತಿನ ವ್ಯವ-ಹಾರೋದ್ಯೋಗಗಳ ಮರ್ಮವನ್ನು ಅರಿತುಕೊಳ್ಳುವುದೂ, ಅವುಗಳನ್ನು

ತಮ್ಮ ಬುದ್ಧಿಕೌಶಲ್ಯದಿಂದ ಜನರಿಗೆ ಸುಂದರವಾಗಿ ಕಾಣುವಂತೆ ಹಾಗೂ ಅವರಿಗೆ ಉಪಯುಕ್ತವಾಗುವಂತೆ ಮಾಡುವುದೂ ಅವಶ್ಯವು.

ಚಿತ್ರಕಾರರಿಗೆ ಪೂರ್ವದಲ್ಲಿ ರಾಜಾಶ್ರಯವಿದ್ದಂತೆ ಈಗಲೂ ಸಹ ಇರುವುದು. ಬಡೋದೆಯ ಅರಮನೆಯಲ್ಲಿ ಗೋಡೆಗಳ ಮೇಲೆ ರಾಜಾ-ರವಿವರ್ಮನಿಂದ ತೆಗೆಯಲ್ಪಟ್ಟ ಚಿತ್ರಗಳು ಈಗಿನ ಪ್ರಸಿದ್ಧಗಾಯಕವಾಡ-ರಾದ ಸಯಾಜಿರಾವ ಮಹಾರಾಜರಿಂದ ದೊರೆತ ರಾಜಾಶ್ರಯದ ಫಲ-ಗಳಾಗಿವೆ. ಅವು ದರ್ಶನೀಯವಾಗಿರುವುವಲ್ಲದೆ ಪುರಾಣಕಾಲದ ನೆನ-ಪನ್ನು ತಂದುಕೊಡುತ್ತವೆ. ದೇಶಾಭಿಮಾನಿಗಳಾದ ಐತಿಹಾಸಿಕ ಪುರು-ಷರ ಚಿತ್ರಗಳನ್ನು ನೋಡಿ ಸ್ಫೂರ್ತಿಯುಂಟಾಗುತ್ತದೆ. ಸಾಧುಸಂತರ ಪ್ರಸಾದ ಚಿಹ್ನವುಳ್ಳ ಗಂಭೀರವಾದ ಮುದ್ರೆಯನ್ನು ನೋಡಿ ಪೂಜ್ಯ-ಭಾವವೂ ವಿವೇಕಬುದ್ಧಿಯೂ ಪ್ರಜ್ವಲಿಸುತ್ತವೆ.

ಇಂಗ್ಲಂಡದಲ್ಲಿ ಪ್ರತಿವರ್ಷ ಆಗುವ ಚಿತ್ರಪ್ರದರ್ಶನಗಳಿಂದ, ಅಲ್ಲಿಯ ಜನರಿಗೆ ಚಿತ್ರಕಲೆಯ ಮೇಲೆ ಎಷ್ಟು ಪ್ರೇಮವಿರುತ್ತದೆಂಬುದು ವ್ಯಕ್ತ-ವಾಗುತ್ತದೆ. ನಮ್ಮ ದೇಶದೊಳಗೆ ಮಧ್ಯಕಾಲದಲ್ಲಿ ವಿಪನ್ನಾವಸ್ಥೆಯನ್ನು ಹೊಂದಿದ ಚಿತ್ರಕಲೆಯು ಉದಯವಾಗಹತ್ತಿದ ಚಿಹ್ನಗಳನ್ನು ನೋಡಿ ಪ್ರತಿಯೊಬ್ಬ ಹಿಂದೀ ಮನುಷ್ಯನಿಗೆ ಆನಂದವಾಗದೆ ಇರದು. ಇಂಗ್ಲಂಡ-ದಂತೆ ಇಲ್ಲಿಯಾದರೂ ಪ್ರತಿಯೊಂದು ಹಳ್ಳಿಯಲ್ಲಿ ಉತ್ತಮ ಚಿತ್ರಕಾರರ ಕೃತಿಗಳಿಗೆ ಸ್ಥಳ ದೊರೆತು ಜನರಿಗೆ ಈ ಸುಖಸಾಧನವು ಪ್ರಾಪ್ತವಾಗ-ಲೆಂದು ಆಶಿಸುವೆವು.

# ಷಷ್ಠಾಧ್ಯಾಯ.

## ಕಾವ್ಯ.

**कान्पृच्छामः सुराः स्वर्गे निवसामो वयं भुवि ।**
**किं वा काव्यरसः स्वादुः किं वा स्वादीयसी सुधा ॥**

–सुभाषित.

(ಯಾರನ್ನು ಕೇಳಬೇಕು? ನಾವು ಭೂಲೋಕದಲ್ಲಿ ಇರುವವರು; ದೇವತೆಗಳು ಸ್ವರ್ಗಲೋಕದಲ್ಲಿರುವವರು. ಇಲ್ಲದಿದ್ದರೆ ಕಾವ್ಯರಸವು ಮಧುರವೋ, ಅಮೃತವು ಮಧುರವೋ ಎಂದು ಅವರನ್ನು ಕೇಳುತ್ತಿದ್ದೆವು.)

ಸುಖಸಾಧನಗಳಲ್ಲಿ ಕಾವ್ಯದ ಮಹತ್ವವು ವಿಶೇಷವಾಗಿರುವುದೆಂದು ಮೊದಲನೆಯ ಭಾಗದ ಮೂರನೆಯ ಅಧ್ಯಾಯದಲ್ಲಿ ಹೇಳಿದ್ದೇವೆ. ಕಾವ್ಯವೆಂದರೇನೆಂಬುದನ್ನು ಕುರಿತು ಆಲೋಚಿಸುವ. ಕಾವ್ಯದ ವ್ಯಾಖ್ಯೆಯನ್ನು ಅಲಂಕಾರಶಾಸ್ತ್ರಜ್ಞರು ಭಿನ್ನಭಿನ್ನವಾಗಿ ಕಲ್ಪಿಸಿದ್ದರೂ ಅವೆಲ್ಲವುಗಳ ಭಾವವು ಒಂದಾಗಿರುವುದು ಸಾಹಿತ್ಯದರ್ಪಣದಲ್ಲಿ "**वाक्यं रसात्मकं काव्यं ।**" ಎಂಬ ವ್ಯಾಖ್ಯೆಯು ಕಂಡುಬರುವುದು. ಜಗನ್ನಾಥ ಪಂಡಿತನು ಬರೆದ ರಸಗಂಗಾಧರದಲ್ಲಿ "**रमणीयार्थप्रतिपादकः शब्दः काव्यं ।**" ಎಂದುಂಟು. ಕಾವ್ಯಾದರ್ಶದಲ್ಲಿ "**शरीरं तावदिष्टार्थव्यवच्छिन्ना पदावली ॥**" (ಮನಸ್ಸಿನಲ್ಲಿದ್ದ ಅರ್ಥವನ್ನು ವಿವರಿಸುವ ಪದಸಮುಚ್ಚಯವೇ ಕಾವ್ಯವು) ಎಂಬ ವ್ಯಾಖ್ಯೆಯು ಕೊಡಲ್ಪಟ್ಟದೆ. ಚಂದ್ರಾಲೋಕದಲ್ಲಿ "**निर्दोषा लक्षणवती सरीतिर्गुणभूषिता । सालंकाररसानेकवृत्तिर्वाक् काव्यनामभाक् ॥**" ಎಂಬ ವಿಸ್ತೃತವಾದ ವ್ಯಾಖ್ಯೆಯಿಂದ ಕಾವ್ಯದ ಮುಖ್ಯ ಅಂಗಗಳು ಯಾವುವೆಂಬುದು ಬೋಧವಾಗುತ್ತದೆ. ದೋಷರಹಿತವೂ, ಲಕ್ಷಣವುಳ್ಳದೂ, ರೂಢಿಗೆ ಸರಿಯಾದುದೂ, ಗುಣಗಳುಳ್ಳದೂ, ಅಲಂಕಾರವುಳ್ಳದೂ, ರಸವುಳ್ಳದೂ, ಅನೇಕ ವೃತ್ತಿಗಳುಳ್ಳದೂ ಆದ ವಾಕ್ಯವೇ ಕಾವ್ಯವು.

ಮೇಲೆ ಕಾವ್ಯದ ಲಕ್ಷಣವನ್ನು ಹೇಳಿದಂತಾಯಿತು. ಇನ್ನು ಕವಿಗಳಲ್ಲಿ ಅವಶ್ಯವಾದ ಗುಣಗಳು ಯಾವುವೆಂಬುದನ್ನು ನೋಡುವ! ಅವರಲ್ಲಿ ವಿಚಾರಶಕ್ತಿ, ಪ್ರೇಮ, ಸಹೃದಯತೆ ಮೊದಲಾದ ಗುಣಗಳು ವಾಸಿಸುತ್ತಿರಬೇಕು. ಕಾವ್ಯದ ರಚನೆಗೆ ವಿಚಾರಶಕ್ತಿಯೂ, ಕಾವ್ಯವು ಮನೋಹರವಾಗಲಿಕ್ಕೆ ಪ್ರೇಮವೂ, ಕಾವ್ಯದ ಮರ್ಮವನ್ನು ತೋರಿಸುವುದಕ್ಕೆ ವಿವೇಕಬುದ್ಧಿಯೂ ಅವಶ್ಯವು. ಮನುಷ್ಯ ಪ್ರಾಣಿಗಳಲ್ಲೆಲ್ಲ ಕಲ್ಪನಾಶಕ್ತಿಯು ಅಲ್ಪಸ್ವಲ್ಪ ಪ್ರಮಾಣದಿಂದ ಇದ್ದೇ ಇರುವುದು. ಆದರೆ ಕವಿಯ ಕಲ್ಪನಾಶಕ್ತಿಯು ಅಗಾಧವಾಗಿರುವುದು. "ಕವಿಗೆ ಕಾವ್ಯಸ್ಫೂರ್ತಿಯಾದ ಕೂಡಲೆ ಪ್ರಸನ್ನದೃಷ್ಟಿಯಿಂದ ಭೂಮ್ಯಾಕಾಶಗಳ ಕಡೆಗೆ ಪ್ರೇಮಪುರಸ್ಸರವಾಗಿ ನೋಡಿ ಮನಸ್ಸಿನಲ್ಲಿ ಉದ್ಭವಿಸುವ ವಿಚಾರ ತರಂಗಗಳಿಗೆ ಇಂಬುಗೊಟ್ಟು ಅವುಗಳಿಗೆ ಕವಿತೆಗಳೆಂಬ ದೇಹಗಳನ್ನು ನಿರ್ಮಿಸಿ ನಿರ್ಜೀವವಾದ ವಿಚಾರಗಳನ್ನು ಸಜೀವವಾಗಿ ಮಾಡುವನಲ್ಲದೆ ಅವು ಚಿರಂಜೀವಿಗಳಾಗಲೆಂದು ಆಶೀರ್ವದಿಸುವನು" ಎಂದು ಶೇಕ್ಸಪೀಯರಕವಿಯು ಅನ್ನುತ್ತಾನೆ. ಪ್ರತಿಭಾಶಕ್ತಿಯಿಲ್ಲದವರಿಂದ ರಚಿತವಾದ ಕಾವ್ಯಗಳು ನಿಸ್ಸಾರವಾಗಿರುವುವು.

"अन्तर्गूढानर्थानव्यंजयतः प्रसादरहितस्य ।
संदर्भस्य नदस्य च न रसः प्रीत्यै रसज्ञानाम् ॥" —सुभाषित.

"ಹೇಗೆ ನದದ ನೀರು ಪ್ರಸಾದರಹಿತ(ತಿಳಿಯಲ್ಲದ)ವಾಗಿದ್ದರೆ ಬುಡದಲ್ಲಿರುವ ಪದಾರ್ಥಗಳು ಕಾಣದ ಹಾಗಾಗಿ ರಸಿಕರಿಗೆ ಆನಂದವನ್ನುಂಟುಮಾಡಲಾರವೋ ಹಾಗೆಯೇ ಪ್ರಸಾದರಹಿತ(ಕ್ಲಿಷ್ಟ)ವಾದ ಕಾವ್ಯದ ಇಂಗಿತಾರ್ಥವು ತಿಳಿಯದೆ ಇರುವುದರಿಂದ ರಸಿಕರಿಗೆ ಆನಂದವಾಗದು."

ಕಾವ್ಯದಿಂದಾಗುವ ಇಷ್ಟಾರ್ಥಗಳು ಆವುವೆಂಬುದನ್ನು ನೋಡುವ. ಒಬ್ಬ ಸಂಸ್ಕೃತ ಗ್ರಂಥಕಾರನು ಈ ವಿಷಯದಲ್ಲಿ ಅನ್ನುವುದೇನೆಂದರೆ:—

विश्वोल्लंघनजांघिकां वितनुते कीर्तिं विधत्ते श्रियं ।
हेलानिर्जितयक्षराजविभवां चिंताकरं हंत्यघं ॥
दुग्धे स्वादुतरान् रसान्वितरति स्फारं कलाकौशलं ।
काव्यं निर्वृतिमावहत्यपि परिस्पंदावहं चेतसः ॥ ३ ॥

"ಕಾವ್ಯವು ಕೀರ್ತಿಯನ್ನು ಜಗತ್ತಿನಲ್ಲೆಲ್ಲ ಹಬ್ಬಿಸುವುದು; ಕುಬೇರನ ಐಶ್ವರ್ಯ-ಕ್ಕಿಂತ ಹೆಚ್ಚಾದ ಐಶ್ವರ್ಯವನ್ನು ಕೊಡುವುದು; ಚಿಂತೆಯನ್ನುಂಟುಮಾಡುವ ದೋಷವನ್ನು ಪರಿಹರಿಸುವುದು; ಸ್ವಾದುತರವಾದ ಶೃಂಗಾರಕರುಣ ಮೊದಲಾದ ರಸಗಳನ್ನು ತಿಳಿಸಿಕೊಡುವುದು; ಕಲಾಕೌಶಲ್ಯಗಳಲ್ಲಿ ಹೆಚ್ಚಾದ ಜಾಣತನವನ್ನು ಉಂಟುಮಾಡುವುದು; ಮತ್ತು ಮನಸ್ಸಿನ ಚಂಚಲತೆಯನ್ನು ಹೋಗಲಾಡಿಸುವಂಥ-ಆನಂದವನ್ನುಂಟುಮಾಡುವುದು."

ಕಾವ್ಯ ಪ್ರಕಾಶಕರ್ತನಾದ ಮಮ್ಮಟನು ಕಾವ್ಯ ಪ್ರಯೋಜನಗಳನ್ನು

**काव्यं यशसेऽर्थकृतेव्यवहारविदे शिवेतरक्षतये।**
**सद्यः परनिर्वृतये कान्तासम्मिततयोपदेशयुजे ॥**

"ಕಾವ್ಯದಿಂದ ಕೀರ್ತಿಯುಂಟಾಗುತ್ತದೆ, ಧನವು ಲಭಿಸುತ್ತದೆ, ವ್ಯವಹಾರ-ಜ್ಞಾನವುಂಟಾಗುತ್ತದೆ, ಅಮಂಗಳಗಳು ದೂರಾಗುತ್ತವೆ, ಹಿರಿಗಿಲಾದ ಆನಂದ-ವುಂಟಾಗುತ್ತದೆ. ಕಾಂತೆಯರು ಉಪದೇಶದಿಂದ ಪುರುಷರ ಮನಸ್ಸನ್ನು ಒಲಿಸು-ವಂತೆ, ಅದು ವಾಚಕರ ಮನಸ್ಸನ್ನು ಆಕರ್ಷಿಸುವುದು"
ಎಂದು ವರ್ಣಿಸಿದ್ದಾನೆ.

ಕಾವ್ಯವೆಂದರೆ ಶಬ್ದ ಅರ್ಥಗಳಿಂದ ನಿರ್ಮಿತವಾದ ಚಿತ್ರವೆಂದು ಒಬ್ಬ ಗ್ರೀಕಕವಿಯು ಅನ್ನುತ್ತಾನೆ. ಚಿತ್ರವು ಉಪಮಾನವಸ್ತುವಾದುದರಿಂದ ಅದರಲ್ಲಿ ಕಾವ್ಯಕ್ಕಿಂತಲೂ ವಿಶೇಷವಾದ ಗುಣಗಳು ಏನಾದರೂ ಇರ-ಬೇಕಾಯಿತು. ಯಾವುದಾದರೊಂದು ಪದಾರ್ಥದ ಅಥವಾ ಮನುಷ್ಯನ ಚಿತ್ರದಿಂದ ಆ ಪದಾರ್ಥದ ಅಥವಾ ಮನುಷ್ಯನ ಸ್ವರೂಪವು ಹೇಗೆ ಸ್ಪಷ್ಟವಾಗಿ ವ್ಯಕ್ತವಾಗುತ್ತದೆಯೋ ಹಾಗೆ ಎಂಥ ಸೂಕ್ಷ್ಮವರ್ಣನೆ-ಯಿಂದಲೂ ಆಗದು. ಉದಾಹರಣಾರ್ಥವಾಗಿ ಸ್ತ್ರೀಸೌಂದರ್ಯವನ್ನು ಶಬ್ದಗಳಿಂದ ಎಷ್ಟು ವರ್ಣಿಸಿದರೂ ಸೌಂದರ್ಯದ ಕಲ್ಪನೆಯು ಚೆನ್ನಾಗಿ ಆಗದು. ಪ್ರಾಸಾದಿಕ ಕವಿಗಳಿಗೆ ಈ ಮಾತು ಗೊತ್ತಿದ್ದುದರಿಂದಲೇ, ಅವರಲ್ಲಿ ಅಗ್ರಗಣ್ಯನಾದ ಕಾಲಿದಾಸನು ಶಕುಂತಲೆಯ ಚೆಲ್ವಿಕೆಯನ್ನು ಸೂಕ್ಷ್ಮವಾಗಿ ಬಣ್ಣಿಸುವ ಭರಕ್ಕೆ ಬೀಳದೆ

चित्रे निवेश्य परिकल्पितसत्त्वयोगा ।
रूपोच्चयेन मनसा विधिना कृतानु ॥
स्त्रीरत्नसृष्टिरपरा प्रतिभाति सा मे ।
धातुर्विभुत्वमनुचिन्त्य वपुश्च तस्याः ॥ ३ ॥

"ಸೃಷ್ಟಿಕರ್ತನು ಮೊದಲು ಅವಳ ಚಿತ್ರವನ್ನು ಬರೆದು ಆ ಮೇಲೆ ಅವಳ ಶರೀರ-ದಲ್ಲಿ ಪ್ರಾಣಪ್ರತಿಷ್ಠೆಯನ್ನು ಮಾಡಿದಂತೆ ಕಾಣುತ್ತದೆ. ತ್ರಿಭುವನದಲ್ಲಿದ್ದ ಸೌಂದ-ರ್ಯವನ್ನು ಒಟ್ಟುಗೂಡಿಸಿ ತನ್ನ ಮನಸ್ಸಿನಿಂದಲೇ ವಿಧಿಯು ಇವಳನ್ನು ನಿರ್ಮಿಸಿರ-ಬಹುದೋ? ಯಾಕೆಂದರೆ, ವಿಧಿಯು ಸರ್ವಶಕ್ತಿವಂತನೆಂಬುದನ್ನೂ, ಅವಳ ಶರೀರ-ಕಾಂತಿಯನ್ನೂ ನೋಡಲು ಅದೊಂದು ವಿಲಕ್ಷಣವಾದ ಸ್ತ್ರೀರತ್ನ ಸೃಷ್ಟಿಯೆಂಬುದು ನನಗೆ ತೋರುವುದು" ಎಂಬ ಶ್ಲೋಕದಿಂದ ಸೂಚಿಸಿದ್ದಾನೆ.

ಚಿತ್ರದಿಂದ ಪುರುಷರ ಆಕಾರ, ರೂಪ, ವರ್ಣಗಳು ಗೊತ್ತಾಗುವಂತೆ ಕೃತಿ, ಗತಿ, ವಿಚಾರಗಳು ತಿಳಿಯಲಾರವು. ಹಿಂದೆ ಆಗಿಹೋದ ಪುರುಷರು ಏನು ಮಾಡುತ್ತಿದ್ದರು, ಹೇಗೆ ವಿಚಾರ ಮಾಡುತ್ತಿದ್ದರು, ಎಂಥ ಕಾರ್ಯ ಪ್ರವೃತ್ತಿಯುಳ್ಳವರಿದ್ದರು, ಎಂಬ ಅನೇಕ ವಿವರಣೆಗಳು ವರ್ಣನೆಯಿಂದ-ಲ್ಲದೆ ಚಿತ್ರದಿಂದ ಗೊತ್ತಾಗಲಾರವು.

ಪರಬ್ರಹ್ಮನಿಂದ ನಿರ್ಮಿತವಾದ ಜಗತ್ತು ನಶ್ವರವಾದರೂ ಮಹಾ-ಕವಿಗಳ ಕಾವ್ಯಗಳು ಮಾತ್ರ ಅಮರವಾಗಿರುವುವು. ವ್ಯಾಸ, ವಾಲ್ಮೀಕಿ ಮೊದಲಾದ ಪುರಾತನ ಕವಿಗಳು ಸಾವಿರಾರು ವರ್ಷಗಳ ಹಿಂದೆ ಆಗಿ-ಹೋಗಿದ್ದರೂ ಅವರ ಕಾವ್ಯಗಳು ಈಗ್ಗೆಯೂ ಪೂರ್ವದಲ್ಲಿದ್ದಂತೆಯೇ ಹೆಸ-ರಾಗಿವೆ. ಇಷ್ಟು ಅವಧಿಯಲ್ಲಿ ಎಷ್ಟೋ ರಾಜಮಂದಿರಗಳೂ, ದೇವಾಲಯ-ಗಳೂ, ದುರ್ಗಗಳೂ ನೆಲಸಮವಾಗಿರಬಹುದು; ಎಷ್ಟೋ ವೀರರೂ, ಧರ್ಮಪ್ರವರ್ತಕರೂ ಆಗಿಹೋಗಿರಬಹುದು. ಆದರೆ ಕಾವ್ಯಗಳು ಮಾತ್ರ ಉಳಿದ ಪದಾರ್ಥಗಳಂತೆ ನಾಶವಾಗದೆ ಸಜೀವವಾಗಿರುವುವು. ಯಾಕೆಂದರೆ ಅವು ಬೇರೆ ಬೇರೆ ಯುಗಗಳಲ್ಲಿದ್ದ ಮನುಷ್ಯರ ಮನಸ್ಸಿನಲ್ಲಿ ಸುವಿಚಾರಗಳ ಬೀಜಾರೋಪವನ್ನು ಮಾಡಿಲ್ಲವೇ? ಕಾವ್ಯಗಳೆಂಬ ನೌಕೆ-ಗಳು ಕಾಲವೆಂಬ ವಿಸ್ತೀರ್ಣವಾದ ಸಮುದ್ರದಲ್ಲಿ ನಡೆದು ಬೇರೆ ಬೇರೆ

ಯುಗಗಳಲ್ಲಿ ಪ್ರಕಟವಾದ ವಿಚಾರಗಳ ಜ್ಞಾನವನ್ನು ನಮಗೆ ಮಾಡಿ-
ಕೊಡುತ್ತವೆ.

ಕಾವ್ಯಗಳನ್ನು ಹೇಗೆ ಓದಬೇಕೆಂಬ ಬಗ್ಗೆ ಮೊದಲನೆಯ ಭಾಗದ ೩ನೆಯ
ಅಧ್ಯಾಯದಲ್ಲಿ ವಿಸ್ತೃತವಾಗಿ ವಿಚಾರಮಾಡಿದ್ದೇವೆ. ಕಾವ್ಯರಸಾಸ್ವಾದ-
ವನ್ನು ಸವಿಯಲಿಕ್ಕೆ ಸ್ಥಿರವಾದ ಚಿತ್ತವೂ, ಶಾಂತವಾದ ಮನಸ್ಸೂ ಅವಶ್ಯ-
ವಾಗಿವೆ. ವಾಚಕರು ಆಕುಂಚಿತ ಮನಸ್ಸಿನವರಾಗದೆ ಉದಾರ ಮನಸ್ಸಿ-
ನವರಾದರೆ ಕವಿಯ ವಾಕ್ಚಾತುರ್ಯದ ಸವಿಯು ಗೊತ್ತಾಗುವುದು.

“ಕವಿಗಳು, ಸೃಷ್ಟಿಕರ್ತನಂತೆ ಶಬ್ದಗಳೆಂಬ ಸಾಮುಗ್ರಿಗಳೊಳಗಿಂದ
ವಾಕ್ಯಗಳೆಂಬ ಮೂರ್ತಿಗಳನ್ನು ಮಾಡಿ ಅರ್ಥವೆಂಬ ಜೀವಕಳೆಯನ್ನು
ತುಂಬಿಸುತ್ತಾರೆ. ಅವರು ಸರಸ್ವತಿಯ ನಿಜಸ್ಥಾನದಂತೆಯೂ, ಬೇರೆ
ಬೇರೆ ಕಲೆಗಳ ಜೀವನದಂತೆಯೂ, ಕಲ್ಪನೆಗೆ ಕಲ್ಪತರುವಿನಂತೆಯೂ,
ಮೋಕ್ಷದ ಮುಖ್ಯ ಸಾಧನದಂತೆಯೂ, ಅಮೃತದಿಂದ ತುಂಬಿದ ಮೇಘ-
ದಂತೆಯೂ, ನವರಸಗಳಿಂದ ತುಂಬಿದ ಪರ್ಜನ್ಯದಂತೆಯೂ, ಮಸುಷ್ಯಾ-
ಕಾರದಿಂದ ಪ್ರಕಟವಾದ ವಿವೇಕದ ನಿಧಿಯಂತೆಯೂ ಇರುವರು” ಎಂದು
ರಾಮದಾಸ ಸಾಧುಗಳು ಹೇಳಿದ್ದಾರೆ.

# ಸಪ್ತಮಾಧ್ಯಾಯ.

## ಸಂಗೀತ.

दोलायां शायितो बालो रुदन्नास्ते यदा क्वचित् ।
तदा गीतामृतं पीत्वा हर्षोत्कर्षं प्रपद्यते ।
क्रुद्धो विषं वमन्सर्पः फणामांदोलयन्मुहुः ।
गानं जांगलिकाच्छ्रुत्वा हर्षोत्कर्षं प्रपद्यते ।

(ತೊಟ್ಟಿಲಲ್ಲಿ ಮಲಗಿದ ಮಗುವು ಅಳುತ್ತಿದ್ದರೂ ಹಾಡುವುದನ್ನು ಕೇಳಿ ಆನಂದಭರಿತವಾಗುತ್ತದೆ. ಸಿಟ್ಟಿಗೆದ್ದು ವಿಷವನ್ನು ಕಾರುವಂಥ ನಾಗವು ಸಹ ಹಾವುಗಾರನ ಪುಂಗಿಯ ಧ್ವನಿಯನ್ನು ಕೇಳಿ ಆನಂದದಿಂದ ಹೆಡೆಯನ್ನು ಅಲ್ಲಾಡಿಸ ಹತ್ತುತ್ತದೆ.)

ಪ್ರಾಚೀನಕಾಲದಿಂದ ಸಂಗೀತವು ಸುಖಸಾಧನಗಳಲ್ಲಿ ಮುಖ್ಯವಾದುದೆಂದು ಎಣಿಸಲ್ಪಡುತ್ತದೆ. ಸ್ವರ್ಗಲೋಕದೊಳಗೆ ಅಪ್ಸರಃಸ್ತ್ರೀಯರು ಇಂದ್ರಸಭೆಯಲ್ಲಿ ತಮ್ಮ ನರ್ತನದಿಂದಲೂ, ಗಾಯನದಿಂದಲೂ ದೇವತೆಗಳ ಮನಸ್ಸನ್ನು ಆನಂದಗೊಳಿಸುತ್ತಿದ್ದರೆಂದು ಪುರಾಣಗಳಲ್ಲಿ ಕೇಳುತ್ತೇವೆ. ಯಕ್ಷ, ಗಂಧರ್ವ, ಕಿನ್ನರ ಮೊದಲಾದ ಉಪದೇವತೆಗಳು ಸಹ ಸಂಗೀತದಿಂದ ಸ್ವರ್ಗೀಯರಿಗೂ ಮನುಷ್ಯರಿಗೂ ಆನಂದವನ್ನುಂಟುಮಾಡುತ್ತಿದ್ದರು.

ಸಂಗೀತದ ಉತ್ಪತ್ತಿಯು ಶಿವ, ಪಾರ್ವತಿ, ನಂದಿ, ಹನುಮಂತ, ಅರ್ಜುನ ಇವರಿಂದ ಆಯಿತೆಂದು ಕೆಲವರು ಅನ್ನುತ್ತಾರೆ. ಭರತನು ಸಂಗೀತ ಪದ್ಧತಿಯನ್ನು ಸ್ವರ್ಗದಿಂದ ತಂದು ಪೃಥ್ವಿಯಲ್ಲಿ ಬೆಳೆಸಿದನೆಂದು ಕೆಲವರು ಹೇಳುತ್ತಾರೆ. ಅದು ಹ್ಯಾಗೂ ಇರಲಿ, ವೇದಕಾಲದಲ್ಲಿ ಸಂಗೀತವು ಉತ್ಕರ್ಷವನ್ನು ಹೊಂದಿತ್ತೆಂಬುದು ಸಾಮವೇದದಿಂದ ತಿಳಿಯುತ್ತದೆ. ಆಗ ಷಡ್ಜ, ಋಷಭ, ಗಾಂಧಾರ, ಧೈವತ, ನಿಷಾದಗಳೆಂಬ ಪಂಚಸ್ವರ-

ಗಳು ಮಾತ್ರ ಇದ್ದುವು. ಮುಂದೆ ಅವುಗಳಿಗೆ ಪಂಚಮ, ಮಧ್ಯಮ-ಗಳೆಂಬ ೨ ಹೊಸ ಸ್ವರಗಳನ್ನು ಕೂಡಿಸಿದುದರಿಂದ ಈಗ ಒಟ್ಟು ಸಪ್ತಸ್ವರಗಳಾಗಿವೆ.

ಪ್ರಾಚೀನಕಾಲದ ಋಷಿಗಳು ಪರ್ವತಗಳಲ್ಲಿಯೂ, ಅರಣ್ಯಗಳ-ಲ್ಲಿಯೂ ವಾಸಿಸುತ್ತಿದ್ದರೂ ವೀಣೆಯನ್ನು ಬಾರಿಸುತ್ತ ವೇದಪಠನವನ್ನು ಮಾಡುತ್ತಿದ್ದರು. ಹೋಮಹವನಗಳಲ್ಲಾದರೂ ವೀಣೆಯಕೂಡ ಮಂತ್ರ-ಗಳನ್ನು ಅನ್ನುತ್ತಿದ್ದರು. ಪುರಾಣಕಾಲದಲ್ಲಿ ಸಂಗೀತದ ಮಹತ್ವವು ಕಡಿಮೆಯಾಗಲಿಲ್ಲ. ನಾರದ ಋಷಿಗಳು ವೀಣೆಯಮೇಲೆ ಗೋವಿಂದನ ಭಜನೆಯನ್ನು ಮಾಡುತ್ತ ತ್ರಿಲೋಕ ಸಂಚಾರಮಾಡುತ್ತಿದ್ದರೆಂಬುದು ಪುರಾಣಗಳಲ್ಲಿ ಅಲ್ಲಲ್ಲಿಗೆ ಕಂಡುಬರುವುದು. ವಾಲ್ಮೀಕಿ ಮುನಿಗಳು ಲವಕುಶರಿಗೆ ರಾಮನ ಭಜನೆಯನ್ನು ಸಂಗೀತಾನುಸಾರವಾಗಿ ಮಾಡು-ವಂತೆ ಕಲಿಸಿದ್ದರು. ರಾವಣನು ಸಂಗೀತಶಾಸ್ತ್ರದ ಮೇಲೆ ಗ್ರಂಥವನ್ನು ಬರೆದಿದ್ದನಂತೆ. ಅವನ ಸಭೆಯಲ್ಲಿ ರಾಕ್ಷಸಿಯರೂ ಅಪ್ಸರಃಸ್ತ್ರೀಯರೂ ಗಾನನೃತ್ಯಗಳಿಂದ ಆನಂದವನ್ನುಂಟುಮಾಡುತ್ತಿದ್ದರಂತೆ. ಯಮುನೆಯ ದಂಡೆಯಲ್ಲಿ ಮುರಲೀಧರನು ತನ್ನ ಕೊಳಲನ್ನೂದಿ ಗೋಪಿಕಾಸ್ತ್ರೀ-ಯರ ಮನಸ್ಸನ್ನು ಆಕರ್ಷಿಸುತ್ತಿದ್ದನಲ್ಲದೆ ಗೋವುಗಳಿಗೆ ಸಂತೋಷ-ವನ್ನುಂಟುಮಾಡುತ್ತಿದ್ದನು. ರುಕ್ಮಾಂಗದ ರಾಜನು ಅತಿದಾರುಣವಾದ ಏಕಾದಶೀವ್ರತವನ್ನು ಮಾಡಿ ದೇವರನ್ನು ಒಲಿಸಿ ಇಂದ್ರಪದವಿಯನ್ನು ಬೇಡುವನೆಂಬ ಅಂಜಿಕೆಯಿಂದ ಇಂದ್ರನು ಅವನ ವ್ರತಭಂಗವಾಗುವಂತೆ ಮಾಡೆಂದು ಮೋಹಿನಿಯೆಂಬ ಅಪ್ಸರೆಯನ್ನು ಭೂಲೋಕಕ್ಕೆ ಕಳುಹಿದನು. ಆಕೆಯು ತನ್ನ ವೀಣೆಯಮೇಲೆ ತೋಡೀ, ಝಿಂಝೋಟೀ ಮೊದಲಾದ ಮಂಜುಳವಾದ ರಾಗಗಳನ್ನು ಹಾಡಿ ರಾಜನನ್ನು ಮೋಹಿಸಿದಳು; ಮತ್ತು ಅವನಿಂದ ಆ ವ್ರತಭಂಗಮಾಡಿಸಿದಳು. ಸಂಗೀತದ ಜ್ಞಾನವು ವೇದ-ಪಠನಕ್ಕೆ ಅವಶ್ಯವಾದುದರಿಂದ ವೈದಿಕರೂ ಗೃಹಸ್ಥರೂ ಅದನ್ನು ಅಭ್ಯಾಸಿ-ಸುತ್ತಿದ್ದರು. ವಿಕ್ರಮಾದಿತ್ಯ, ಭೋಜ ಮೊದಲಾದ ಪ್ರಸಿದ್ಧರಾದ ರಾಜರು ಗಾಯಕರೂ ವಾದಕರೂ ಆಗಿದ್ದರು. ಕಾದಂಬರಿಯಲ್ಲಿ

ಮುಖ್ಯ ಕಥಾನಾಯಕನಾದ ಚಂದ್ರಾಪೀಡನು ರಾಜಪದವನ್ನು ಭೋಗಿ-ಸಲಿಕ್ಕೆ ತನ್ನಲ್ಲಿ ಪಾತ್ರತೆಯುಂಟಾಗಬೇಕೆಂದು ನೃತ್ಯವಾದ್ಯಗಳ ಜ್ಞಾನ-ವನ್ನು ಮಾಡಿಕೊಂಡಿದ್ದನೆಂದು ಕಾದಂಬರಿಯಲ್ಲಿ ಓದುತ್ತೇವೆ. ಪೂರ್ವ-ದಲ್ಲಿ ರಾಜಪುತ್ರರೂ ರಾಜಕನ್ಯೆಯರೂ ಸಂಗೀತವನ್ನು ಅಭ್ಯಾಸಿಸು-ತ್ತಿದ್ದರು. ಆದರೆ ಮುಸಲ್ಮಾನರ ರಾಜ್ಯವು ಹಿಂದುಸ್ತಾನದಲ್ಲಿ ನೆಲೆ-ಗೊಂಡಂದಿನಿಂದ ಈ ಕಲೆಯ ಅಪಕರ್ಷವು ಆರಂಭವಾಗಿ ಕಟ್ಟಕಡೆಗೆ ಅದು ವೇಶ್ಯಾಸ್ತ್ರೀಯರ ಕೈಸೇರಿತು. ಅವರು ಶುದ್ಧವಾದ ರಾಗರಾಗಿಣಿ-ಗಳಲ್ಲಿ ಅಶುದ್ಧವಾದುವುಗಳನ್ನು ಬೆರಿಸಿ ಅವುಗಳ ಸೌಂದರ್ಯವನ್ನು ಹಾಳುಮಾಡಿದರು.

"ಹಿಂದೂ ಜನರಲ್ಲಿ ಸಂಗೀತಶಾಸ್ತ್ರವು ಪಾಣಿನಿಯ ಕಾಲಕ್ಕಿಂತ ಮೊದಲು ಅಂದರೆ ಕ್ರಿಸ್ತಿಶಕಕ್ಕಿಂತ ಮೊದಲು ೩೫೦ ವರ್ಷಗಳಿಗಿಂತ ಪೂರ್ವದಲ್ಲಿ ಪೂರ್ಣವಾಗಿ ಅಭಿವೃದ್ಧಿಯನ್ನು ಹೊಂದಿತ್ತು. ಆಗ ಸಪ್ತಸ್ವರಗಳು ರೂಢಿಯಲ್ಲಿದ್ದು ಅವು ಸಾ, ನಿ, ಧ, ಪ, ಮ, ಗ, ರಿ ಎಂಬ ಆದ್ಯಕ್ಷರಗಳಿಂದ ಅಂಕಿತವಾಗಿದ್ದುವು. ಈ ಸಪ್ತಸ್ವರಗಳು ಇರಾಣ-ದೊಳಗಿಂದ ಅರಬಸ್ತಾನಕ್ಕೆ ಹೋಗಿ ಅಲ್ಲಿಂದ ೧೧ನೆಯ ಶತಕದ ಆರಂಭ-ದಲ್ಲಿ ಯುರೋಪ ಖಂಡವನ್ನು ಪ್ರವೇಶಿಸಿದವು." — **ಡಾ. ಹಂಟರ್.**

ಚೀನೀ ಜನರು ತಮ್ಮಲ್ಲಿದ್ದ ಪಂಚಸ್ವರಗಳಿಗೆ ಸಾರ್ವಭೌಮ, ಮಂತ್ರಿ, ಪ್ರಜಾ, ರಾಜಕಾರಣ, ಆಕಾಶದರ್ಪಣಗಳೆಂಬ ಹೆಸರುಗಳನ್ನಿಟ್ಟದ್ದಾರೆ. ಗ್ರೀಸದೇಶದಲ್ಲಾದರೂ ಪ್ರತಿಯೊಂದು ಸ್ವರಕ್ಕೆ ಒಂದೊಂದು ಅಭಿಧಾನವಿದೆ.

ಹಿಂದುಸ್ತಾನದಲ್ಲಿ ರೂಢವಾದ ರಾಗರಾಗಿಣಿಗಳು ಭಿನ್ನಭಿನ್ನವಾದ ಮನೋವೃತ್ತಿಗಳ ದರ್ಶಕಗಳಾಗಿವೆ. ಮತ್ತು ಅವುಗಳನ್ನು ನಿಯಮಿತ-ಕಾಲಕ್ಕೆ ಅನ್ನುವ ಸಾಂಪ್ರದಾಯವುಂಟು. ಅವೆಲ್ಲ ಮಂಜುಳವಾಗಿರುವುವು. ಅವುಗಳಲ್ಲಿ ಉದಯರಾಗವು ಬಹು ಮನೋಹರವಾಗಿರುವುದರಿಂದ ಪ್ರಾತಃಕಾಲದ ಶಾಂತ ಸಮಯದಲ್ಲಿ ಆತ್ಮಾನಂದವನ್ನುಂಟುಮಾಡುತ್ತದೆ. ಎಲ್ಲ ಸುಧಾರಿಸಿದ ರಾಷ್ಟ್ರಗಳಲ್ಲಿ ಸ್ವರಗಳ ಏಕೀಕರಣದಿಂದ ರಾಗ-ಗಳನ್ನು ಕಲ್ಪಿಸಿದಾರೆ.

ಇನ್ನು, ಯಾತಕ್ಕೆ ಸಂಗೀತವೆನ್ನಬೇಕೆಂಬುದನ್ನು ನೋಡುವ, ನಮ್ಮ ಶಾಸ್ತ್ರದಂತೆ '**गानं वाद्यं तथा नृत्यं त्रयी संगीतमुच्यते**'

(ಹಾಡುವುದು, ಬಾರಿಸುವುದು, ಕುಣಿಯುವುದು ಕೂಡಿ ಸಂಗೀತವಾಗುತ್ತದೆ.)

ಆದರೆ ಸೃಷ್ಟಿಯಲ್ಲಿ ಒಂದು ಪ್ರಕಾರ ಸಂಗೀತವು ಯಾವಾಗಲೂ ನಡೆದಿರುವುದು. ಭ್ರಮರಗಳ ಗುಂಜಾರವವೂ, ಕೋಗಿಲೆಗಳ ಮಂಜುಳ-ಗಾನವೂ, ಗಿಳಿಗಳ ಕಿಲಕಿಲವೂ, ಮಂದವಾಗಿ ಹರಿಯುವ ಹಳ್ಳಗಳ ಮಂಜುಳಸಪ್ಪಳವೂ, ಗಿಡಗಳ ಎಲೆಗಳಿಂದುಂಟಾಗುವ ಸುಳ್ ಎಂಬ ಧ್ವನಿಯೂ, ಕೇಳುವವರಿಗೆ ಆನಂದವನ್ನುಂಟುಮಾಡದೇ ಇರವು. ಗ್ರಹ-ಗಳು ಆಕಾಶದಲ್ಲಿ ಭ್ರಮಣಮಾಡುವಾಗ ಗಾಯನಮಾಡುತ್ತವೆಂಬ ತಿಳಿವಳಿಕೆಯು ಪಾಶ್ಚಾತ್ಯರಾಷ್ಟ್ರಗಳಲ್ಲಿ ಪ್ರಾಚೀನಕಾಲದಿಂದ ರೂಢ-ವಾಗಿದೆ. ಆದುದರಿಂದಲೇ ಶೇಕ್ಸಪೀಯರಕವಿಯು "ಆಕಾಶದಲ್ಲಿ ಅಸಂಖ್ಯವಾದ ತಾರೆಗಳು ಗಾನಮಾಡುತ್ತ ತಮ್ಮ ಮಾರ್ಗವನ್ನು ಕ್ರಮಿ-ಸುತ್ತವೆ. ನಾವು ನಶ್ವರವಾದ ಜಡದೇಹದಲ್ಲಿರುವ ಪರ್ಯಂತ ಆ ಗಾನ-ಗಳು ನಮ್ಮ ಕಿವಿಗೆ ಬೀಳುವುದಿಲ್ಲ"ವೆಂದು ಬರೆದಿದ್ದಾನೆ.

ಸಂಗೀತವನ್ನು ಕೇಳಿ ಯಾರಿಗೆ ಆನಂದವಾಗುವುದಿಲ್ಲವೋ ಅವರು ವಿಶ್ವಾಸಘಾತುಕರೂ ರಾಜದ್ರೋಹಿಗಳೂ, ನೀಚರೂ ಇರುವರೆಂದು ಅವನು ಬರೆದಿದ್ದಾನೆ.

**साहित्यसंगीतकलाविहीनः साक्षात्पशुः पुच्छविषाणहीनः ।**
**तृणं न खादन्नपि जीवमानस्तद्भागधेयं परमं पशूनाम् ॥**

—भर्तृहरि.

(ಅಲಂಕಾರ ಸಂಗೀತ ಲಲಿತ ಕಲೆಗಳ ಜ್ಞಾನವಿಲ್ಲದವನು ಬಾಲಕೋಡು-ಗಳಿಲ್ಲದ ಪಶುವು. ಆದರೆ ಅಂಥ ಪ್ರಾಣಿಗಳು ಹುಲ್ಲಿಲ್ಲದೆ ಬದುಕುವರೆಂಬುದು ಪಶುಗಳ ಪರಮಭಾಗ್ಯವು.)

ಈ ಮಾತು ಸಂಪೂರ್ಣವಾಗಿ ನಿಜವೆಂದು ಕಂಡುಬರಲಾರದು. ವಿದ್ವಾಂಸನಾದ ಡಾಕ್ಟರ್ ಜಾನ್ಸನ್ನನಿಗೆ ಸಂಗೀತವನ್ನು ಕೇಳಿದಕೂಡಲೆ ತಲೆ ಬೇಸರಿಕೆಯಿಡುತ್ತಿತ್ತಂತೆ.

ಸಾಧಾರಣವಾಗಿ ಉತ್ತಮ ಸಂಗೀತವನ್ನು ಕೇಳಿದ ಮೇಲೆ ಹಾಡಬೇಕೆಂಬ ಸ್ಫೂರ್ತಿಯು ಬಹುತರ ಎಲ್ಲರಿಗೂ ಆಗುವುದು ಸಹಜವು.

"अपि ब्रह्मपरानंदादिमभ्याधिकं ध्रुवं
जहार नारदादीनां चित्तानि कथमन्यथा ॥"

—सुभाषित.

ಗಾಯನದಿಂದ ಬ್ರಹ್ಮಾನಂದಕ್ಕಿಂತ ಹೆಚ್ಚಿನ ಆನಂದವಾಗುತ್ತದೆ. ಇಲ್ಲದಿದ್ದರೆ ನಾರದನಂಥ ವೈರಾಗ್ಯಶಾಲಿಯ ಮನಸ್ಸು ಗಾಯನದಿಂದ ಹೇಗೆ ಆಕರ್ಷಿಸಲ್ಪಡುತ್ತಿತ್ತು? ಒಮ್ಮೊಮ್ಮೆ ಗಾಯನವನ್ನು ಕೇಳಿ ಅಂತಃಕರಣವು ವಿಹ್ವಲವಾಗುತ್ತದೆ.

"रम्याणि वीक्ष्य मधुरांश्च निशम्य शब्दान् ।
पर्युत्सुकीभवति यत्सुखितोऽपि जन्तुः
तच्चेतसा स्मरति नूनमबोधपूर्वं
भावस्थिराणि जननान्तरसौहृदानि ।"

"ರಮ್ಯವಸ್ತುಗಳನ್ನು ನೋಡಿ, ಮಧುರವಾದ ಹಾಡುಗಳನ್ನು ಕೇಳಿ, ಸುಖಿಯಾದ ಮನುಷ್ಯನು ಸಹ ಉತ್ಸುಕನಾಗುತ್ತಾನೆ. ಪೂರ್ವಜನ್ಮದಲ್ಲಿಯ ಸಖ್ಯವು ತನ್ನಷ್ಟಕ್ಕೆ ತಾನೇ ನೆನಪಾಗುತ್ತದೆ. ಯಾಕೆಂದರೆ ಅಂಥ ಸಖ್ಯದಿಂದುಂಟಾದ ಭಾವನೆಗಳು ಈ ಜನ್ಮದಲ್ಲಿ ಸಹ ಸ್ಥಿರವಾಗಿರುವುವು."

ಸಂಗೀತವು ಶಿಕ್ಷಣದ ಒಂದು ಸಾಧನವಾಗಿದೆ. ಈಶ್ವರ ಭಜನೆಗೆ ಸಂಗೀತವು ಅವಶ್ಯವು. ಪುರಂದರದಾಸ, ತುಕಾರಾಮ ಮೊದಲಾದ ಸಾಧುಗಳು ದೇವರ ಮಹಿಮೆಯ ಪದಗಳನ್ನು ರಚಿಸಿ ಹರಿಭಜನೆಯನ್ನು ಮಾಡಿ ವೈಕುಂಠಪ್ರಾಪ್ತಿಯನ್ನು ಮಾಡಿಕೊಳ್ಳಲಿಲ್ಲವೇ? ಜಡಪದಾರ್ಥಗಳನ್ನು ಮೋಹಿಸುವ ಶಕ್ತಿಯು ಸಂಗೀತದಲ್ಲಿ ಉಂಟೆಂದು ಕವಿಗಳು ಭಾವಿಸುತ್ತಾರೆ.

"तर्हि भग्नगतयः सरितो वै तत्पदांबुजरजोऽनिलनीतम् ।
आमृशन्पयसि या बहुपुण्याः प्रेमवेपितभुजाहतवेगाः ॥"

—श्रीमद्भागवत.

ಆ ಕಾಲದಲ್ಲಿ ಗಾಯನದ ಮಂಜುಳ ಧ್ವನಿಯಿಂದ ನದಿಗಳ ವೇಗವು ಕಟ್ಟಾಗಿ ಅವುಗಳ ಗತಿಯು ಭಗ್ನವಾಗಿ ಪ್ರೇಮದಿಂದ ಕಂಪಿತವಾದ ತರಂಗಗಳೆಂಬ ಭುಜಗಳು ಗಾಳಿಯಿಂದ ಹಾರಿ ಬಂದು ಶ್ರೀಕೃಷ್ಣನ ಚರಣಧೂಳಿಯನ್ನು ಸೇವಿಸಿದುವು.

ಕವಿಗಳು ಸಂಗೀತದ ಪ್ರಶಂಸೆಯನ್ನು ಮಾಡಿದಂತೆ ಗದ್ಯಗ್ರಂಥ-ಕಾರರಾದರೂ ಮಾಡಿದ್ದಾರೆ. ಅವರಲ್ಲಿ ಪ್ಲೇಟೋನು "ಸಂಗೀತದಿಂದ ಕಲ್ಪನಾಶಕ್ತಿಯು ಹೆಚ್ಚಾಗಿ ವಿಚಾರದ ಕ್ಷೇತ್ರವು ದೊಡ್ಡದಾಗುವುದು; ದುಃಖದಲ್ಲಿದ್ದರೂ ಸುಖವಾಗುವುದು; ಎಲ್ಲ ವಸ್ತುಗಳೂ ಆನಂದಮಯ-ವಾಗಿ ಕಂಡುಬರುವುವು; ನ್ಯಾಯದೇವತೆಯ ಮೇಲೆ ದೃಢವಿಶ್ವಾಸವು ಉಂಟಾಗುವುದು; ಪ್ರೇಮದ ಅಭಿವೃದ್ಧಿಯಾಗುವುದು; ಮತ್ತು ಪ್ರೇಮ-ದಲ್ಲಿ ಆಸಕ್ತಿಯು ಹೆಚ್ಚುವುದು" ಎಂದು ಬರೆದಿದ್ದಾನೆ. "ಭಿನ್ನಭಿನ್ನ ದೇಶಗಳ ಜನರು ಬೇರೆಬೇರೆ ಭಾಷೆಗಳನ್ನಾಡುತ್ತಿದ್ದರೂ ಅವರೆಲ್ಲರೂ ಪರಮೇಶ್ವರನ ಗುಣಾನುವಾದವನ್ನು ಸಂಗೀತದಿಂದ ಜರುಗಿಸಿ ಆತನ ಸ್ವರೂಪದ ತುಸುಜ್ಞಾನವನ್ನು ಮಾಡಿಕೊಳ್ಳಬಹುದು."

—**ಕಾರ್ಲಾಯಿಲ್.**

ಪ್ರಾಚೀನಕಾಲದಿಂದ ಶ್ರಮದ ಕೆಲಸಗಳನ್ನು ಮಾಡುವಾಗ ಹಾಡು-ಗಳನ್ನು ಹಾಡುವ ಪರಿಪಾಠವು ರೂಢಿಯಲ್ಲಿದೆ. ಹೆಂಗಸರು ಬೀಸುವಾಗ, ಕುರುಬರು ಕುರಿಗಳನ್ನು ಕಾಯುವಾಗ, ಮೀನುಗಾರನು ಮೀನುಗಳನ್ನು ಹಿಡಿಯುವಾಗ, ಒಕ್ಕಲಿಗನು ನೇಗಿಲು ಹೊಡೆಯುವಾಗ ಹಾಡುತ್ತಿರು-ತ್ತಾರೆ. ಯಾಕೆಂದರೆ ಅದರಿಂದ ಶ್ರಮವು ಪರಿಹಾರವಾಗುತ್ತದೆ.

ಇತರ ಕಲೆಗಳ ಅಭಿರುಚಿಯುಂಟಾಗಲಿಕ್ಕೆ ಆ ಕಲೆಗಳ ಸಂಸ್ಕಾರವು ಅತ್ಯವಶ್ಯವು. ಆದರೆ ಸಂಗೀತದ ಪರಿಚಯವು ಎಳ್ಳಷ್ಟಾದರೂ ಇಲ್ಲ-ದಿದ್ದರೂ ಕೂಡ ಅದರಿಂದ ಎಲ್ಲರಿಗೂ ಆನಂದವಾಗುತ್ತದೆ. ಸಂಗೀತ-ದಿಂದ ಆನಂದ ಹೊಂದದ ಅರಸಿಕ ಜನರು ಅಪರೂಪ.

ಏನೂ ವೆಚ್ಚವಿಲ್ಲದೆ ಸಂಗೀತದಿಂದ ಆನಂದವನ್ನು ಹೊಂದಬಹುದು. ಶ್ರೀಮಂತರಿಗೆ ಮಾತ್ರ ಇದು ಸುಖಸಾಧನವಾಗಿರುತ್ತದೆಂತಲ್ಲ; ಅದು ಬಡಬಗ್ಗರ ಸುಖಸಮಾಧಾನಗಳನ್ನು ಕೂಡ ಹೆಚ್ಚಿಸುತ್ತಲಿದೆ.

---

# ಅಷ್ಟಮಾಧ್ಯಾಯ

## ಸೃಷ್ಟಿಸೌಂದರ್ಯ.

हरिणचरणक्षुण्णोपान्ताः सशाद्वलनिर्झराः
कुसुमललितैर्विष्वग्वातैस्तरंगितपादपाः ॥
विविधविहगश्रेणी चित्रस्वनप्रतिनादिता ।
मनसि न मुदंदध्युः केषां शिवा वनभूवयः ॥

(ಯಾವ ಸ್ಥಳದಲ್ಲಿ ಹಸರು ಮುರಿಯುವ ಹುಲ್ಲು ಬೆಳೆದದೆಯೋ, ಸುತ್ತಲೂ ಸುಂದರವಾದ ಝರಿಗಳು ಹರಿಯುತ್ತವೆಯೋ, ಸಮೀಪದಲ್ಲಿ ಹರಿಣಗಳು ಸಂಚರಿಸುತ್ತವೆಯೋ, ಹೂಗಳ ಸಂಸರ್ಗದಿಂದ ವಾಯುವು ಸುಗಂಧವುಳ್ಳದ್ದಾಗಿದೆಯೋ, ಗಾಳಿಯಿಂದ ಗಿಡಗಳು ಅಲುಗಾಡಹತ್ತಿವೆಯೋ, ಅನೇಕ ಜಾತಿಯ ಪಕ್ಷಿಗಳ ಮಂಜುಳ ಗಾನದಿಂದ ವನವೆಲ್ಲ ನಾದಮಯವಾಗಿದೆಯೋ, ಅಂಥ ವನಪ್ರದೇಶವನ್ನು ನೋಡಿ ಯಾರಿಗೆ ತಾನೇ ಆನಂದವಾಗದೆ ಇರದು?)

ಈ ಸೃಷ್ಟಿಯು ಎಲ್ಲ ಪ್ರಕಾರದಿಂದ ಸುಂದರವಾದರೂ ಕೆಲವರಿಗೆ ಆ ಸೌಂದರ್ಯದ ಜ್ಞಾನವೇ ಆಗುವುದಿಲ್ಲ. ಹಿಂದಿನ ಒಂದೆರಡು ಅಧ್ಯಾಯಗಳಲ್ಲಿ ಸೃಷ್ಟಿಸೌಂದರ್ಯದ ವಿಷಯವಾಗಿ ಅಲ್ಲಲ್ಲಿಗೆ ಅಲ್ಪಸ್ವಲ್ಪ ವಿಚಾರಮಾಡಿರುತ್ತದೆ. ಸಂಸಾರದಲ್ಲಿ ಸುಖವನ್ನೂ ಆನಂದವನ್ನೂ ಉಂಟುಮಾಡುವಂಥ ಸುಖಸಾಧನಗಳಲ್ಲಿ ಸೃಷ್ಟಿಸೌಂದರ್ಯವು ಒಂದಾದುದರಿಂದ ಅದರ ವಿಷಯವಾಗಿ ವಿಸ್ತೃತವಾದ ವಿವೇಚನವನ್ನು ಮಾಡುವುದು ಅವಶ್ಯವು.

ನಾವು ಸೃಷ್ಟಿಯ ಕಡೆಗೆ ಕಣ್ಣೆತ್ತಿ ನೋಡಿದ ಹೊರತು ನಮಗೆ ಸೃಷ್ಟಿಸೌಂದರ್ಯದ ಜ್ಞಾನವೂ ಆಗದು; ಅದರಿಂದ ಆನಂದವೂ ಆಗದು. ನೋಡಿದ ಮಾತ್ರಕ್ಕೆ ಸೌಂದರ್ಯದ ಪೂರ್ಣ ಜ್ಞಾನವಾಗದಿದ್ದರೂ

ಕಣ್ಣುಗಳಿದ್ದವರು ಕಣ್ಮುಚ್ಚಿಕೊಂಡು ಕೂಡ್ರುವುದು ಸರ್ವಥಾ ತಪ್ಪು. ಎಷ್ಟೋ ಜನರು ಜಗತ್ತಿನಲ್ಲಿದ್ದರೂ ಕುರುಡರಂತೆ ಸಂಚರಿಸುತ್ತಿರುತ್ತಾರೆ.

ಯಾವನು ತನ್ನ ಸುತ್ತಲಿನ ವಸ್ತುಗಳ ಕಡೆಗೆ ಲಕ್ಷ್ಯಪೂರ್ವಕವಾಗಿ ಅವಲೋಕನ ಮಾಡುತ್ತಾನೋ ಅವನಿಗೆ ವಿಧವಿಧದ ಶೋಭೆಯು ಕಂಡು-ಬರುವುದು. ಯಾಕೆಂದರೆ ಸೃಷ್ಟಿಸೌಂದರ್ಯವು ಕ್ಷಣಕ್ಕೊಮ್ಮೆ ಭಿನ್ನ-ವಾಗುತ್ತದೆ ಲತಾಪುಷ್ಪಗಳಿಂದ ಮಂಡಿತವಾದ ಉದ್ಯಾನಗಳಲ್ಲಾಗಲಿ, ಸಸ್ಯಪೂರ್ಣವಾದ ಕ್ಷೇತ್ರಗಳಲ್ಲಾಗಲಿ ಕೂತು ಸುತ್ತಲೂ ಅವಲೋಕನ ಮಾಡಿದರೆ ಆನಂದವಾಗದೆ ಇರದು. ಸೃಷ್ಟಿಯಲ್ಲಿ ಪ್ರತಿಯೊಂದು ಗಳಿ-ಗೆಗೆ ಹೊಸ ಶೋಭೆಯು ದೃಷ್ಟಿಗೆ ಬೀಳುವುದು. ಆಕಾಶದಲ್ಲಿ ಮೋಡಗಳು ಅತ್ತಿಂದಿತ್ತ ಇತ್ತಿಂದತ್ತ ಸಂಚಾರಮಾಡುತ್ತವೆ. ರಾತ್ರಿಯಲ್ಲಿ ಆಹ್ಲಾದಕರ-ವಾದ ಬೆಳದಿಂಗಳು ಹಬ್ಬಿರುವುದು; ತೇಜಃಪುಂಜವಾದ ನಕ್ಷತ್ರಮಾಲಿ-ಗಳು ಹೊಳೆಯುತ್ತಿರುವುವು.

ಸುಂದರವಾದ ವಸ್ತುಗಳ ದರ್ಶನದಿಂದ ಆನಂದವಾಗುವುದು ಸ್ವಾಭಾ-ವಿಕವು. ಆದರೂ ಸೃಷ್ಟಿಸೌಂದರ್ಯವನ್ನು ನೋಡಿ ಆಹ್ಲಾದ ಹೊಂದ-ದವರು ಅನೇಕರಿರುವರು. ಅಂಥವರಿಗೆ ಸೌಂದರ್ಯದರ್ಶನದಿಂದ ಆನಂದವಾಗುವುದಿಲ್ಲ. ಯಾಕೆಂದರೆ ಅವರಲ್ಲಿ ಈ ಮನೋಧರ್ಮವೇ ಶೂನ್ಯವಾಗಿರುವುದು.

ಸೂರ್ಯೋದಯದ ಇಲ್ಲವೆ ಸೂರ್ಯಾಸ್ತದ ಶೋಭೆಯಿಂದಾಗಲಿ, ಶಾಂತವಾದ ಸಮುದ್ರದ ವೈಭವದಿಂದಾಗಲಿ, ಕ್ಷುಬ್ಧವಾದ ಸಾಗರದ ಪ್ರಚಂಡ ಸ್ವರೂಪದಿಂದಾಗಲಿ, ಪಕ್ಷಿಗಳ ಗಾನದಿಂದ ನಾದಮಯವಾದ ಉದ್ಯಾನದಿಂದಾಗಲಿ, ಝುಂಝಾವಾತದಿಂದ ಪ್ರಕಂಪಿತವಾದ ಅರಣ್ಯ-ವೃಕ್ಷಗಳಿಂದಾಗಲಿ ಮನಸ್ಸಿಗೆ ಆನಂದವಾಗದೆ ಇರದು. ಆದರೂ ಅವು-ಗಳಿಂದ ಆಹ್ಲಾದವನ್ನು ಹೊಂದದ ಅರಸಿಕ ಜನರನ್ನು ಯಾವ ಪ್ರಾಣಿ-ಕೋಟಿಯಲ್ಲಿ ಸೇರಿಸಬೇಕೆಂಬುದು ತಿಳಿಯದು.

ವಸಂತಋತುವು ಬಹು ರಮಣೀಯವಾಗಿರುವುದರಿಂದ ಎಲ್ಲರಿಗೂ ಪ್ರಿಯವಾಗಿರುವುದು.

**विकासितसहकारभारहारि-परिमल पुंजितगुंजितद्विरेफः ।**
**नवकिसलयचारु चामरश्रीर्हरतिमुनेरपि मानसं वसन्तः ॥**

(ಆಮ್ರಾದಿವೃಕ್ಷಗಳಿಗೆ ಹೂಗಳು ಬಂದು ಎಲ್ಲ ಕಡೆಗೂ ಸುಗಂಧವು ಬೀರುವುದರಿಂದ ಭೃಂಗಗಳ ಸಮುದಾಯವು ಅವುಗಳಿಗೆ ಲುಬ್ಧವಾಗಿ ಮಂಜುಳ ಗುಂಜಾರವವನ್ನು ಮಾಡಹತ್ತುತ್ತವೆ. ಗಿಡಗಳಿಗೆಲ್ಲ ಚಿಗುರೆಲೆಗಳು ಒಡೆಯುವುದರಿಂದ ಅವು ಚಾಮರಗಳಂತೆ ಕಾಣಿಸುತ್ತವೆ. ಇಂಥ ವಸಂತಋತುವು ವಿರಕ್ತಜನರ ಮನಸ್ಸನ್ನು ಸಹ ಆಕರ್ಷಿಸುವುದು.)

ಚೆನ್ನಬಸವಪುರಾಣದಲ್ಲಿ ವಿರೂಪಾಕ್ಷ ಪಂಡಿತನು:—

ಎಳದಳಿರ ಕೆಂಪು, ಪೂಗಳ ಕಂಪು ಕೋಕಿಲಂ ।
ಗಳಸರದನುಣ್ಪು ತೆಂಗಾಳಿಯ ಪದಂಪು ಗಿಳಿ ।
ಗಳರವದಸೊಂಪು ತುಂಬಿಯಗಾನದಿಂಪು ನಾನಾಫಲಾವಳಿಯಬಿಣ್ಪು ॥
ತಿಳಿಗೊಳದ ತಂಪು ವಿರಹಿಯ ಕೈಕದಂಪು ಸುಖಿ ।
ಗಳ ಮನದ ಪೆಂಪು ಬನಗಳ ಗುಂಪು ಗುಂಪು ಸಂ ।
ಗಳಿಸಿತೆಲ್ಲೆಲ್ಲಿಯುಂ ಚೈತ್ರಾಗಮಂಬರಲ್ ಪೇಳ್ವುದೇನಚ್ಚರಿಯುಸು ॥

ಎಂಬ ಕವಿತೆಯಲ್ಲಿ ವಸಂತಾಗಮನವನ್ನು ವರ್ಣಿಸಿದ್ದಾನೆ.

**सुभगसलिलावगाहाः पाटलसंसर्गसुरभिवनवाताः ।**
**प्रच्छायसुलभनिद्रा दिवसाः परिणामरमणीयाः ॥**

—शाकुन्तलम्.

(ವಸಂತಋತುವಿನಲ್ಲಿ ತಣ್ಣೀರಿನ ಸ್ನಾನದಿಂದ ಮನಸ್ಸಿಗೆ ಸೊಗಸಾಗುವುದು; ವನಗಳಿಂದ ಬೀಸುವ ಗಾಳಿಯು ಪಾಟಲಹೂಗಳ ಸುಗಂಧವನ್ನು ಎಲ್ಲ ಕಡೆಗೂ ಬೀರುವುದು; ಗಿಡಗಳ ನೆಳಲಿನಲ್ಲಿ ಬಹು ಬೇಗನೆ ನಿದ್ದೆಹತ್ತುವುದು; ಸಂಜೆಯಾದ ಹಾಗೆ ದಿವಸಗಳು ಮನೋಹರವಾಗುವುವು.)

“ಹೂಗಳು ಮನುಷ್ಯರ ಸುಖದ ದೆಶೆಯಿಂದ ನಿರ್ಮಿತವಾಗಿವೆ. ಚಿಕ್ಕ ಮಕ್ಕಳು ಹೂಗಳ ಮೇಲೆ ಎಷ್ಟು ಪ್ರೀತಿಮಾಡುವುವು! ಬಡವರು ಸಹ ತಮ್ಮ ಗುಡಿಸಲುಗಳ ಸುತ್ತಲೂ ಹೂಗಿಡಗಳನ್ನು ಹಚ್ಚಿರುವರು. ಸೊಗಸುಗಾರರೂ ಹುಂಬರೂ ಮಾತ್ರ ಹೂಗಳನ್ನು ಹರಿದು ಹಾಳು-

ಮಾಡುವರು. ಪಟ್ಟಣಿಗರು ಸಹ ಮನೆಗಳ ಗವಾಕ್ಷಗಳಲ್ಲಿ ಪುಷ್ಪ-ಭಾಜನಗಳನ್ನಿಟ್ಟು ಆನಂದವನ್ನು ಹೊಂದುವರು" —ರಸ್ಕಿನ್.

ಪ್ರತಿಯೊಂದು ಋತುವಿನಲ್ಲಿ ಹೂಬಿಡುವ ವೃಕ್ಷಗಳೂ, ಲತೆಗಳೂ ಅನೇಕವಾಗಿರುವುವು. ಮಲ್ಲಿಗೆ, ಗುಲಾಬಿ ಮೊದಲಾದ ಗಿಡಗಳು ವರ್ಷದಲ್ಲೆಲ್ಲ ಹೂ ಬಿಡುತ್ತವೆ. ವಸಂತಋತುವಿನಲ್ಲಿ ಬಕುಲ, ಸಂಪಿಗೆ ಮೊದಲಾದ ಪುಷ್ಪಗಳು ತಮ್ಮ ಸುವಾಸನೆಯನ್ನು ಬೀರುತ್ತವೆ.

ಪುಷ್ಪಗಳು ನೇತ್ರಾನಂದವನ್ನುಂಟುಮಾಡುವಂತೆ ವೃಕ್ಷವಲ್ಲಿಗಳ ಎಲೆ-ಗಳಾದರೂ ಮಾನವ ಪ್ರಾಣಿಗಳ ಆನಂದವನ್ನು ಹೆಚ್ಚಿಸುವುವು ಗಿಡಗಳಿಗೆ ಹೂಗಳಾಗಿ ಉದುರಿದರೂ ಹಸರು ಎಲೆಗಳಿಂದ ಅವುಗಳ ಸೊಬಗು ಕಡಿಮೆಯಾಗುವುದಿಲ್ಲ.

ಉಪವನಗಳ ಸೃಷ್ಟಿಸೌಂದರ್ಯದ ವರ್ಣನೆಯು ಕಾವ್ಯಗಳಲ್ಲಿ ಕಂಡುಬರುವುದು. ಅದರಲ್ಲಿಯ ಒಂದು ಪದ್ಯವನ್ನು ಕೆಳಗೆ ಕೊಟ್ಟಿದ್ದೇವೆ.

> ಪೊಸ ತೆಂಗು ಕೌಂಗು ನೇರಿಳೆ ಕಿತ್ತಳೆಗಳುಂ ಶೋಭಿಸುವಂಚೆಕೊಂಚೆ ಪೂವಂಡುಗಿಳಿವಿಂಡುರಂ ।
> ಜಿಸುವ ಕಾದಲರೆಲರ್ ಸವಿಮಾವು ಪೂವು ಬಕುಳಂ ಮುಕುಳ ಪ್ಪೊಪ್ಪುವ ಕೊಳಂ ॥
> ಮಿಸುಪ ನಳಿನಂ ಪುಳಿನವುಂ ತುಂಬಿತುಂಬಿ ರಾ । ,
> ಜಿಸುವಶೋಕಂಕೋಕವಾದಾಡಿಮಂಪಿಮಂದೆಸೆಗೆಂಪು ಸೊಂಪು ಪೆಂಪಿಂದಾಪ್ರ-ರೋಪವನ ಮೆಸೆದಿರ್ದುದೇನೆಂಬೆನು ॥ —ಚೆನ್ನಬಸವಪುರಾಣ.

ವಸಂತಋತುವಿನಲ್ಲಿ ಆಮ್ರವೃಕ್ಷದ ಶೋಭೆಯು ಬಹು ರಮಣೀಯ-ವಾಗಿರುವುದು. ಪಚ್ಚದಂತೆ ಹಚ್ಚಗೆ ಹೊಳೆಯುವ ತಳಿರುಗಳೂ, ಪ್ರತಿಯೊಂದು ಸಣ್ಣದೊಡ್ಡ ಟೊಂಗೆಗಳ ತುದಿಯಲ್ಲಿ ಶೋಭಿಸುವ ಹೂಗಳ ಗೊಂಚಲುಗಳೂ, ಗಿಡದ ದಟ್ಟವಾದ ವರ್ತುಲಾಕೃತಿಯೂ ಇವುಗಳಿಂದ ನೋಡುವವರಿಗೆ ಆನಂದವಾಗುವುದಲ್ಲದೆ ಮಧುರವಾದ ಸುವಾಸನೆ-ಯಿಂದಲೂ, ನಿಬಿಡವಾದ ಛಾಯೆಯಿಂದಲೂ ಅದು ಅನುಪಮ-ಸುಖವನ್ನುಂಟುಮಾಡುತ್ತದೆ. ತೆಂಗಿನ ಗಿಡವು ಬಹು ರಮಣೀಯ-ವಾಗಿರುವುದು. ಈ ಗಿಡವು ಉದ್ದವಾಗಿದ್ದು ಸರಳವಾಗಿ ಬೆಳೆಯುತ್ತದೆ.

ಗರಿಗಳು ಚವರಿಗಳಂತೆ ಗಾಳಿಯಲ್ಲಿ ಬೀಸುತ್ತಿರುತ್ತವೆ. ಗರಿಗಳ ಬಡ್ಡಿ-ಗಳಲ್ಲಿ ಕಾಯಿಗಳ ಗೊಂಚಲುಗಳು ಜೋತಾಡುತ್ತಿರುತ್ತವೆ. ತೆಂಗಿನ ಬನಗಳಲ್ಲಿ ಹೊಕ್ಕಕೂಡಲೆ ಮನಸ್ಸಿಗೆ ಉಂಟಾಗುವ ಉಲ್ಲಾಸವನ್ನು ವರ್ಣಿಸುವುದು ಅಸಾಧ್ಯವು. ಬಕುಲ ಗಿಡದ ವಿಸ್ತಾರವೂ, ಅದರ ಸುವಾಸಿಕಹೂಗಳೂ, ಸುಂದರವಾದ ಕೆಂಬಣ್ಣದ ಹಣ್ಣುಗಳೂ, ಅಶೋಕ ವೃಕ್ಷದ ದಟ್ಟನೆಳಲೂ, ಆಲದಗಿಡದ ವಿಸ್ತಾರವೂ, ಅದರ ಸುಖಕರ ಛಾಯೆಯೂ, ಬಾಳೇಗಿಡದ ಉದ್ದವಾದ ಎಲೆಗಳೂ, ಅದರ ಹೂಗಳೂ, ಗೊನೆಗಳೂ, ಕೋಲುಸಂಪಿಗೆಯ ಹೊಂಬಣ್ಣದ ಸುವಾಸಿಕಪುಷ್ಪಗಳೂ, ನೋಡುವವರಿಗೆ ಆಹ್ಲಾದವನ್ನುಂಟುಮಾಡುವುವಲ್ಲದೆ ದೇವರ ಸೃಷ್ಟಿ-ಚಮತ್ಕಾರದ ಬಗ್ಗೆ ಮನಸ್ಸಿನಲ್ಲಿ ವಿಸ್ಮಯವನ್ನುಂಟುಮಾಡುತ್ತವೆ. ದೊಡ್ಡ-ಗಿಡಗಳಿಂದ ವನಕ್ಕೆ ಶೋಭೆಯುಂಟಾದಂತೆ ಕ್ಷುದ್ರವಾದ ಬಳ್ಳಿಗಳಿಂದ ಸಹ ಸೌಂದರ್ಯವುಂಟಾಗುತ್ತದೆ.

ಶೀತಕಟಿಬಂಧದಲ್ಲಿದ್ದ ಅರಣ್ಯಗಳೂ, ಉದ್ಯಾನಗಳೂ, ವಸಂತ-ಋತುವಿನಲ್ಲಿ ಬಹು ಸುಂದರವಾಗಿ ಕಾಣುತ್ತವೆ. ಆದರೆ ಚಳಿಗಾಲದಲ್ಲಿ ಎಲೆಗಳು ಉದುರಿ ಟೊಂಗೆಗಳಷ್ಟೇ ಉಳಿದಿರುವುದರಿಂದ ವನಗಳು ಹಾಳಾದ ಪಟ್ಟಣಗಳಂತೆ ಕಾಣುವುವು. ಆದರೆ ಹಿಮವು ಅವುಗಳ ಮೇಲೆ ಬಿದ್ದ ಮೇಲೆ ವನವೆಲ್ಲ ಬೆಳ್ಳಿಯ ತಗಡಿನಿಂದ ಆಚ್ಛಾದಿತವಾದಂತೆ ಹೊಳೆಯುತ್ತಿರುತ್ತದೆ.

ನೀರಿನ ನೆರೆಯಲ್ಲಿ ಗಿಡಗಳೂ, ಹುಲ್ಲೂ ಸಮೃದ್ಧವಾಗಿ ಬೆಳೆಯು-ವುವಲ್ಲದೆ ಜಲಸಂಚಯಕ್ಕೆ ಒಂದು ಪ್ರಕಾರದ ಶೋಭೆಯನ್ನುಂಟು-ಮಾಡುವುವು. ಆದುದರಿಂದ ವನದೊಳಗೆ ಜಲಸಂಚಯವಿಲ್ಲದಿದ್ದರೆ ಅದು ಗೃಹಿಣಿಯಿಲ್ಲದ ಗೃಹದಂತೆ ಹಾಳು ಸುರಿಯುವುದು. ಜಲಾ-ಶಯದಿಂದ ಎಂಥ ಭೂಪ್ರದೇಶಕ್ಕಾದರೂ ಶೋಭೆಯುಂಟಾಗುವುದು. ಆಕಾಶಕ್ಕೆ ಮೋಡಗಳಿಂದ, ಅರಣ್ಯಕ್ಕೆ ನದಿಯಿಂದ, ಉದ್ಯಾನಕ್ಕೆ ಸರೋ-ವರದಿಂದ ಸೊಬಗುಂಟಾಗುವುದು. ನೀರು ವನಸ್ಪತಿಗಳ ಜೀವನ-ವಾದಂತೆ, ಪ್ರಾಣಿಗಳ ಜೀವನವೂ ಆಗಿರುತ್ತದೆ. ಶ್ರಮದ ಕೆಲಸಮಾಡಿ

ನದಿಯತೀರದಲ್ಲಾಗಲಿ, ಸಮುದ್ರದ ದಂಡೆಯಲ್ಲಾಗಲಿ, ಸರೋವರದ ಮೇ-
ಲಾಗಲಿ ತಿರುಗಾಡಿದರೆ ಉತ್ಸಾಹವುಂಟಾಗುವುದು.

ಸಮುದ್ರದ ವಲಯವು ಇಂಗ್ಲಂಡದೇಶದ ಸುತ್ತಲೂ ಹಬ್ಬಿಕೊಂಡಿರು-
ವುದರಿಂದ ಅದು ಎಷ್ಟೋ ಆಂಗ್ಲನಿವಾಸಿಗಳಿಗೆ ಉಪಜೀವನದ ಮಾರ್ಗ-
ವಾಗಿದೆ. ಹಲವರು ಮೀನುಗಾರರಾಗಿಯೂ, ಕೆಲವರು ಹಡಗಗಳಲ್ಲಿ
ಅಂಬಿಗರಾಗಿಯೂ, ಮತ್ತೆ ಕೆಲವರು ಹಡಗಪಡೆಗಳಲ್ಲಿ ಸೈನಿಕರಾಗಿಯೂ
ತಮ್ಮ ಉಪಜೀವನವನ್ನು ಸಾಗಿಸುವರು. ಆಂಗ್ಲೇಯರಿಗೆಲ್ಲ ಸಮುದ್ರ-
ವನ್ನು ನೋಡಿ ಆನಂದವೂ, ಉತ್ಸಾಹವೂ ಆಗುತ್ತವೆಂದು ಎಲ್ಲ ಆಂಗ್ಲ-
ಗ್ರಂಥಕಾರರೂ ಬರೆದಿದ್ದಾರೆ. ಸಮುದ್ರದ ವೈಭವವು ಆಕಾಶದಷ್ಟೇ
ಅಗಾಧವಾಗಿರುವುದು. ಮೋಡಗಳು ಕ್ಷಣಕ್ಕೊಮ್ಮೆ ತಮ್ಮ ಸ್ಥಳವನ್ನು
ಬದಲಿಸುತ್ತಿರುವುದರಿಂದ ಆಕಾಶದ ಬಣ್ಣವು ಬದಲಾಗುತ್ತಿರುತ್ತದೆ. ಆ
ಮೋಡಗಳ ಮೇಲೆ ಸೂರ್ಯನ ಕಿರಣಗಳು ಬೀಳುವುದರಿಂದ ನಾನಾ
ಪ್ರಕಾರದ ಶೋಭೆಯುಂಟಾಗುತ್ತದೆ. ಅದರಂತೆ ಸಮುದ್ರದ ಶೋಭೆ-
ಯಾದರೂ ಮೇಲಿಂದ ಮೇಲೆ ಭಿನ್ನವಾಗುತ್ತಿರುತ್ತದೆ. ಪ್ರಾತಃಕಾಲ-
ದಲ್ಲಿ ಸೂರ್ಯೋದಯವಾದ ಕೂಡಲೆ ಸಮುದ್ರವಿಸ್ತಾರವು ಪ್ರಕಾಶದಿಂದ
ಹೊಳೆಯಹತ್ತುತ್ತದೆ. ಮತ್ತು ನೀರು ಅಚ್ಚನೀಲಿ ವರ್ಣದ್ದಾಗಿರುತ್ತದೆ.
ಸೂರ್ಯನು ಮೇಲಕ್ಕೇರುತ್ತ ಹೋದಹಾಗೆ ಸಮುದ್ರದ ಪ್ರಕಾಶವು
ಕಡಿಮೆಯಾಗಹತ್ತುವುದು. ಆಕಾಶದಲ್ಲಿ ಮೋಡಗಳು ಹಿಂಜಿದ ಅರಳೆ-
ಯಂತೆ ಅಲ್ಲಲ್ಲಿ ಕಂಡುಬರುತ್ತವೆ. ಅಷ್ಟರೊಳಗೆ ಬಿರುಗಾಳಿಯು ಬಿಟ್ಟು ಹನಿ-
ಗಳು ಉದುರಹತ್ತುತ್ತವೆ. ಸಮುದ್ರವು ಉಕ್ಕೇರಹತ್ತುತ್ತದೆ. ತೆರೆಗಳು
ಅಬ್ಬರದಿಂದ ದಂಡೆಯ ಮೇಲೆ ಅಪ್ಪಳಿಸಹತ್ತುತ್ತವೆ. ದೂರದಲ್ಲಿ ಕಾಣು-
ತ್ತಿದ್ದ ಗುಡ್ಡಗಳು ಕಾಣದಂತಾಗುತ್ತವೆ. ಸಮುದ್ರವು ಕಪ್ಪಗೆ ಹೊಳೆಯ-
ಹತ್ತುತ್ತದೆ. ಮೇಲೆ ವರ್ಣನೆ ಮಾಡಿದ ಹೆಚ್ಚು ಕಡಿಮೆಗಳೆಲ್ಲ ಉಂಟಾಗಲಿಕ್ಕೆ
ಕೆಲವು ತಾಸುಗಳು ಮಾತ್ರ ಸಾಕು. ಇದಲ್ಲದೆ ಪ್ರತಿದಿವಸ ಏನಾದರೂ
ವಿಲಕ್ಷಣ ಪ್ರಕಾರವು ಆಗುತ್ತಿರುತ್ತದೆ. ಒಂದು ದಿನ ಸಮುದ್ರವು ಶಾಂತ-
ವಿದ್ದರೆ ಮರುದಿನವೇ ಅದು ಕ್ಷುಬ್ಧವಾಗುತ್ತದೆ. ಸರೋವರಗಳ ಸ್ವರೂಪವು

ಸಮುದ್ರಗಳಷ್ಟು ಭವ್ಯವಾಗದಿದ್ದರೂ ಅವು ಸಮುದ್ರಗಳಿಗಿಂತ ಮನೋಹರ-ವಾಗಿರುವುವು. ಸಮುದ್ರದ ದಂಡೆಯೆಲ್ಲ ಬಹುತರವಾಗಿ ಬೈಲೇ ಇರುತ್ತದೆ.

ಉಷ್ಣಕಟಿಬಂಧದಲ್ಲಿಯ ಅರಣ್ಯಗಳ ವೈಭವವು ವಿಲಕ್ಷಣವಾಗಿರು-ವುದು. ಅವುಗಳನ್ನು ನೋಡಿ ಮನಸ್ಸಿನಲ್ಲಿ ಭಯಭೀತಿಯುಂಟಾಗು-ತ್ತದೆ. ಗಿಡಗಳು ಗಗನಚುಂಬಿಗಳಾಗಿ ಬೆಳೆದು ನಿಬಿಡವಾದ ಛಾಯೆ-ಯನ್ನೀಯುತ್ತವೆ. ಅವುಗಳಿಗೆ ಬಹಳ ಎತ್ತರದ ವರೆಗೆ ಟೊಂಗೆಗಳೂ ಎಲೆಗಳೂ ಇರುವುದಿಲ್ಲ. ಆದರೆ ಅವುಗಳ ಸುತ್ತಲೂ ಹಬ್ಬಿಕೊಂಡಿರುವ ಅಸಂಖ್ಯ ಬಳ್ಳಿಗಳಿಂದ ಗಿಡಗಳ ಭಯಂಕರ ಸ್ವರೂಪವು ಕೆಲಮಟ್ಟಿಗೆ ಮಾಜಿಹೋಗುತ್ತದೆ.

ಆದರೆ ಸರೋವರ ತೀರದ ಮೇಲೆ ಹುಲ್ಲೂ, ಗಿಡಗಳೂ ದೃಷ್ಟಿಗೆ ಬೀಳುತ್ತವೆ. ಎಷ್ಟೋ ಕಡೆಯಲ್ಲಿ ಗಿಡಗಳ ಟೊಂಗೆಗಳು ನೀರಿನ ಮೇಲೆ ಅಲೆದಾಡುತ್ತಿರುತ್ತವೆ. ಕೆಲವೆಡೆಯಲ್ಲಿ ಹಸರು ನಡುಗಡ್ಡೆಗಳು ಇರು-ತ್ತವೆ. ನೀರಿನಲ್ಲಿ ಸುತ್ತಲಿನ ಭೂಪ್ರದೇಶದ ಪ್ರತಿಬಿಂಬವು ಸ್ಪಷ್ಟವಾಗಿ ಕಾಣುತ್ತಿರುತ್ತದೆ.

ನೀರಿನಿಂದಲೇ ಇಂದ್ರಧನುಷ್ಯದ ಉತ್ಪತ್ತಿಯು. ಇಹಲೋಕದ ಎಲ್ಲ ಸೃಷ್ಟಿಚಮತ್ಕಾರಗಳಲ್ಲಿ ಇದರಷ್ಟು ಶೋಭೆಯುಳ್ಳದ್ದು ಯಾವುದೂ ಇಲ್ಲ. ಪೃಥ್ವಿಯಲ್ಲಿ ಬೇರೆ ಬೇರೆ ಪದಾರ್ಥಗಳಿಗೆ ಬೇರೆ ಬೇರೆ ಬಣ್ಣ ಗಳಿರುತ್ತವೆ. ಆದರೆ ಇಂದ್ರಧನುಷ್ಯವು ಎಲ್ಲ ಬಣ್ಣಗಳ ತವರಮನೆ-ಯೆಂದರೂ ಸಲ್ಲುವುದು. ರಮಣೀಯವಾದ ಇಂದ್ರಧನುವಿನ ಆರಂಭ-ದಲ್ಲಿ ಕೆಂಬಣ್ಣವೂ, ಕಿತ್ತಳೆಬಣ್ಣವೂ, ಆ ಮೇಲೆ ಶುದ್ಧವಾದ ಹಳದೀ ವರ್ಣವೂ, ದಿವ್ಯವಾದ ಅಚ್ಚಹಸರೂ, ರಮ್ಯವಾದ ಶ್ಯಾಮವೂ, ನೀಲಿ-ಬಣ್ಣವೂ, ಶಾಂತವಾದ ಊದೀವರ್ಣವೂ ಹೊಳೆಯುತ್ತಿರುತ್ತವೆ. ಬಣ್ಣ-ಗಳ ಜ್ಞಾನವು ನಮಗಿರದಿದ್ದರೆ ಪದಾರ್ಥಗಳ ಯಥಾರ್ಥಜ್ಞಾನವು ನಮಗೆ ಆಗುತ್ತಿದ್ದಿಲ್ಲ. ಸೃಷ್ಟಿಸೌಂದರ್ಯದ ಯಥಾಸ್ಥಿತಕಲ್ಪನೆಯು ನಮಗೆ ಆಗಲಿಕ್ಕೆ ಈ ಜ್ಞಾನವು ಅವಶ್ಯವೆಂಬುದು ಕಂಡುಬರುವುದು. ಸೌಂದರ್ಯವೆಂದರೇನು ಎಂದು ಯಾರಾದರೂ ನಮ್ಮನ್ನು ಕೇಳಿದರೆ,

ನಾವು ನೋಡಿದ ರಮಣೀಯವಾದ ನದೀಸರೋವರಗಳೂ, ಪರ್ವತ-ಶಿಖರಗಳೂ, ಅರಣ್ಯವೃಕ್ಷಗಳೂ, ವನೋದ್ಯಾನಗಳೂ, ಪಕ್ಷಿಕೀಟಕ-ಗಳೂ, ಎಲೆಹೂಗಳೂ, ಗ್ರಹನಕ್ಷತ್ರಗಳೂ ನಮ್ಮ ನೆನಪಿಗೆ ಬರುವುವು. ಇವೆಲ್ಲವುಗಳಿಂದ ಸೌಂದರ್ಯದ ಕಲ್ಪನೆಯು ನಮಗಾಗಿದೆ ಎಂದು ಹೇಳ-ಬಲ್ಲೆವು.

ಶ್ರವಣೇಂದ್ರಿಯವಿರದಿದ್ದರೆ ಪಕ್ಷಿಗಳ ಮಂಜುಳ ಗಾನ, ಚಿತ್ತವನ್ನು ಆಕರ್ಷಿಸುವ ಸಂಗೀತ, ಪ್ರಿಯ ಜನರ, ಹಾಗೂ ಮಿತ್ರರ ಆಲಾಪ ಮೊದಲಾದುವುಗಳಿಂದಾಗತಕ್ಕ ಆನಂದವೇ ನಮಗಾಗುತ್ತಿದ್ದಿಲ್ಲ.

ಪರ್ವತಗಳು ಪೃಥ್ವಿಯಲ್ಲಿಯ ಪ್ರಚಂಡ ದೇವಾಲಯಗಳಂತೆ ಇರು-ತ್ತವೆ. ಬಂಡೆಗಲ್ಲುಗಳು ಮುಖ್ಯ ದ್ವಾರಗಳಂತೆ, ಮೋಡಗಳು ಚಪ್ಪರ-ದಂತೆ, ನೀರಿನ ಪ್ರವಾಹಗಳ ಗರ್ಜನೆಯು ಗುಡಿಗಳಲ್ಲಿಯ ಕೀರ್ತನದಂತೆ, ಬರ್ಫವು ಸ್ಥಂಡಿಲದಂತೆ ಒಪ್ಪುತ್ತವೆಂದು ರಸ್ಕಿನ್ನನು ಬರೆದಿದ್ದಾನೆ.

ಆಕಾಶದ ಶೋಭೆಯು ಪ್ರತಿಕ್ಷಣಕ್ಕೊಮ್ಮೆ ಭಿನ್ನವಾಗುತ್ತಿರುತ್ತದೆ. ಸಂಧ್ಯಾಕಾಲದ ಸೌಂದರ್ಯವು ಇಳಿ ಹೊತ್ತಿನಲ್ಲಿರುವುದಿಲ್ಲ. ರಾತ್ರಿಯಲ್ಲಿದ್ದ ಸೊಬಗು ಮಧ್ಯಾಹ್ನದಲ್ಲಿರುವುದಿಲ್ಲ. ಮೋಡಗಳ ಓಡಾಟದಿಂದಲೂ, ಗ್ರಹನಕ್ಷತ್ರಗಳ ಉದಯಾಸ್ತಗಳಿಂದಲೂ ಆಕಾಶವನ್ನು ನೋಡುವವರಿಗೆ ಎಂದೂ ಬೇಸರವಾಗದು.

ಆಕಾಶದಲ್ಲಿಯ ಅಸಂಖ್ಯ ನಕ್ಷತ್ರಗಳನ್ನು ನೋಡಿಯೇ ಮನುಷ್ಯನು ಬೆರಗಾಗುತ್ತಾನೆ. ಆದರೆ ಅವುಗಳ ವಿಶಾಲವಾದ ಆಕಾರವೂ, ಅವು-ಗಳೊಳಗಿನ ಅಂತರವೂ ಅವನಿಗೆ ಗೊತ್ತಾದರೆ ಅವನಿಗೆ ಎಷ್ಟು ಆಶ್ಚರ್ಯ-ವಾದೀತು? ಸಮುದ್ರವು ಇಷ್ಟು ಆಳವಾದದ್ದೂ ವಿಸ್ತೃತವಾದದ್ದೂ ಇದ್ದು-ದರಿಂದ ಅದಕ್ಕೆ ಅಗಾಧವೆಂಬ ವಿಶೇಷಣವನ್ನು ಹಚ್ಚುವುದು ರೂಢ-ವಾಗಿದೆ. ಆದರೆ ಆಕಾಶಕ್ಕೂ ಸಮುದ್ರಕ್ಕೂ ಸರಿಹೋಲಿಸಿದರೆ ಆಕಾಶದ ಮುಂದೆ ಸಮುದ್ರವು ಕಃ ಪದಾರ್ಥ ಎಂಬಂತೆ ಕಾಣುತ್ತದೆ. ಗುರು, ಶನಿ ಮೊದಲಾದ ಗ್ರಹಗಳು ಪೃಥ್ವಿಗಿಂತ ಎಷ್ಟೋ ಪಟ್ಟು ದೊಡ್ಡವು. ಆದರೆ ಅವುಗಳನ್ನು ಸೂರ್ಯನಿಗೆ ಸರಿಹಚ್ಚಿದರೆ ಅವು ಅಣುಗಳಂತೆ ಕಾಣು-

ತ್ತವೆ. ಸೂರ್ಯನನ್ನು ನಕ್ಷತ್ರಮಾಲೆಗೆ ಸರಿಹಚ್ಚಿದರೆ ಅವನು ಆ ಮಾಲೆಯಲ್ಲಿ ಒಂದು ಬಿಂದುವಿನಂತೆ ಕಾಣುತ್ತಾನೆ. ಸೀರಿಯಸ್ ಎಂಬ ನಕ್ಷತ್ರವು ಸೂರ್ಯನಿಗಿಂತ ಸಾವಿರಾರು ಪಟ್ಟು ದೊಡ್ಡದೂ, ಲಕ್ಷಾವಧಿ ಪಟ್ಟು ದೂರವೂ ಇರುವುದೆಂದು ತಿಳಿಯುತ್ತದೆ. ಆಕಾಶದಲ್ಲಿ ಒಂದೇ ಸೂರ್ಯಮಾಲೆಯಿಲ್ಲ. ಅದರಂಥ ಅಸಂಖ್ಯ ಮಾಲೆಗಳು ಇರು-ವುವು. ಕೆಲವು ನಕ್ಷತ್ರಗಳು ಅತಿ ದೂರವಾಗಿರುವುದರಿಂದ ಸೆಕಂದಿಗೆ ೧ಲಕ್ಷ ೮೦ ಸಾವಿರ ಮೈಲು ವೇಗವುಳ್ಳ ಪ್ರಕಾಶವು ಅವುಗಳಿಂದ ಪೃಥ್ವಿಯು ವರೆಗೆ ಬರಲಿಕ್ಕೆ ಎಷ್ಟೋ ವರ್ಷಗಳು ಹತ್ತುವುವು. ಕೆಲವುಗಳ ಪ್ರಕಾಶವು ಇನ್ನೂ ವರೆಗೆ ಪೃಥ್ವಿಯನ್ನೇ ಮುಟ್ಟಲ್ಲ.

ಬೇರೆ ಬೇರೆ ಶಾಸ್ತ್ರಜರು ಅತ್ಯಗಾಧವಾದ ಹಾಗೂ ಅತಿ ಸೂಕ್ಷ್ಮ-ವಾದ ವಸ್ತುಗಳನ್ನು ನಿರೀಕ್ಷಿಸಿ ಅವುಗಳಲ್ಲಿದ್ದ ಸೌಂದರ್ಯವನ್ನು ಜನರಿಗೆ ತೋರ್ಪಡಿಸಿದ್ದಾರೆ. ಮನುಷ್ಯನ ಕಲ್ಪನಾಸೃಷ್ಟಿಗೂ ನಿಲುಕದಂಥ ಹೊಸ ಶೋಧಗಳನ್ನು ಶಾಸ್ತ್ರಜ್ಞರು ಮಾಡಿದ್ದಾರೆಂಬುದು ನಿಜವಾದರೂ ಸೃಷ್ಟಿ-ಯೊಳಗಿನ ಚಮತ್ಕಾರಗಳೆಲ್ಲವೂ ಮನುಷ್ಯನಿಗೆ ಗೊತ್ತಾಗಿಲ್ಲ. ಆದರೂ ಈ ವರೆಗೆ ಗೊತ್ತಾದ ಚಮತ್ಕಾರಗಳು ಚಿತ್ತಾಕರ್ಷಕವಾಗಿಯೂ ಆನಂದ ಪ್ರವಾಹದ ಉಗಮಸ್ಥಾನವಾಗಿಯೂ ಇರುವುವು. ಅವುಗಳ ಸಹಾಯ-ದಿಂದ ಸಂಸಾರದೊಳಗಿನ ಬಾಧೆಗಳನ್ನೂ ದುಃಖಗಳನ್ನೂ ಸಹಜವಾಗಿಯೇ ಮರೆತು ಮನುಷ್ಯನು ಸುಖಿಯಾಗಬಹುದು.

# ನವಮಾಧ್ಯಾಯ.

## ಸಂಸಾರಬಾಧೆಗಳು.

दुःखेष्वनुद्विग्नमनाः सुखेषु विगतस्पृहः ।
. . . . . . स्थितधीर्मुनिरुच्यते ॥

—भगवद्गीता.

ಹೆದರದೀ ತಾಪತ್ರಯಂಗಳ ।
ಪದದ ನಾನಾದುಃಖದಲಿ ನೆರೆ ।
ಮುದದಲಾಸಕ್ತಿಯನು ಮಾಡದೆ . . . . .
ಮುನೀಶ್ವರನು ತಾ ।
ವಿದುಗಳಿಂ ಸ್ಥಿರಬುದ್ಧಿಯೆನಿಸುವನೆಂದನಸುರಾರಿ ॥ —ನಾಗರಸ.

(ದುಃಖಗಳು ಬಂದಾಗ ನಿಶ್ಚಿಂತನಾಗಿಯೂ, ಸುಖಗಳು ಬಂದಾಗ ನಿಷ್ಕಾಮನಾಗಿಯೂ ಇರುವವನೇ ವಿವೇಕಿಯು; ಅವನೇ ಸ್ಥಿತಪ್ರಜ್ಞನು.)

ಈ ಸಂಸಾರದಲ್ಲಿ ನಮಗೆ ಬಹಳ ಕ್ಲೇಶಗಳೂ, ದುಃಖಗಳೂ, ಯಾತನೆಗಳೂ ಉಂಟಾಗುತ್ತವೆ. ಅವುಗಳಲ್ಲಿ ಎಷ್ಟೋ ಸಂಕಟಗಳನ್ನು ನಮ್ಮಿಂದ ನಾವೇ ತಂದುಕೊಳ್ಳುತ್ತೇವೆ. ಆದರೆ ಅವುಗಳಿಗೆ ಅಂಜದೆ ಧೈರ್ಯವನ್ನು ಕಾಯ್ದುಕೊಳ್ಳುವವರೇ ವಿವೇಕಿಗಳು; ಅವು ಅಪರಿಹಾರ್ಯವಾದ ಸಂಕಟಗಳೆಂದು ಭಾವಿಸಿ ಅಧೈರ್ಯವನ್ನು ಹೊಂದಬಾರದು. ದುಃಖಗಳು ಬರುವುದಕ್ಕಿಂತ ಮೊದಲೇ ಅವುಗಳಿಗೆ ಅಂಜಿ ಎಷ್ಟೋ ಜನರು ಉದ್ವಿಗ್ನಮನಸ್ಸಿನವರಾಗುತ್ತಾರೆ ಭ್ರಮದ ಮೂಲಕ ನಾವು ನಮ್ಮ ನೆಳಲಿಗೆ ಅಂಜಿ ಮೋಸಹೋಗುತ್ತೇವೆ; ಕತ್ತಲೆಯಲ್ಲಿ ಏನೋ ಬಂದಿತೆಂದು ತಿಳಿದು ಹೌಹಾರಿ ಕೈಕಾಲುಗಳು ತಣ್ಣಗಾಗುವಂತೆ ಸೃಷ್ಟಿಯಲ್ಲಿದ್ದ ಎಲ್ಲ ವಸ್ತುಗಳೂ ಪ್ರಾಣಿಗಳೂ ಪರಬ್ರಹ್ಮನ ರೂಪಗಳಾದರೂ ಮಾಯೆಯೆಂಬ ಉಪಾಧಿಯ ಮೂಲಕ ಭಿನ್ನಭಿನ್ನವಾಗಿ ಕಾಣುತ್ತವೆಂದು ಅದ್ವೈತರು ಪ್ರತಿಪಾದಿಸುತ್ತಾರೆ. ಅದರಂತೆಯೇ, ಸಂಸಾರದೊಳಗಿನ

ಸುಖದುಃಖಗಳು ಮನಃಶಂಕೆಯೆಂಬ ಉಪಾಧಿಯ ಮೂಲಕ ಭಿನ್ನಭಿನ್ನ-ವಾಗಿ ತೋರುತ್ತವೆ.

"ಜಗತ್ತಿನೊಳಗಿನ ಅನಿಷ್ಟಗಳ ಮೂಲಕ ಮನುಷ್ಯನ ಮನಸ್ಸು ಉದ್ವಿಗ್ನವಾದಾಗ ಅವನು ಸಮಾಧಾನವನ್ನು ಕಳೆದುಕೊಂಡು ದುಃಖಿ-ಯಾಗುತ್ತಾನೆ. ಸುಖಗಳ ಭೋಕ್ತೃವೇ ಮನಸ್ಸು. ಆದುದರಿಂದ ಮನುಷ್ಯನು ಬಾಹ್ಯಕಾರಣಗಳಿಂದ ದುಃಖವನ್ನು ಹೊಂದದಂತೆ ಮನಸ್ಸನ್ನು ಸಾಧ್ಯವಾದಷ್ಟು ದೃಢೀಕರಿಸಬೇಕು." — **ಬಿಥಿಯಸ್**

"ದುಃಖಮಯವಾದ ಸಂಸಾರಭಾರವು ಕಡಿಮೆಯಾಗುವಂತೆ ಆನಂದ ವೃತ್ತಿಯನ್ನು ಕಾಯ್ದುಕೊಳ್ಳುವುದೇ ಮನುಷ್ಯನ ಮುಖ್ಯ ಧರ್ಮವು."

— **ವರ್ಡ್ಸ್‌ವರ್ಥ್**.

"ಇಂಥ ಚಿತ್ತವೃತ್ತಿಯನ್ನು ಕಾಯ್ದುಕೊಳ್ಳುವುದರಿಂದಲೇ ಸತ್ಪುರುಷ-ರಿಗೆ ದೇಶತ್ಯಾಗ, ಕಾರಾಗೃಹವಾಸ, ದಾರಿದ್ರ್ಯ, ದೇಹದಂಡನೆ ಮೊದಲಾದ ಯಾತನೆಗಳಿಂದ ಎಳ್ಳಷ್ಟಾದರೂ ದುಃಖವಾಗದು. ಪ್ರಾಣಸಂಕಟವು ಒದಗಿದರೂ ಅವರು ಧರ್ಮಮಾರ್ಗದಿಂದ ಎಂದೂ ಪರಾಙ್ಮುಖರಾಗರು."

— **ಪ್ಲುಟಾರ್ಕ್**.

"ನಿರ್ಮಲವಾದ ಶಾಂತ ಮನಸ್ಸುಳ್ಳವರನ್ನು ಲೋಹಪಂಜರದಲ್ಲಿ-ಟ್ಟರೂ, ಕಾರಾಗೃಹದಲ್ಲಿ ಹಾಕಿದರೂ, ಅವರ ಆನಂದವು ಎಳ್ಳಷ್ಟಾದರೂ ಕಡಿಮೆಯಾಗದು. ಯಾಕೆಂದರೆ ಕಾರಾಗೃಹವೇ ಆಶ್ರಮವೆಂಬ ಭಾವ-ನೆಯು ಅವರಲ್ಲಿ ದೃಢವಾಗಿರುವುದು." — **ಲವ್ಲೇಸ್**.

ಸುಖವು ನಮ್ಮ ಮನಸ್ಸಿನಲ್ಲಿರುವುದಲ್ಲದೆ ಹೊರಗಿರುವುದಿಲ್ಲ. ತಾನು ಕಲ್ಪಿಸಿದಂತೆ ಮನುಷ್ಯನಿಗೆ ಸುಖವಾಗಲಿ ದುಃಖವಾಗಲಿ ಆಗುತ್ತದೆ.

"ಅತಿದುಃಸಹವಾದ ದುಃಖಗಳ ಉತ್ಪತ್ತಿಯು ನಮ್ಮ ಮನಸ್ಸಿನಲ್ಲಿ-ಯೇ ಆಗುವುದು. ಆದುದರಿಂದ ಅಲ್ಲಿಯೇ ಸುಖದ ಶೋಧವನ್ನು ಮಾಡಬೇಕಲ್ಲವೆ?" — **ಜೆರೆಮಿ ಟೇಲರ್**.

ಸುಖದುಃಖಗಳ ಆದಿಕಾರಣವೇ ಮನಸ್ಸು ಎಂದು ಮಿಲ್ಟನ್-ಕವಿಯು ಅನ್ನುತ್ತಾನೆ.

मन एव मनुष्याणां कारणं बंधमोक्षयोः ।

–मनुस्मृति.

ಮುಂದಿನ ಭವಿತವ್ಯತೆಯು ನಮಗೆ ತಿಳಿಯದೆ ಇದ್ದರೆ, ಭಾವಿ ಸಂಕಟಗಳ ಸ್ವರೂಪವು ಹೆಚ್ಚು ಭಯಂಕರವಾಗಿ ತೋರಿ, ನಾವು ಭಯ-ಭೀತರಾಗುತ್ತೇವೆ. ಆದರೆ ಅವುಗಳ ಸ್ವರೂಪವು ನಮಗೆ ಮೊದಲೇ ಗೊತ್ತಾದರೆ ಅವುಗಳ ಅಂಜಿಕೆಯು ಎಷ್ಟೋ ಅಂಶದಿಂದ ಕಡಿಮೆಯಾಗು-ತ್ತದೆ. ಆದುದರಿಂದಲೇ ಚೋರಭಯಕ್ಕಿಂತಲೂ ಪಿಶಾಚಭಯವು ಹೆಚ್ಚಾಗಿ ತೋರುವುದು. ಯಾಕೆಂದರೆ ಪಿಶಾಚಗಳ ರೂಪ, ಸ್ಥಳ, ಶಕ್ತಿ-ಗಳ ವಿಷಯವಾಗಿ ನಮಗೇನೂ ಗೊತ್ತಿರುವುದಿಲ್ಲ. ಆದರೂ ಸಹ ಪಿಶಾಚಗಳಿಗೆ ಅಂಜುವುದು ಅವಿಚಾರವೇ ಸರಿ. ಜಗತ್ತಿನಲ್ಲಿ ಪಿಶಾಚ-ಗಳುಂಟೆಂದರೂ ಅವು ಎಲ್ಲರಿಗೂ ಅಪಾಯವನ್ನುಂಟುಮಾಡುವ ಕಾರಣ-ವೇನು? ಇನ್ನು ಪಿಶಾಚಗಳನ್ನು ನೋಡಿದವರು ಅವುಗಳಿಂದ ತಮಗೆ ಏನೂ ಅಪಾಯವಾಗಲಿಲ್ಲವೆಂದು ಹೇಳುತ್ತಾರೆ.

ಯಾವ ಸಂಕಟಗಳ ಸ್ವರೂಪವು ನಮಗೆ ಗೊತ್ತಿರುವುದಿಲ್ಲವೋ ಅವು-ಗಳ ವಿಷಯವಾಗಿ ನಮಗೆ ಭೀತಿಯು ವಿಶೇಷವಾಗಿರುವುದು. ಈ ಕಲ್ಪನೆಯ ಆಧಾರದಿಂದಲೇ ಮಿಲ್ಟನ್‌ಕವಿಯು ಮೃತ್ಯುವಿನ ಸ್ವರೂಪ-ವನ್ನು ಬಹು ಭಯಂಕರವಾಗುವಂತೆ ವರ್ಣಿಸಿದ್ದಾನೆ. "ನಮ್ಮ ದೃಷ್ಟಿಗೆ ಒಂದು ವಿಲಕ್ಷಣ ಆಕೃತಿಯು ಗೋಚರವಾಯಿತು. ಅದಕ್ಕೆ ಆಕೃತಿ-ಯೆನ್ನಲಿಕ್ಕೆ ಅವಯವಗಳೂ, ಸಂದುಗಳೂ, ಇಂದ್ರಿಯಗಳೂ ಒಂದೂ ಇದ್ದಿಲ್ಲ; ಅದಕ್ಕೆ ವಸ್ತುವೆನ್ನಲಿಕ್ಕೆ ಸಹ ಬರುವಂತಿದ್ದಿಲ್ಲ. ಯಾಕೆಂದರೆ ಅದು ಛಾಯೆಯಂತೆ ಇತ್ತು. ಅದರ ಬಣ್ಣವು ಅಮಾವಾಸ್ಯೆಯ ಕಗ್ಗತ್ತಲೆ-ಯಂತೆ ಇದ್ದು ರಾಕ್ಷಸರ ಹಾಗೆ ಭಯಂಕರವಾಗಿಯೂ, ಯಮನ ಹಾಗೆ ಕರಾಳವಿಕರಾಳವಾಗಿಯೂ ಇದ್ದು ಒಂದು ಭಯಂಕರವಾದ ಬಿಲ್ಲನ್ನು ಧರಿಸಿತ್ತು. ಆ ಆಕೃತಿಯಲ್ಲಿ ನಮಗೆ ಯಾವುದು ತಲೆಯೆಂದು ಭಾಸವಾಯಿತೋ ಅದರ ಮೇಲೆ ಒಂದು ಕಿರೀಟವಿದ್ದಂತೆ ಕಾಣಿ-ಸುತ್ತಿತ್ತು."

ಎಷ್ಟೋ ಸಾರೆ ರಾತ್ರಿಯಲ್ಲಾಗಲಿ ಕತ್ತಲೆಯಲ್ಲಾಗಲಿ ಎಷ್ಟೋ ವಸ್ತುಗಳು ಭಯಂಕರವಾಗಿ ತೋರುತ್ತವೆ. ನಾವು ಯಾವಾಗಲೂ ಸಂಕಟಗಳ ಸ್ವರೂಪವನ್ನು ನಮ್ಮ ಕಲ್ಪನೆಯಿಂದ ಹೆಚ್ಚಿಸುವುದರಿಂದ, ಅವು ನಮಗೆ ಭಯಂಕರವಾಗಿ ತೋರುತ್ತವೆ. "ಯಾವುದಾದರೊಂದು ಸಂಕಟವನ್ನು ನಾವು ಕ್ಷುದ್ರವೆಂದು ತಿಳಿದಕೂಡಲೆ ಅದರಿಂದ ನಮಗೆ ವಿಶೇಷ ತೊಂದರೆಯಾಗದು. ಆದರೆ ಮನುಷ್ಯನು ಮಾತ್ರ ಸುಮ್ಮನೆ ಸಂಕಟಕ್ಕೆ ಅಂಜಿಕೊಂಡಿದ್ದಾನೆ. ಸಂಕಟವು ಬರುತ್ತದೆಂದು ತಿಳಿದಕೂಡಲೆ ಅದಕ್ಕೆ ಅರ್ಧ ದಾರಿಯಲ್ಲಿಯೇ ಇದುರಾಗಲಿಕ್ಕೆ ಬೇಕು. ಬಂದೀತೆಂದು ಅದರ ಹಾದಿಯು ನೋಡಬಾರದು. ಅಂದರೆ ಅದರ ವಿಷಯವಾಗಿ ನಿಶ್ಚಿಂತ-ನಾಗಿರಬಹುದು" ಎಂದು ಬೇಕನ್ನನು ಅನ್ನುತ್ತಾನೆ.

ಬರುವ ಸಂಕಟಗಳನ್ನು ದೂರದೃಷ್ಟಿಯಿಂದ ಗೊತ್ತುಹಚ್ಚುವುದು ಜಾಣತನದ ಕೆಲಸವಾಗಿದೆ. ಆದರೆ ಅವು ಬರುವುದಕ್ಕಿಂತ ಮೊದಲೇ ದುಃಖಿಗಳಾಗುವುದು ತಪ್ಪು. ಎಷ್ಟೋ ಸಾರೆ ಗೊತ್ತಿಲ್ಲದೆ ನಾವು ಅಡ್ಡ ದಾರಿಯುಬಿದ್ದು ಸುಗಮವಾದ ಮಾರ್ಗವನ್ನು ಕಳೆದುಕೊಳ್ಳುವೆವು.

ನಮ್ಮಿಂದ ದುಷ್ಕೃತ್ಯಗಳು ಆಗದಂತೆ ಎಚ್ಚರಪಡಬೇಕು ಇನ್ನು ಯಾರಿಂದಾದರೂ ದುಷ್ಕೃತ್ಯಗಳು ಘಟಿಸಿದರೆ ಅವರಿಗೆ ಶಾಸನವಾಗು-ವುದೇ ಯೋಗ್ಯವು.

ವ್ಯಕ್ತಿಗಳ ಸ್ವಾರ್ಥಸಾಧನದಿಂದ ಸಮಾಜಸುಖಕ್ಕೆ ವ್ಯತ್ಯಯವುಂಟಾ-ಗುತ್ತದೆಂಬ ಮಾತು ಸರ್ವಾಂಶದಿಂದ ನಿಜವಲ್ಲ. ಎಷ್ಟೋ ಜನರು ಸ್ವಾರ್ಥಸಾಧನದ ಮಾರ್ಗದಲ್ಲಿದ್ದಾಗ ಸಮಾಜದ ಮೇಲೆ ತಿಳಿಯದೆ, ಉಪಕಾರಗಳನ್ನು ಸಹ ಮಾಡುತ್ತಾರೆ.

ಪ್ರತಿಯೊಬ್ಬನು ತನ್ನ ಯೋಗ್ಯವರ್ತನದಿಂದ ಶರೀರಸಂಪತ್ತನ್ನು ಕಾಯ್ದುಕೊಂಡು, ಆನಂದವೃತ್ತಿಯಿಂದಿದ್ದು ಗೃಹಸುಖವನ್ನು ಹೆಚ್ಚಿಸು-ವುದು ಅವಶ್ಯವು. ತನ್ನ ಉದ್ಯೋಗವನ್ನು ಸರಿಯಾಗಿ ಜರುಗಿಸಿ, ನಿಯ-ಮಿತತನದಿಂದ ಎಲ್ಲ ಕೆಲಸಗಳನ್ನು ಮಾಡಿ, ತನ್ನ ಕುಟುಂಬದ ಜನರಿಗೂ, ಆಪ್ತೇಷ್ಟರಿಗೂ ಸುಖವಾಗುವಂತೆ ನಡೆಯುವವನು ಸ್ವಾರ್ಥಪರಾಯಣ-

ನಾದರೂ ಪರೋಪಕಾರಿಯೇ ಸರಿ. ಜಗತ್ತಿನಲ್ಲಿ ಇಂಥ ಜನರ ಸಂಖ್ಯೆಯು ಸಹ ಅತಿಸ್ವಲ್ಪವಾಗಿರುವುದು.

ದುಷ್ಕರ್ಮದಿಂದ ಯಾರಿಗೂ ಎಂದೂ ಸುಖವಾಗದು. ಆದುದ-ರಿಂದ ದುಷ್ಕರ್ಮವನ್ನು ಮಾಡಬಾರದೆಂಬ ನೀತಿಯನ್ನು ಬಾಲ್ಯದಲ್ಲಿಯೇ ಚೆನ್ನಾಗಿ ಬೋಧಿಸಬೇಕು. ಇನ್ನು ಯಾರಾದರೂ ಅಪರಾಧಮಾಡಿದರೆ ಅವರಿಗೆ ತಕ್ಕ ಶಾಸನವಾಗಲಿಕ್ಕೆ ಬೇಕು. ಅಂದರೆ ಅವರಿಗೆ ಮುಂದೆ-ಯಾದರೂ ಸುಖವಾಗಬಹುದು.

ಪ್ರತಿಯೊಬ್ಬನಲ್ಲಿಯೂ ಸದಸದ್ವಿವೇಕ ಬುದ್ಧಿಯು ಮಾರ್ಗದರ್ಶಕ-ವಾಗಿರುವುದು. ಅದು ಮುಂದೆಬರುವ ಸಂಕಟಗಳನ್ನು ಸೂಚಿಸುತ್ತದೆ. ಅದರ ಆಜ್ಞೆಯಂತೆ ವರ್ತಿಸಿದವರಿಗೆ ಸುಖವಾಗುವುದು ನಿಜ.

ದೇವರು ಮನುಷ್ಯನಿಗೆ ಕಲ್ಪನಾಶಕ್ತಿಯನ್ನೂ, ಭೋಗೇಚ್ಛೆಯನ್ನೂ, ಸಹನಶೀಲತೆಯನ್ನೂ ಕೊಟ್ಟಿದ್ದಾನೆ. ಆದುದರಿಂದ ಸಂಕಟಗಳು ಬರುತ್ತವೆಂದು ಗುಣುಗುಟ್ಟುವವರು ಅವಿಚಾರಿಗಳು. ಈ ಜನ್ಮದಲ್ಲಿ ಒದಗುವ ದುಃಖಗಳು, ಮುಂದಿನ ಜನ್ಮದಲ್ಲಿ ಉತ್ತಮಲೋಕಪ್ರಾಪ್ತಿಯು ಪೂರ್ವಸಿದ್ಧತೆಯಂತೆ ಇರುತ್ತವೆಂದು ವಿದ್ವಾಂಸರು ಹೇಳುತ್ತಾರೆ.

"ನಿನಗೆ ಒದಗುವ ಪ್ರತಿಯೊಂದು ಸಂಕಟವು—ಸಣ್ಣದಿರಲಿ, ದೊಡ್ಡ-ದಿರಲಿ—ದೇವದೂತನೆಂದು ತಿಳಿ. ಅಂಥ ದೇವದೂತನು ಬಂದಕೂಡಲೆ ಅವನನ್ನು ಸನ್ಮಾನದಿಂದ ಆದರಿಸು; ಎದ್ದು ನಮಸ್ಕಾರಮಾಡು; ಹೊಸ್ತಿಲು ಹತ್ತುವುದರೊಳಗೆ ನೀರಿನಿಂದ ಅವನ ಪಾದವನ್ನು ತೊಳೆ; ಆ ಮೇಲೆ ನಿನ್ನಲ್ಲಿದ್ದದ್ದನ್ನೆಲ್ಲ ಅವನ ಮುಂದಿಡು; ಆದರಾತಿಥ್ಯವು ನಡೆ-ದಾಗ ಸ್ವಲ್ಪಾದರೂ ಮೋರೆಯನ್ನು ಗಂಟುಹಾಕಬೇಡ; ಮನಃಶಾಂತತೆ-ಯನ್ನು ಸ್ವಲ್ಪಾದರೂ ಕಳೆದುಕೊಳ್ಳಬೇಡ; ಶಾಂತನಾಗಿಯೂ, ಗಂಭೀರ-ನಾಗಿಯೂ ಇರು. ಹಾಗೆ ಮಾಡಿದರೆ ನಿನ್ನ ಮನಃಸ್ಥೈರ್ಯವೂ ಶಾಂತತೆಯೂ ಸ್ವಾತಂತ್ರ್ಯವೂ ಹೆಚ್ಚಾಗುವುವು; ಮತ್ತು ಉದಾತ್ತವಾದ ಶಾಶ್ವತ ವಿಚಾರಗಳಿಗೆ ನಿನ್ನ ಮನಸ್ಸಿನಲ್ಲಿ ಇಂಬುದೊರೆದು, ನಿನ್ನ ದುಃಖ-ನಿವಾರಣೆಯಾಗುವುದು" ಎಂದು ಒಬ್ಬ ಆಂಗ್ಲಕವಿಯು ಬರೆದಿದ್ದಾನೆ.

ಅಭಾವದಿಂದ ವಸ್ತುಗಳ ಮಹತ್ವವು ಗೊತ್ತಾಗುತ್ತದೆ. ಬೇನೆ-ಬಿದ್ದಾಗ ಆರೋಗ್ಯದ, ಯುದ್ಧವು ನಡೆದಾಗ ಶಾಂತತೆಯ, ದೊಡ್ಡ ಪಟ್ಟಣಗಳಲ್ಲಿದ್ದಾಗ ಗ್ರಾಮವಾಸದ ಮಹತ್ವವು ತಿಳಿಯುತ್ತದೆ. ಇನ್ನು ಇಂಥ ವಸ್ತುಗಳನ್ನು ಕಳೆದುಕೊಂಡರಂತೂ ಬಹಳ ದುಃಖವಾಗುವುದು. ಮನುಷ್ಯರು, ತಮಗೆ ಪ್ರಾಪ್ತವಾದ ಐಶ್ವರ್ಯದಿಂದ ಸಂತುಷ್ಟರಾಗದೆ ಹೆಚ್ಚಿನ ವೈಭವವು ಇಲ್ಲೆಂದು ವ್ಯಸನಪಡುತ್ತಾರೆ. ಆದರೆ ಎಲ್ಲರೂ ಕೆಳಗೆ ಕಾಣಿಸಿದ ಶ್ಲೋಕದಲ್ಲಿ ಹೇಳಿದ ನೀತಿಯ ಮಾತನ್ನು ಲಕ್ಷ್ಯ-ದಲ್ಲಿಟ್ಟು ಅದರಂತೆ ವರ್ತಿಸಿದರೆ ಅವರು ಸುಖಿಗಳಾಗುವರು.

**अधोधः पश्यतः कस्य महिमा नोपचीयते ।**
**उपर्युपरि पश्यन्तः सर्वे एव दरिद्रति ॥**

—हितोपदेश.

(ತಮಗಿಂತ ಕಡಿಮೆ ಸ್ಥಿತಿಯವರ ಕಡೆಗೆ ನೋಡುತ್ತ ಹೋದರೆ ಯಾರ ಮಹತ್ವವು ಹೆಚ್ಚಾಗದೆ ಇರದು? ಆದರೆ ತಮಗಿಂತ ಮೇಲಿನವರ ಕಡೆಗೆ ನೋಡುತ್ತ ಹೋದರೆ ಎಲ್ಲರೂ ದರಿದ್ರರಾಗುವರು.)

ಪ್ರತಿಯೊಂದು ದಿವಸವೂ ಉತ್ಸವದಕಾಲವೆಂದು ಜ್ಞಾನಿಗಳು ಭಾವಿ-ಸುತ್ತಾರೆ. ಮುಂದಿನ ಜನ್ಮದ ಸುಖವೆಲ್ಲವೂ ಈ ಜನ್ಮದ ವರ್ತನದ ಮೇಲೆಯೇ ಅವಲಂಬಿಸಿರುವುದರಿಂದ ನಾವು ಯಾವಾಗಲೂ ಶಾಂತ-ಮನಸ್ಸಿನವರೂ ಆನಂದವೃತ್ತಿಯುಳ್ಳವರೂ ಆಗತಕ್ಕದ್ದು. ದೇವರು ನಮಗೆ ಕೊಟ್ಟ ಸುಖದ ವಿಷಯವಾಗಿ ಆತನ ಅಗಣಿತ ಗುಣಗಳ ಮಹಿಮೆಯನ್ನು ಕೊಂಡಾಡುತ್ತ ಆನಂದದಿಂದ ಭಾವಿಜನ್ಮದ ಮಾರ್ಗ-ಪ್ರತೀಕ್ಷೆಯನ್ನು ಮಾಡುತ್ತ ಕುಳಿತುಕೊಳ್ಳುವುದೇ ಸುಖಸಾಧನದ ಶ್ರೇಷ್ಠ ಉಪಾಯವು.

# ದಶಮಾಧ್ಯಾಯ.

## ಶ್ರಮವೂ ವಿಶ್ರಾಂತಿಯೂ.

**शरीरयात्रापि च ते न प्रसिद्धयेदकर्मणः ।**

—भगवद्गीता.

ಕರ್ಮವ ಬಿಟ್ಟಹುದರಿಂದ ॥
ಇಹದ ನಿನ್ನ ಶರೀರಯಾತ್ರೆಯು ।
ಬಹಳ ಸುಖವುಂತಾಗಿ ಸಿದ್ಧಿಸದು ॥ —ನಾಗರಸ.

(ಕೆಲಸಮಾಡದೆ ಹೋದರೆ, ನಿನ್ನ ಶರೀರಪೋಷಣವು ಸಹ ಆಗದು.)

ಶ್ರಮವನ್ನು ಸಂಸಾರಬಾಧೆಗಳಲ್ಲಿ ಎಣಿಸಕೂಡದು. ನಮ್ಮ ಶಕ್ತಿಗೆ ನೀಗುವಷ್ಟು ಶ್ರಮವನ್ನು ನಾವು ಮಾಡಲೇಬೇಕು. ಯಾವುದೊಂದು ಕೆಲಸದಲ್ಲಿ ತೊಡಗಿದಾಗ ಕಾಲವು ಎಷ್ಟು ತೀವ್ರವಾಗಿ ಹೋಗುತ್ತ-ದೆಂಬುದು ಎಲ್ಲರಿಗೂ ಗೊತ್ತುಂಟು. ಆದರೆ ನಮಗೆ ಉದ್ಯೋಗವು ಇಲ್ಲದಿದ್ದರೆ ಕಾಲವೇ ಹೋಗುವುದಿಲ್ಲ. ಉದ್ಯೋಗದಲ್ಲಿ ತೊಡಗಿದಾಗ ಸಂಸಾರದ ಅಲ್ಪಸ್ವಲ್ಪ ಬಾಧೆಗಳನ್ನು ಮರೆತುಬಿಡುತ್ತೇವೆ. ಉದ್ಯೋ-ಗಿಗೆ ಅಸಮಾಧಾನ ಹೊಂದಲಿಕ್ಕೆ ಕಾರಣವೂ ಇರುವುದಿಲ್ಲ; ಕಾಲವೂ ಇರುವುದಿಲ್ಲ.

"ಮೊದಲು ಶ್ರಮಮಾಡಿದರೆ, ಹಿಂದುಗಡೆ ಸುಖವಾಗುವುದು. ಹಗಲು ಮನಮುಟ್ಟಿ ಕೆಲಸಮಾಡಿದರೆ, ರಾತ್ರಿಯಲ್ಲಿ ಗಾಢವಾದ ನಿದ್ರೆಯು ಹತ್ತುವುದು. ಹಣದ ಆಶೆಯನ್ನು ತೊರೆದುಬಿಟ್ಟವರು ಶ್ರೀಮಂತರೇ ಸರಿ. ಅಂಥವರಿಗೆ ದೇವರು ಆರೋಗ್ಯವನ್ನೂ ಸುಖಸಮಾಧಾನವನ್ನೂ ದಯಪಾಲಿಸುವನು." —ಗ್ರೇ.

ಹೊಲದಲ್ಲಿ ಅಥವಾ ಗಿರಣಿಯಲ್ಲಿ ಕೆಲಸಮಾಡುವ ಕೂಲಿಕಾರರ ವಿಷಯದಲ್ಲಿ ಮೇಲಿನ ಉಕ್ತಿಯು ಅಕ್ಷರಶಃ ನಿಜವೆಂಬುದು ಕಂಡುಬರು-

ವುದು. ಅವರಿಗೆ ಸ್ವಕರ್ತವ್ಯವನ್ನು ತೀರಿಸಿದ ಸಮಾಧಾನವೂ ಸುದೃಢ-ವಾದ ಶರೀರಸಂಪತ್ತೂ ಲಭಿಸುತ್ತವೆ. "ಯಾವುದೊಂದು ಉದ್ಯೋಗ-ದಲ್ಲಿ ಹೆಸರು ಪಡೆಯಬೇಕಾದರೆ, ಶರೀರವನ್ನು ಸವೆಸಬೇಕಾಗುವುದು; ಮತ್ತು ಸತ್ಯದ ಮಾರ್ಗವನ್ನನುಸರಿಸಿ ಪ್ರಾಮಾಣಿಕತನದಿಂದ ವರ್ತಿಸ-ಬೇಕಾಗುವುದು." — **ಇಮರ್ಸನ್.**

ಸಂಸಾರದಲ್ಲಿ ಅವಶ್ಯವಾದ ಪದಾರ್ಥಗಳ ಬೆಲೆಯು ಅವುಗಳನ್ನು ದೊರಕಿಸಲಿಕ್ಕೆ ಹತ್ತುವ ಶ್ರಮದ ಮೇಲೆ ಅವಲಂಬಿಸಿಯದೆ. ದೀರ್ಘ-ಪ್ರಯತ್ನ ಮಾಡುವುದರಿಂದ ಎಂಥ ಕೆಲಸವಾದರೂ ಸಾಧ್ಯವಾಗುವು-ದೆಂಬ ಮಾತನ್ನು ಮರೆತು, ನಾವು ಸೋಮಾರಿಗಳಾಗುತ್ತೇವೆ. ಸೃಷ್ಟಿ-ಯಲ್ಲಿ ಅತಿ ಕ್ಷುದ್ರಜಂತುವಾದ ಜೇಡಹುಳವು ಸಹ ದೀರ್ಘಪ್ರಯತ್ನದ ಆವಶ್ಯಕತೆಯನ್ನೂ ಮಹತ್ವವನ್ನೂ ಬೋಧಿಸುತ್ತಿರುತ್ತದೆ

**अनिर्वेदो हि सततं सर्वार्थेषु प्रवर्तकः ।**
**करोति सफलं जंतोः कर्मयच्च करोति सः ॥**

—रामायण.

(ಕಾರ್ಯಪ್ರವೃತ್ತಿಗೂ ಸಿದ್ಧಿಗೂ ಸ್ವಾವಲಂಬನವು ಅವಶ್ಯವಾಗಿ ಬೇಕು.)

ನಿರುದ್ಯೋಗದಿಂದ ಶರೀರವೂ ಮನಸ್ಸೂ ಜಂಗುವುದಕ್ಕಿಂತ ಉದ್ಯೋಗದಿಂದ ಸವೆಯುವುದು ಬಹಳ ಯುಕ್ತವು. ಈಗ ಎಲ್ಲ ಕಡೆ-ಯಲ್ಲಿಯೂ ಶಾಂತತೆಯು ನೆಲೆಗೊಂಡದ್ದರಿಂದ ಕೂಲಿಗಾರರು ತಮ್ಮ ಉದ್ಯೋಗವನ್ನು ಏನೂ ತೊಂದರೆಯಿಲ್ಲದೆ ಮಾಡಿ ತಮ್ಮ ಶ್ರಮದ ಫಲ-ಪ್ರಾಪ್ತಿಯನ್ನು ಹೊಂದಬಹುದು.

"ಬೇರೆಬೇರೆ ಕೆಲಸಗಳನ್ನು ಮಾಡುವಕಾಲವು ಬೇರೆಬೇರೆಯಾಗಿ-ರುವುದು. ಉದ್ಯೋಗಮಾಡುವ ಕಾಲವು ಬೇರೆ; ಆಟವಾಡುವ ಕಾಲವು ಬೇರೆ. ಸ್ಥಳಾಂತರದಿಂದ ಮನಸ್ಸಿನ ಉತ್ಸಾಹವು ಹೆಚ್ಚಾಗುವಂತೆ, ಆಟದಿಂದ ಹೆಚ್ಚು ಕೆಲಸಮಾಡುವ ಆಸ್ಥೆಯು ಉಂಟಾಗುವುದು. ಕೆಲಸ-ಗಳನ್ನು ಆಸೆಯಿಂದ ಮಾಡಿ ತೀರಿಸಿದ ನಂತರ ವಿಶ್ರಾಂತಿಯು ದೊರಕು-ವುದು." — **ಸೊಲೊಮನ್.**

"ಮನಸ್ಸಿನ ಬಲವಿದ್ದಲ್ಲಿ ಮಾರ್ಗವಿರುವುದು" ಎಂಬ ಉತ್ತಮ ನಾಣ್ಣುಡಿಯು ಆಂಗ್ಲೇಯರಲ್ಲಿ ರೂಢವಾಗಿದೆ. ಯಾವ್ರದಾದರೊಂದು ಕೆಲಸವನ್ನು ಮಾಡಲಿಕ್ಕೆ ಮನಸ್ಸಿನ ಪ್ರವೃತ್ತಿಯು ಅನುಕೂಲವಾಗಿರ-ಬೇಕು.

ಮನುಷ್ಯನು ಯಾವ ಉದ್ಯೋಗವನ್ನು ಕೈಕೊಂಡರೂ, ಎರಡನೆ-ಯವರ ಮೇಲೆ ಅವಲಂಬಿಸದೆ ತಾನೇ ಅದನ್ನು ಮಾಡಬೇಕು.

"सर्वं परवशं दुःखं सर्वमात्मवशं सुखं"॥

—मनु.

ಪರಾವಲಂಬನದಂಥ ದುಃಖವಿಲ್ಲ, ಸ್ವಾವಲಂಬನದಂಥ ಸುಖವಿಲ್ಲ. ಎರಡನೆಯವರು ನಮಗೆ ಸಹಾಯ ಮಾಡಬಲ್ಲರು; ಆದರೆ ಪರಾವ-ಲಂಬಿಗಳಾಗುವುದಕ್ಕಿಂತ ಸ್ವಾವಲಂಬಿಗಳಾಗುವುದರಿಂದ ನಾವು ದುಃಖ-ಗಳನ್ನು ನೀಗಿ ಸುಖಿಗಳಾಗುವೆವು. ನಾವು ಮಾಡಬೇಕಾದ ಕೆಲಸದ ಎಲ್ಲ ಭಾರವನ್ನೂ ನಾವೇ ವಹಿಸಬೇಕು. ಎಲ್ಲ ಕೆಲಸಗಳಲ್ಲಿ ನಾವು ಸ್ವಂತ ವಿಚಾರದಿಂದಲೇ ನಡೆಯುವುದು ಅವಶ್ಯವು. ಸದ್ವರ್ತನವನ್ನು ಬಿಡದೆ ನಮ್ಮ ಮನೋರಥಗಳನ್ನು ಪೂರೈಸಿಕೊಳ್ಳಬೇಕಾದರೆ ನಮ್ಮ ಸದಸದ್ವಿವೇಕ ಬುದ್ಧಿಯ ಅಪ್ಪಣೆಯಂತೆ ನಡೆಯಬೇಕು.

सर्वमात्मनि संपश्येत्सदसच्च समाहितम् ।
सर्वमात्मनि संपश्यन्नाधर्मे कुरुते मनः ॥

(ಚರಾಚರಾತ್ಮಕ ಸೃಷ್ಟಿಯ ಅವಲೋಕನವನ್ನು ಆತ್ಮದಲ್ಲಿ ಮಾಡುವುದರಿಂದ ಅಧರ್ಮದ ಕಡೆಗೆ ಮನಸ್ಸಿನ ಪ್ರವೃತ್ತಿಯಾಗುವುದಿಲ್ಲ.)

ನಾವು ಮನಮುಟ್ಟಿ ಉದ್ಯೋಗಮಾಡಿದರೆ ಅದು ಎಂದೂ ವ್ಯರ್ಥ-ವಾಗಲಾರದು. ಇಸೋಪನ ಒಂದು ಕಥೆಯಲ್ಲಿ ಹೇಳಿದಂತೆ ಶ್ರಮಮಾಡಿದ ಕಾಲಕ್ಕೆ ಹೊಲದಲ್ಲಿ ದ್ರವ್ಯದ ನಿಧಿಯು ಸಿಗದಿದ್ದರೂ, ಉತ್ತಮ ಬೆಳೆ ಬರುವುದು ನಿಶ್ಚಯವು.

ಎಲೋ ಮನುಷ್ಯನೇ! ನಿನಗೆ ಕೂಲಿಯು ಸಿಗಲಿ, ಬಿಡಲಿ ಯಾವಾ-ಗಲೂ ದುಡಿಯುತ್ತಿರು. ಅಂದರೆ ಅದರ ಫಲವು ನಿನಗೆ ಎಂದೂ ದೊರ-

ಕದೆ ಇರದು; ಅದು ತನ್ನಷ್ಟಕ್ಕೆ ತಾನೇ ನಿನಗೆ ಲಭಿಸುವುದು. ನಿನ್ನ ಕೆಲಸವು ಸಣ್ಣದಿರಲಿ, ದೊಡ್ಡದಿರಲಿ, ಹೊಲಮಾಡುವುದಿರಲಿ, ಕಾವ್ಯ-ವನ್ನು ಬರೆಯುವುದಿರಲಿ, ಪ್ರಾಮಾಣಿಕತನದಿಂದಲೂ ವಿವೇಕದಿಂದಲೂ ಕೆಲಸಮಾಡು. ಅದರಿಂದ ನಿನಗೆ ಸುಖವಾಗುವುದು. ಉದ್ಯೋಗ ಮಾಡುವಾಗ ನಿನಗೆ ಅಪಯಶಸ್ಸುಬಂದರೂ, ಕಟ್ಟಕಡೆಗೆ ನೀನು ನಿಶ್ಚಯವಾಗಿ ಹೆಸರು ಪಡೆಯುವಿ.

**नात्मानमवमन्येत पूर्वाभिरसमृद्धिभिः ।**
**आमृत्योः श्रियमन्विच्छन्नैनां मन्येतदुर्लभाम् ॥** —मनु.

(ಪ್ರಯತ್ನಮಾಡಿದರೂ ಕಾರ್ಯಸಿದ್ಧಿಯಾಗದಿದ್ದರೆ ನಿನ್ನನ್ನು ಹಳಿದುಕೊಳ್ಳಬೇಡ. ಸಾಯುವ ವರೆಗೆ ಪ್ರಯತ್ನವನ್ನು ಎಡೆಬಿಡದೆ ಸಾಗಿಸು; ಮತ್ತು ಕಾರ್ಯಸಿದ್ಧಿಯು ಆಗಲಿಕ್ಕಿಲ್ಲೆಂದು ತಿಳಿಯಬೇಡ.)

ಯಾವುದಾದರೊಂದು ಕೆಲಸವನ್ನು ನೆಟ್ಟಗೆ ಮಾಡುವುದೇ ಅದರ ಪ್ರತಿಫಲವೆಂದು ತಿಳಿ.

ದೀರ್ಘೋದ್ಯೋಗಮಾಡಿ ಯಶಸ್ಸನ್ನು ಸಂಪಾದಿಸಿದವರು ಸಹ ಇನ್ನೂ ಜಗತ್ತಿನಲ್ಲಿ ಮಾಡತಕ್ಕ ಕಾರ್ಯಗಳು ಅನೇಕವಿರುವುವೆಂದು ಒಪ್ಪಿಕೊಳ್ಳುವರು. "ಇನ್ನೂ ಎಷ್ಟೋ ಕಾರ್ಯಗಳನ್ನು ಮಾಡತಕ್ಕದ್ದಿದ್ದು ತಾವು ಅವುಗಳಿಗೆ ಕೈ ಸಹ ಹಚ್ಚಲಿಲ್ಲವೆಂದೂ, ಎಷ್ಟೋ ಸಂಗತಿಗಳು ಸಾಧ್ಯವಿದ್ದರೂ ಅವು ತಮಗೆ ತಿಳಿಯಲಿಲ್ಲವೆಂದೂ ಅವರು ಅನ್ನುತ್ತಾರೆ."

—**ಟೆನಿಸನ್.**

ಕೆಲಸಮಾಡಲಿಕ್ಕೆ ತಮಗೆ ಕಾಲವೇ ಸಿಗುವುದಿಲ್ಲೆಂದು ಸೋಮಾರಿ-ಗಳು ಅನ್ನುತ್ತಾರೆ. ಈ ನೆವವು ಸರಿಯಾಗಲಾರದು. "ನೀಚರ ಸೇವೆ-ಯನ್ನು ಮಾಡುವುದಕ್ಕಾಗಲಿ, ಅಪರಿಮಿತ ಸಂಪತ್ತನ್ನು ಗಳಿಸುವುದಕ್ಕಾ-ಗಲಿ ಆಯುಷ್ಯವು ಅಲ್ಪವಾಗಿರುವುದು. ಆದರೆ ಸದ್ಗುಣಗಳನ್ನು ಸಂಪಾ-ದಿಸಿ ಪರರಿಗೆ ಆದಷ್ಟು ಉಪಕಾರಮಾಡಲಿಕ್ಕೆ ಸಾಕಷ್ಟು ಕಾಲವನ್ನು ಪರಮೇಶ್ವರನು ಮನುಷ್ಯ ಪ್ರಾಣಿಗಳಿಗೆ ದಯಪಾಲಿಸಿದ್ದಾನೆ."

— **ಜೆರೆಮಿ ಟೇಲರ್.**

ನಮ್ಮ ಅಸ್ತಿತ್ವಕ್ಕೆ ಶ್ರಮವು ಅತ್ಯವಶ್ಯವು. ಆದುದರಿಂದಲೇ ಎಲ್ಲರೂ ಅಲ್ಪಸ್ವಲ್ಪ ಪ್ರಮಾಣದಿಂದ ದುಡಿಯುತ್ತಿರುವರು; ದೀರ್ಘೋದ್ಯೋಗಿಗಳಾದವರು ಜೀವನಕಲಹದಲ್ಲಿ ಮುಂದೆ ಬರುವರು; ಉಳಿದವರು ಹಿಂದುಳಿಯುವರು. ಆಂಗ್ಲೇಯರು, ಜಪಾನೀಯರು, ಅಮೇರಿಕನ್ನರು ಇಷ್ಟು ಶ್ರೀಮಂತರೂ ಬಲಾಢ್ಯರೂ ಆಗಿರುವುದು ದೀರ್ಘೋದ್ಯೋಗದಿಂದಲ್ಲವೇ?

ಕೆಲಸಮಾಡುವ ಪ್ರಕಾರಗಳು ಭಿನ್ನಭಿನ್ನವಾಗಿವೆ. ಕೆಲಸದ ಬಗೆಯನ್ನು ತಿಳಿದು ಅದನ್ನು ಬೇಗ ಮಾಡುವುದು ಒಳ್ಳೇದು; ಆದರೆ ಅದರ ಬಗೆಯನ್ನರಿಯದೆ ಅವಸರದಿಂದ ಮಾಡಹೋದರೆ ಅದು ಕೆಟ್ಟುಹೋಗುವುದು. ಗ್ರಹಗಳು ಅವಸರಮಾಡದೆ ಏಕಪ್ರಕಾರವಾಗಿ ಭ್ರಮಣಮಾಡುತ್ತಿರುತ್ತವೆ. ಅವುಗಳಂತೆ ನಾವಾದರೂ ಸತತೋದ್ಯೋಗವನ್ನು ಕೈಕೊಳ್ಳಬೇಕು.

ಕೆಲಸಮಾಡಿದ ಮೇಲೆ ನಾವು ವಿಶ್ರಾಂತಿಸುಖವನ್ನು ಅನುಭವಿಸಲಿಕ್ಕೆ ಅರ್ಹರಾಗುತ್ತೇವೆ. ಶ್ರಮಮಾಡಲಿಕ್ಕೆ ಉತ್ಸಾಹವುಂಟಾಗಬೇಕಾದರೆ ವಿಶ್ರಾಂತಿಯು ಬೇಕು. ವಿಶ್ರಾಂತಿಯನ್ನು ಲಭಿಸಬೇಕಾದರೆ ಶ್ರಮವನ್ನು ಮಾಡಲೇಬೇಕು.

ನಮ್ಮ ಕೈಯಿಂದಾದಷ್ಟು ಉದ್ಯೋಗವನ್ನೂ ಶ್ರಮವನ್ನೂ ಮಾಡಿದ ಮೇಲೆ ಸಮಾಧಾನದಿಂದ ಫಲಪ್ರತೀಕ್ಷೆಮಾಡುತ್ತ ಕುಳಿತುಕೊಳ್ಳಬಹುದು. “ಇಂಥ ಮನುಷ್ಯನು ದರಿದ್ರನಿದ್ದರೂ, ಆನಂದದಿಂದಿರುವನು; ಅಧಿಕಾರವಿದ್ದಾಗ ಅದರಿಂದುಂಟಾಗುವ ಶ್ರಮವನ್ನೂ ಪ್ರಾಣಸಂಕಟವನ್ನೂ ಸಹಿಸಿಕೊಳ್ಳುವನು; ದೇಶತ್ಯಾಗಮಾಡುವ ಪ್ರಸಂಗವು ಒದಗಿದರೂ, ಅವನ ಸಮಾಧಾನದಲ್ಲಿ ಎಳ್ಳಷ್ಟಾದರೂ ಹೆಚ್ಚುಕಡಿಮೆಯಾಗದು.”

ರಸ್ಕಿನ್ನನು ತನ್ನ ದೇಶಬಂಧುಗಳ ವಿಷಯವಾಗಿ ವ್ಯಕ್ತಪಡಿಸಿದ ಉದ್ಗಾರಗಳು ವಿಚಾರಾರ್ಹವಾಗಿವೆ. “ನಮ್ಮ ದೇಶಬಂಧುಗಳು ಮಹತ್ವಾಕಾಂಕ್ಷಿಗಳಾದುದರಿಂದ ಸುಖಶಾಂತಿಯನ್ನು ಲಭಿಸಬೇಕೆಂಬ ಇಚ್ಛೆಯು ಅವರಲ್ಲಿ ಕಂಡುಬರುವುದಿಲ್ಲ. ಮುಖ್ಯವಾಗಿ ಸುಖಶಾಂತಿಯನ್ನು

ದೊರಕಿಸಲಿಕ್ಕೆ ಎರಡು ಉಪಾಯಗಳಿವೆ. ಮನಸ್ಸು ಸುವಿಚಾರಗಳ ತವರುಮನೆಯಾಗಿರುವಂತೆ ಮಾಡುವುದು ಮೊದಲನೆಯದು. ಆನಂದದ ಕಲ್ಪನೆಗಳಿಂದ ಮನಸ್ಸಿನ ಉಲ್ಲಾಸವು ಕಡಿಮೆಯಾಗದಂತೆ ಮಾಡುವುದು ಎರಡನೆಯದು."

ಬೌದ್ಧಜನರಲ್ಲಿ ಆಯುಷ್ಯದ ಅತಿ ಶ್ರೇಷ್ಠವಾದ ಧ್ಯೇಯವೇ ನಿರ್ವಾಣವು. ನಿರ್ವಾಣವೆಂದರೆ ಶಾಶ್ವತವಾದ ಶಾಂತಿಯು. ವಿಶ್ರಾಂತಿಯ ನಿಜವಾದ ಸುಖವು ಉದ್ಯೋಗ-ದ್ವೇಷಿಗಳಿಗೂ ಸೋಮಾರಿಗಳಿಗೂ ತಿಳಿಯದು. ಶ್ರಮದಿಂದ ಶರೀರಕ್ಕೆ ವಿಶ್ರಾಂತಿಯು ದೊರೆಯುವಂತೆ ಮನಸ್ಸಿಗೆ ಉತ್ಸಾಹವುಂಟಾಗುತ್ತದೆ. ಆದುದರಿಂದ ನಾವು ಸದಾಚರಣೆಯಿಂದಿದ್ದು ಉದ್ಯೋಗಮಾಡುತ್ತಿದ್ದರೆ ಸುಖವು ತನ್ನಷ್ಟಕ್ಕೆ ತಾನೇ ಲಭಿಸುವುದು.

# ಏಕಾದಶಾಧ್ಯಾಯ.

## ಧರ್ಮ.

**तप्यंते लोकतापेन साधवः प्रायशो जनाः ।**
**परमाराधनं तद्धि पुरुषस्याखिलमात्मनः ॥**

**- भागवत.**

(ಪರರ ದುಃಖಗಳನ್ನು ನೋಡಿ ಯಾರಿಗೆ ದುಃಖವಾಗುತ್ತದೆಯೋ, ಮತ್ತು ಯಾರು ದುಃಖಿಗಳ ಪರಾಮರ್ಶೆಯನ್ನು ಮಾಡುವರೋ ಅವರೇ ಸಾಧುಗಳು. ದುಃಖಾರ್ತರ ದುಃಖನಿವಾರಣೆಯೇ ಶ್ರೇಷ್ಠವಾದ ಪರಮೇಶ್ವರಾರಾಧನೆಯು.)

ಇಲ್ಲಿ ಪರಮಾರ್ಥದ ವಿಷಯವಾಗಿಯಾಗಲಿ, ಯಾವುದಾದರೊಂದು ವಿಶಿಷ್ಟವಾದ ಮತದ ವಿಷಯವಾಗಿಯಾಗಿಲಿ, ಮಂಡನವನ್ನಾಗಲಿ, ಖಂಡನವನ್ನಾಗಲಿ ಮಾಡದೆ, ಮನುಷ್ಯ ಪ್ರಾಣಿಗಳ ದುಃಖನಿವಾರಣದ ಅತಿಶ್ರೇಷ್ಠೋಪಾಯವಾದ ಹಾಗೂ ಶಾಶ್ವತಸುಖದ ಮಾರ್ಗದರ್ಶಕವಾದ ಧರ್ಮದ ವಿಷಯವಾಗಿ ಸ್ವಲ್ಪ ವಿಚಾರಮಾಡುವೆವು.

ಧರ್ಮದಲ್ಲಿ ಮುಖ್ಯವಾಗಿ ಎರಡು ವಿಷಯಗಳು ಸಮಾವೇಶವಾಗುತ್ತವೆ. ಒಂದು ಮನುಷ್ಯನ ವರ್ತನಕ್ಕೂ ಕರ್ತವ್ಯಕ್ಕೂ ಸಂಬಂಧಿಸಿದ್ದು; ಮತ್ತೊಂದು ಮರಣದ ತರುವಾಯ ಜೀವಾತ್ಮಕ್ಕೆ ಆಗುವ ಅವಸ್ಥೆಗೂ ಪರಮಾತ್ಮನ ಸ್ವರೂಪಕ್ಕೂ ಸಂಬಂಧಿಸಿದ್ದು. ಮುಖ್ಯವಾಗಿ ಧರ್ಮದ ಜ್ಞಾನದಿಂದ ಆಗತಕ್ಕ ಪರಿಣಾಮಗಳು ಯಾವುವೆಂದರೆ:—ಅದರಿಂದ ಮನಸ್ಸಿಗೆ ಸಮಾಧಾನವುಂಟಾಗುವುದು; ಸದ್ವರ್ತನದ ಆವಶ್ಯಕತೆಯು ಗೊತ್ತಾಗುವುದು; ಮತ್ತು ಮನಸ್ಸು ಸುದೃಢವಾಗುವುದು. ಧರ್ಮವು ಕೇವಲ ಬುದ್ಧಿಕೌಶಲ್ಯವನ್ನು ತೋರಿಸುವ ವಿಷಯವೂ ಅಲ್ಲ; ಅಥವಾ ಒಬ್ಬರ ಕೂಡೊಬ್ಬರು ನಿಷ್ಕಾರಣವಾಗಿ ವಾದಬೆಳೆಸುವ ವಿಷಯವೂ ಅಲ್ಲ. ಆದರೂ ಸಹ ಜಗತ್ತಿನಲ್ಲಿ ಧರ್ಮದ ದೆಶೆಯಿಂದ ಬಲಾತ್ಕಾರಮಾಡುವ ಜನರನ್ನು ಕಾಣಬಹುದು ಇದರ ಮೇಲಿಂದ ನೋಡಲು ಇಂಥ ಜನರು

ಆರಾಧಿಸುವ ದೇವರು ಅನ್ಯಾಯಿಯೂ ಕ್ರೂರನೂ ಎಂಬುದೂ, ಅವರು ಪಾಲಿಸುವ ಧರ್ಮವು ಅಧರ್ಮವೆಂಬುದೂ ವ್ಯಕ್ತವಾಗುತ್ತದೆ. ಹಾಗಾದರೆ ನಿಜವಾದ ಧರ್ಮಾಚರಣೆಯೆಂದರೇನು? ಮನಃಪೂರ್ವಕವಾಗಿ ಸತ್ಯಶೋಧನದ ಮಾರ್ಗವನ್ನು ಅವಲಂಬಿಸುವುದು ನಿಜವಾದ ಧರ್ಮಾಚರಣೆಯು. **"सत्यान्नास्ति परो धर्मः"** ಎಂಬ ವಾಕ್ಯದಿಂದ ಮೇಲಿನ ಅಭಿಪ್ರಾಯವು ಸ್ಪಷ್ಟವಾಗುತ್ತದೆ. ಸತ್ಯವನ್ನು ಪಾಲಿಸುವವರು ಮೋಕ್ಷಸಂಪಾದನೆಯ ಸಾಧನೆಗಳನ್ನು ಕೂಡಿಸಹತ್ತಿದ್ದಾರೆಂದು ಹೇಳಬಹುದು.

ಧರ್ಮಗ್ರಂಥಗಳನ್ನೋದುವಾಗ ಶಬ್ದಾರ್ಥದ ಕಡೆಗೆ ಪೂರ್ಣ ಲಕ್ಷ್ಯವನ್ನಿಟ್ಟು ವಾಕ್ಯಗಳ ಇಂಗಿತವನ್ನು ಅರಿತುಕೊಳ್ಳಬೇಕು. ಪರಮಾರ್ಥ ವಿಷಯದ ಅಭ್ಯಾಸವನ್ನು ಮಾಡುವವರಲ್ಲಿ ಎಷ್ಟೋ ಜನರಿಗೆ ತಮ್ಮ ಕರ್ತವ್ಯವೇನೆಂಬುದು ಗೊತ್ತಿರುವುದಿಲ್ಲ. ಜನರು ತಮ್ಮ ತಮ್ಮ ಕರ್ತವ್ಯಗಳನ್ನು ಮನಃಪೂರ್ವಕವಾಗಿ ಮಾಡಹತ್ತಿದರೆ, ಸದಸದ್ವಿಚಾರದಿಂದ ಅವರಿಗೆ ಧರ್ಮಮಾರ್ಗವು ತನ್ನಷ್ಟಕ್ಕೆ ತಾನೇ ಗೊತ್ತಾಗುವುದು. ಈ ಪ್ರಕಾರ ಧರ್ಮಮಾರ್ಗದಿಂದ ನಡೆಯುವ ಉತ್ತಮ ಸಾಧನವನ್ನು ಬಿಟ್ಟು ಧರ್ಮತತ್ವಗಳ ಶುಷ್ಕವಾದವನ್ನು ಮಾಡುವುದರಲ್ಲಿ ಎಷ್ಟೋ ಜನರು ವ್ಯರ್ಥವಾಗಿ ತಮ್ಮ ಆಯುಷ್ಯವನ್ನು ವೆಚ್ಚಮಾಡುತ್ತಿರುವುದನ್ನು ನೋಡಿ ನಮಗೆ ವ್ಯಸನವಾಗುತ್ತದೆ. ಪರಮಾರ್ಥ ವಿಷಯವು ಗಹನವಾದುದರಿಂದ, ಎಷ್ಟೋ ಜನರಿಗೆ ಅದರ ಜ್ಞಾನವಾಗುವುದಿಲ್ಲ. ದೇವರು ಎಲ್ಲ ಮಾನವ ಪ್ರಾಣಿಗಳಿಗೂ "ನೀವು ನ್ಯಾಯದಿಂದ ನಡೆಯಿರಿ; ಎರಡನೆಯವರ ಮೇಲೆ ದಯೆತೋರಿಸಿರಿ; ನಮ್ರರಾಗಿ ನನ್ನಲ್ಲಿ ಭಕ್ತಿಯನ್ನಿಡಿರಿ" ಎಂಬ ಉಪದೇಶವನ್ನು ಯಾವಾಗಲೂ ಮಾಡುತ್ತಿರುತ್ತಾನೆ. ನಿಜವಾದ ಧರ್ಮತತ್ವವಿಚಾರಗಳಿದ್ದಲ್ಲಿ ಮತಭೇದವಾಗುವ ಕಾರಣವಿಲ್ಲ. ಯಾಕೆಂದರೆ ಎಲ್ಲ ಧರ್ಮತತ್ವಗಳ ಸಾರವು ಒಂದೇ. ಪೃಥ್ವಿಯಲ್ಲಿ ಶಾಂತತೆಯೂ, ಮನುಷ್ಯರಲ್ಲಿ ಪ್ರೇಮವೂ, ದೇವರಲ್ಲಿ ಭಕ್ತಿಯೂ ಉಂಟಾಗಬೇಕೆಂಬ ಸದಿಚ್ಛೆಯೇ ಪ್ರತಿಯೊಂದು ಧರ್ಮದಲ್ಲಿ ಕಂಡುಬರುವುದು. ಆದ್ದರಿಂದ

ಮನುಷ್ಯರಲ್ಲಿ ದ್ವೇಷಭಾವವನ್ನುಂಟುಮಾಡುವಂಥ ವಿಚಾರಗಳನ್ನು ನಾಶ-ಗೊಳಿಸುವುದು ಪ್ರತಿಯೊಬ್ಬ ಧಾರ್ಮಿಕನ ಕರ್ತವ್ಯವು.

"ಬುಖಾರಾ" ಎಂಬ ಪಟ್ಟಣದಲ್ಲಿ ಅರಬೀ ಭಾಷೆಯನ್ನು ಕಲಿಸುವ ೩೦೦ ವಿದ್ಯಾಲಯಗಳಿವೆ. ಅವುಗಳಲ್ಲಿ ವಿದ್ಯಾರ್ಥಿಗಳಿಗೆ ಧರ್ಮಶಾಸ್ತ್ರದ ಹೊರತು ಉಳಿದ ಯಾವ ವಿಷಯವನ್ನೂ ಕಲಿಸುವುದಿಲ್ಲ. ಆದರೆ ಅಲ್ಲಿ ಕಲಿತ ವಿದ್ಯಾರ್ಥಿಗಳಷ್ಟು ಹಟವಾದಿಗಳೂ, ಛಿದ್ರಾನ್ವೇಷಿಗಳೂ ಮತ್ತೆ-ಲ್ಲಿಯೂ ಕಂಡುಬರುವುದಿಲ್ಲ. "ವಿದ್ಯೆಯಿಂದ ಮನುಷ್ಯನು ವಿನೀತ-ನಾಗುತ್ತಾನೆ. ಸಹಿಷ್ಣುತೆಯಿಂದ ಜ್ಞಾನಿಯಾಗುತ್ತಾನೆ. ಎಲ್ಲರನ್ನೂ ಸಮದೃಷ್ಟಿಯಿಂದ ನೋಡುವಂಥವರ ಪರಮೇಶ್ವರಾರಾಧನೆಯು ಎಲ್ಲ-ಕ್ಕಿಂತಲೂ ಶ್ರೇಷ್ಠವಾದದ್ದು."

**सर्वभूतेषु येनैकं भावमव्ययमीक्षते ।**
**अविभक्तं विभक्तेषु तज्ज्ञानं विद्धि सात्त्विकम् ॥**

**— भगवद्गीता.**

ಬೇರೆನಿಸಿ ನಾನಾಪ್ರಕಾರದಿ ।
ತೋರುವಖಿಲ ಪ್ರಾಣಿಗಳ ಸುರೆ ।
ಬೇರೆನಿಸದೇ ನಿತ್ಯನಾಗಿರು ।
ವೊಂದು ವಸ್ತುವನು ॥
ಮೀರಿ ಕಾಂಬನದಾವರಿವಿನಿಂ ।
ಸಾರವೆನಿಪಾ ಅರಿವನೆಲೆ ಕುರು ।
ವೀರ ನೀನರಿ ಸತ್ವಗುಣದಿಂ ಸಂಭವಿಸಿತೆಂದು ॥ —ನಾಗರಸ.

ಎಲ್ಲ ಪ್ರಾಣಿಗಳಲ್ಲಿಯೂ ಒಂದೇ ಅವಿನಾಶಿಯಾದ ಹಾಗು ಅವಿಭಕ್ತ-ವಾದ ಭಾವವು ತುಂಬಿದೆಯೆಂದು ಯಾವ ಜ್ಞಾನದಿಂದ ತಿಳಿಯುತ್ತ-ದೆಯೋ ಅದೇ ಸಾತ್ವಿಕಜ್ಞಾನವು. ಪೃಥ್ವಿಯ ಮೇಲೆ ಪ್ರಚಾರದಲ್ಲಿದ್ದ ಧರ್ಮಸಾಂಪ್ರದಾಯಗಳನ್ನು ಆಯಾ ಮತಾಭಿಮಾನಿಗಳು ಸ್ಥಾಪಿಸಿ-ದ್ದಾರೆ. ಆದರೆ ಜಗತ್ತಿನಲ್ಲಿ ಆಗಿಹೋದ ಮಹಾಸಾಧುಗಳು ಇದುವರೆಗೆ ಒಂದಾದರೂ ಧರ್ಮಪಂಥವನ್ನು ಸ್ಥಾಪಿಸಿದಂತೆ ಕಂಡುಬರುವುದಿಲ್ಲ. ಬೇರೆ ಬೇರೆ ಧರ್ಮಪಂಥಗಳ ಮೂಲಕ ಜಗತ್ತಿನಲ್ಲಿ ಒಟ್ಟು ೭೨ ಮುಖ್ಯ

ಪಂಗಡಗಳಾಗಿವೆಯೆಂದು ಪಾರಸೀ ಗ್ರಂಥಗಳು ಹೇಳುತ್ತವೆ. ಅವೆಲ್ಲ ಧರ್ಮಮತಗಳನ್ನು ಎಷ್ಟು ಪರೀಕ್ಷಿಸಿ ನೋಡಿದರೂ ಪರಮೇಶ್ವರನು ಪರಮಕೃಪಾಳುವೆಂಬ ಒಂದು ತತ್ವದ ಹೊರತು ಬೇರೆ ಸಾಮಾನ್ಯ ತತ್ವವೇ ದೊರಕುವುದಿಲ್ಲ. ಯಾವನ ಆಯುಷ್ಯರೂಪ ಸೂತ್ರದಲ್ಲಿ ಪ್ರೇಮವೆಂಬ ಮಣಿಯು ಪೋಣಿಸಲ್ಪಟ್ಟದೆಯೋ ಅವನಿಗೆ ದೇವರ ನಾಮಸ್ಮರಣೆಯು ಆವಶ್ಯಕತೆಯಿಲ್ಲೆಂಬ ಅನುವಾದವು ಪಾರಸೀ ಗ್ರಂಥಗಳಲ್ಲಿ ದೊರಕುವುದು.

ಸಾಕ್ರೆಟೀಸನೆಂಬ ಗ್ರೀಕ ತತ್ವಜ್ಞಾನಿಯು ಸ್ವಾನುಭವದಿಂದ ಉಪದೇಶ ಮಾಡಿದ್ದೇನಂದರೆ:—"ಚಿತ್ರಗುಪ್ತನ ಮುಂದೆ ಪಾಪಪುಣ್ಯಗಳ ಪರೀಕ್ಷೆಯಾಗುವ ಕಾಲಕ್ಕೆ ಆಯುಷ್ಯವು ನಿಷ್ಪಾಪವೆಂದು ನಿರ್ಣಯವಾಗಬೇಕೆಂಬ ಇಚ್ಛೆಯಿಂದ ನಾನು ಶುದ್ಧಾಚರಣೆಯಿಂದಿದ್ದೇನೆ; ಜಗತ್ತಿನಲ್ಲಿ ಜನರು ಬೆನ್ನಟ್ಟಿದ ಮಾನದ ಹಾಗೂ ಧನದ ತ್ಯಾಗವನ್ನು ಎಂದೋ ಮಾಡಿದ್ದೇನೆ. ಈಗ ನನ್ನಲ್ಲಿ ಸತ್ಯವನ್ನು ತಿಳಿದುಕೊಳ್ಳುವ ಹಂಬಲವೂ, ಮರಣಬಂದಾಗ ಸಾಯಬೇಕೆಂಬ ಇಚ್ಛೆಯೂ ಮಾತ್ರ ಉಳಿದವೆ. ಎಲ್ಲರೂ ಈ ಪ್ರಕಾರ ತಮ್ಮ ವರ್ತನವನ್ನಿಡಬೇಕೆಂದು ನಾನು ಮನಃಪೂರ್ವಕವಾಗಿ ಉಪದೇಶಿಸುತ್ತೇನೆ."

"ದೇವರು ಇದ್ದಾನೆಂತಲೂ, ಅವನು ಎಲ್ಲ ಕಾರ್ಯಗಳನ್ನು ನ್ಯಾಯದಿಂದಲೂ, ಎಲ್ಲರಿಗೆ ಹಿತವಾಗುವಂತೆಯೂ ಜರುಗಿಸುತ್ತಾನೆಂತಲೂ ಭಾವಿಸುವ ಭಾವನೆಯೇ ಭಕ್ತಿಯು. ನೀವು ದೇವರ ಆಜ್ಞೆಗೆ ಅಂಕಿತರಾಗಿದ್ದು, ಬಂದದ್ದನ್ನೆಲ್ಲ ಆದರಿಸಿರಿ; ಮತ್ತು ಅದನ್ನು ಅತ್ಯಂತ ಚತುರನೂ ಜ್ಞಾನಿಯೂ ಆದ ಪರಮೇಶ್ವರನು ತಂದಿದ್ದಾನೆಂದು ತಿಳಿದು, ವಿವೇಕದಿಂದ ವರ್ತಿಸಿರಿ" ಎಂದು 'ಸ್ಟಾಯಿಕ್' ಮತಕ್ಕೆ ಸೇರಿದ ಎಪಿಕ್ಟಿಟಸನೆಂಬ ಗ್ರೀಕ ತತ್ವಜ್ಞಾನಿಯು ಅನ್ನುತ್ತಾನೆ.

"ನೀವು ಜಗತ್ತಿನಲ್ಲಿ ಚಿರಕಾಲ ಬಾಳುವಿರೆಂಬ ಭಾವನೆಯಿಂದ ವರ್ತಿಸಬೇಡಿರಿ; ಯಾಕೆಂದರೆ ಮೃತ್ಯುವು ಯಾವಾಗಲೂ ನಿಮ್ಮ ಬೆನ್ನುಹತ್ತಿ ಇರುವುದು. ನಿಮ್ಮಲ್ಲಿ ಸಾಮರ್ಥ್ಯವೂ ಜೀವವೂ ಇರುವ ತನಕ ಪುಣ್ಯಮಾರ್ಗದಿಂದ ನಡೆಯಿರಿ." —**ಮಾರ್ಕಸ್ ಅರೇಲಿಯಸ್.**

**अद्यैव कुरु यच्छ्रेयो मा त्वां कालोऽत्यगादयम्।**

**वृकीवोरणमासाद्य मृत्युरादाय गच्छति ॥ —महाभारत.**

ಮಾಡತಕ್ಕ ಸತ್ಕಾರ್ಯಗಳನ್ನೆಲ್ಲ ಇವತ್ತೇ ಮಾಡಿಬಿಡು. ಯಾಕೆಂದರೆ, ತೋಳವು ಕುರಿಯನ್ನು ಮುರಿದುಹಾಕುವಂತೆ, ಮೃತ್ಯುವು ನಿನ್ನನ್ನು ಎಂದು ಒಯ್ಯುವುದೆಂಬುದು ನಿನಗೆ ಗೊತ್ತಾಗಲಿಕ್ಕಿಲ್ಲ.

"ಮೃತ್ಯುವು ಎಂದು ಬಂದೀತೆಂಬುದು ನಿನಗೆ ತಿಳಿಯದು. ಆದುದರಿಂದ ನಿನ್ನ ಸದ್ವರ್ತನವನ್ನು ಬಿಡಬೇಡ. ಮರಣವು ಬಂದಾಗ, ಈ ಜಗತ್ತನ್ನು ಬಿಟ್ಟು ಹೇಗೆ ಹೋದೇನೆಂದು ಭಯಪಡಬೇಡ. ದೇವರು ಯಾರಿಗೂ ಎಂದೂ ಸುಮ್ಮನೆ ದುಃಖಕೊಡುವುದಿಲ್ಲ. ಅವನು ಎಲ್ಲರ ಮೇಲೂ ಒಂದೇ ಸಮನಾಗಿ ಪ್ರೀತಿಮಾಡುವನು; ಮತ್ತು ನಿನಗೆ ದುಃಖಗಳಾಗಬಾರದೆಂದು ಅವನು ಎಲ್ಲ ಸುಖಸಾಧನಗಳನ್ನೂ ನಿನ್ನ ಸ್ವಾಧೀನದಲ್ಲಿರಿಸಿರುವನು." —**ಮಾರ್ಕಸ್ ಅರೇಲಿಯಸ್.**

"ದೇವರನ್ನು ಭಜಿಸುವವರು ಅವನ ಅಪಾರ ಸೌಭಾಗ್ಯವನ್ನು ನೋಡಿಯಾಗಲಿ, ಮೇಘಗರ್ಜನೆಯಿಂದ ಪ್ರಕಟವಾಗುವ ಅವನ ಅಪಾರ ಶಕ್ತಿಯನ್ನು ನೋಡಿಯಾಗಲಿ, ಅವನನ್ನು ಭಜಿಸುವುದಿಲ್ಲ; ಆದರೆ ಅವನು ಸರ್ವಸಾಕ್ಷಿಯೂ ಸರ್ವಜ್ಞಾನಿಯೂ ಇರುತ್ತಾನೆಂದು ಭಜಿಸುವರು."

—**ಪ್ಲುಟಾರ್ಕ್.**

ಮೇಲೆ ಹೇಳಿದ ಮೂವರು ಪಾಶ್ಚಾತ್ಯ ನೀತಿಶಾಸ್ತ್ರಕಾರರ ವಚನಗಳ ಮರ್ಮವನ್ನು ತಿಳಿಯುವುದು ಅಷ್ಟು ಕಠಿಣವಲ್ಲ. ಯಾಕೆಂದರೆ ಪೌರ್ವಾತ್ಯ ಗ್ರಂಥಕಾರರ ಎಷ್ಟೋ ಗ್ರಂಥಗಳಲ್ಲಿಯೂ ಈ ಮತಗಳು ಕಂಡುಬರುತ್ತವೆ. ಶೂದ್ರಕರಾಜನು ಬರೆದ ಮೃಚ್ಛಕಟಿಕದಲ್ಲಿ ಶಕಾರನು ವಸಂತಸೇನೆಯ ವಧವನ್ನು ಮಾಡೆಂದು ಮತ್ತು ಆ ಕೃತ್ಯವನ್ನು ನೋಡುವವರು ಆಗ ಅಲ್ಲಿ ಯಾರೂ ಇಲ್ಲೆಂದು ವಿಟನಿಗೆ ಹೇಳಲು ವಿಟನು ಅಂದದ್ದೇನಂದರೆ:—ಹತ್ತು ದಿಕ್ಕುಗಳೂ, ವನದೇವತೆಗಳೂ, ಸೂರ್ಯ-ಚಂದ್ರರೂ, ಧರ್ಮದೇವತೆಯೂ, ವಾಯುವೂ, ಆಕಾಶವೂ, ಹಾಗೇ ಭೂದೇವಿಯೂ ಪರಮಾತ್ಮನೂ ಮನುಷ್ಯರ ಪಾಪಪುಣ್ಯಗಳಿಗೆ ಸಾಕ್ಷಿಗಳಾಗಿರುತ್ತಾರೆ.

ಜಗತ್ತಿನಲ್ಲಿ ಜನರು ನಾಸ್ತಿಕರನ್ನು ಬಹಳ ಹಳಿಯುತ್ತಾರೆ. ಆದರೆ ದೇವರು ಇಲ್ಲೆಂದು ಮನಃಪೂರ್ವಕವಾಗಿ ನಂಬುವವರು ಜನರ ದ್ವೇಷಕ್ಕೆ ಪಾತ್ರರಾಗುವಷ್ಟು ಏನು ತಪ್ಪುಮಾಡಿದ್ದಾರೆಂಬುದು ತಿಳಿಯುವುದಿಲ್ಲ! "ನಾಸ್ತಿಕರು ದೇವರಿಲ್ಲೆಂದು ಪ್ರತಿಪಾದಿಸಿ ಸುಮ್ಮನೆ ಕೂತುಕೊಳ್ಳುತ್ತಾರೆ. ಆದರೆ ಮೂಢಶ್ರದ್ಧೆಯುಳ್ಳ ಜನರು ದೇವರು ಚಂಚಲನೂ ತಾಮಸಿಯೂ ಇರುವನೆಂದು ಪ್ರತಿಪಾದಿಸಿ, ಅವನ ಆರಾಧನೆಗೋಸ್ಕರ ಪಶುಬಲಿ, ನರ-ಬಲಿ ಮೊದಲಾದುವುಗಳನ್ನು ಅರ್ಪಿಸುತ್ತಾರೆ. ದೇವರ ವಿಷಯವಾಗಿ ಈ ಜನರ ಕಲ್ಪನೆಯು ಎಷ್ಟು ಕ್ರೂರವೂ ಅಪಹಾಸ್ಯಾಸ್ಪದವೂ ಆಗಿರು-ವುದು! ದೇವರು ಚಂಚಲನೂ ತಾಮಸಿಯೂ ಎಂದು ಕಲ್ಪಿಸುವುದಕ್ಕಿಂತ, ದೇವರೇ ಇಲ್ಲೆಂದು ಹೇಳುವುದು ಲೇಸು." — **ಪ್ಲುಟಾರ್ಕ್.**

ಸ್ವಾರ್ಥಸಾಧನವೇ ಧರ್ಮವೆಂದು ಎಷ್ಟೋ ಜನರು ತಿಳಿಯುತ್ತಾರೆ. ಸ್ವರ್ಗದಲ್ಲಿ ಮುತ್ತುರತ್ನಗಳೂ, ವಜ್ರವೈಡೂರ್ಯಗಳೂ, ಬೆಳ್ಳಿಬಂಗಾರದ ಪಾತ್ರೆಗಳೂ, ಸುಂದರ ಸ್ತ್ರೀಯರೂ ಸಿಗುತ್ತಾರೆಂದು ತಿಳಿದು ಕೆಲವರು ಸ್ವರ್ಗಸುಖವನ್ನು ಬಯಸುತ್ತಾರೆ.

ಜಗತ್ತಿನಲ್ಲಿ ಆಗಿಹೋದ ಧರ್ಮಯುದ್ಧಗಳಲ್ಲಿ ಎಷ್ಟೋ ಯುದ್ಧಗಳ ಮುಖ್ಯ ಕಾರಣವು ಕೇವಲ ಶಾಬ್ದಿಕವಾಗಿರುವುದು. ಈ ವಾದವು ಹೇಗೆ ಉಪಸ್ಥಿತವಾಗುವುದೆಂಬುದರ ಬಗ್ಗೆ ಒಂದು ವಿನೋದಪರವಾದ ಕಥೆ-ಯುಂಟು. "ಒಮ್ಮೆ ಒಬ್ಬ ಅರಬನೂ ಇರಾಣಿಯೂ ತುರ್ಕನೂ ಗ್ರೀಕನೂ ಕೂಡಿ ಪ್ರವಾಸಮಾಡುತ್ತಿದ್ದರು. ಅವರು ಒಂದು ರಾತ್ರಿ ಧರ್ಮಶಾಲೆಯಲ್ಲಿ ಇಳಿದುಕೊಂಡಾಗ ಏನು ಫಲಾಹಾರ ಮಾಡಬೇ-ಕೆಂಬುದರ ಬಗ್ಗೆ ಅವರಲ್ಲಿ ಮತಭೇದವುಂಟಾಗಿ ಅವರು ಒಬ್ಬರ ಕೂಡೊ-ಬ್ಬರು ಜಗಳಾಡಹತ್ತಿದರು. ಅವರೆಲ್ಲರಿಗೂ ದ್ರಾಕ್ಷೆಯೇ ಬೇಕಾಗಿತ್ತು. ದ್ರಾಕ್ಷೆಗೆ ಅರಬೀ, ಫಾರ್ಸೀ, ತುರ್ಕೀ, ಗ್ರೀಕ ಭಾಷೆಗಳಲ್ಲಿ ಬೇರೆ ಬೇರೆ ಶಬ್ದಗಳಿದ್ದುದರಿಂದ ಅವರ ಜಗಳವು ಅನಿವಾರ್ಯವಾಗಿ ನಡೆಯಿತು. ಕಟ್ಟ-ಕಡೆಗೆ ದ್ರಾಕ್ಷೆ ಹೇರಿದ ಒಂದು ಹೇಸರಗತ್ತೆಯು ಅಲ್ಲಿ ಬರಲು, ತಮಗೆ ಬೇಕಾದ ಪದಾರ್ಥವು ದೊರಕಿತೆಂದು ಆನಂದಪಟ್ಟು ಅವರೆಲ್ಲರು ತಮ್ಮ

ಜಗಳವನ್ನು ತೀರಿಸಿಕೊಂಡು ಮುಂದೆ ನಡೆದರು. ಹೀಗೆ ಶಾಬ್ದಿಕ ವಾದ-ದಿಂದ ಎಷ್ಟು ಅನರ್ಥವಾಗಬಹುದೆಂಬುದನ್ನು ನೋಡಿರಿ! ನಿಜವಾದ ಧರ್ಮತತ್ವಗಳನ್ನು ಅರಿತುಕೊಳ್ಳುವುದು ಅಷ್ಟು ಕಠಿಣವಲ್ಲ. ಯಾಕೆಂದರೆ, “ಪರಮೇಶ್ವರನಿಗೆ ಅಂಜದೆ, ಅವನಿಂದ ಏನೂ ಅಪೇಕ್ಷಿಸದೆ, ಅವನು ದಯಾಳುವೆಂದು ತಿಳಿದು, ಅವನ ಮೇಲೆ ನಿರಪೇಕ್ಷಬುದ್ಧಿಯಿಂದ ಇಡುವ ಪ್ರೇಮವೇ ಭಕ್ತಿಯು. ಪರಮಾತ್ಮನು ದಯಾಳುವೂ ನ್ಯಾಯಿ-ಯೂ ಇರುವನೆಂದು ತಿಳಿದು ಆತನಿಗೆ ಅಂಕಿತರಾಗಿದ್ದು, ನ್ಯಾಯಮಾರ್ಗ-ದಿಂದ ನಡೆದು ಪರೋಪಕಾರ ಮಾಡುತ್ತ ಹೋಗುವುದೇ ಪರಮಾತ್ಮನ ಉತ್ತಮ ಸೇವೆಯು. ಈ ತಿಳಿವಳಿಕೆಯೇ ಧರ್ಮದ ಮುಖ್ಯಸಾರವು.”

ಆದರೆ, ಧರ್ಮದ ಸಾರವನ್ನು ಅರಿತುಕೊಳ್ಳದೆ ಎಷ್ಟೋ ಜನರು ವಿತಂಡವಾದವನ್ನು ಮಾತ್ರ ಮಾಡುತ್ತಿರುತ್ತಾರೆ. “ಧರ್ಮಪುಸ್ತಕಗಳಲ್ಲಿ ಧರ್ಮತತ್ವಗಳನ್ನು ಪ್ರತಿಪಾದಿಸಲಿಕ್ಕೆ ಉಪಯೋಗಿಸಿದ ಶಬ್ದಗಳ ಅರ್ಥವು ನಿಶ್ಚಿತವಾಗದ್ದರಿಂದ ಧರ್ಮಗ್ರಂಥಗಳು ಪ್ರಾಚೀನಕಾಲದಿಂದ ವಾದಕ್ಕೆ ಕಾರಣಗಳಾಗಿವೆ. ಇಂಥ ವಾದಜನಕ ಗ್ರಂಥಗಳು ಧರ್ಮತತ್ವಗಳಿಗೆ ಆಧಾರವೆಂದು ತಿಳಿದು ಧರ್ಮದ ವಿಷಯವಾಗಿ ವಿಚಾರಮಾಡಿದ್ದರಿಂದ ಮಾನ್ಯವಲ್ಲದ ಪ್ರತಿಜ್ಞೆಗಳಿಂದ ಸಿದ್ಧಾಂತವನ್ನು ತೆಗೆದಂತಾಗಿದೆ. ಸಿದ್ಧ-ಮಾಡದ ಪ್ರತಿಜ್ಞೆಗಳಿಂದ ಅನುಮಾನವನ್ನು ತೆಗೆಯುವುದೂ, ಶಬ್ದಗಳ ಅರ್ಥವನ್ನು ನಿಶ್ಚಿತವಾಗಿ ಗೊತ್ತುಹಚ್ಚದೆ ಪ್ರತಿಜ್ಞೆಗಳನ್ನು ಮಾಡುವುದೂ ಸರಿಯಲ್ಲ. ಯಾವ ಶಬ್ದಗಳ ವ್ಯಾಖ್ಯೆಯನ್ನು ಸರಿಯಾಗಿ ಮಾಡಲಿಕ್ಕೆ ಬರುವುದಿಲ್ಲವೋ ಅಂಥ ಶಬ್ದಗಳ ಶುಷ್ಕವಾದದಿಂದ ಮತಭೇದವುಂಟಾಗಿ ಬೇರೆ ಬೇರೆ ಧರ್ಮಾನುಯಾಯಿಗಳಲ್ಲಿ ವೃಥಾದ್ವೇಷವುಂಟಾಗಿದೆ.”

— **ಜೊವೆಟ್**.

ಧರ್ಮದ ವಿಷಯವಾಗಿ ವಿಚಾರಮಾಡುವ ಜನರು ಎರಡು ಪ್ರಕಾ-ರದ ಸಂಶಯಗಳಿಗೆ ಒಳಗಾಗಿದ್ದಾರೆ. ಮೊದಲನೆಯ ಪ್ರಕಾರದವರು ಸಬಲ ಆಧಾರಗಳಿಲ್ಲದೆ ಸಿದ್ಧಾಂತಗಳನ್ನು ನಿರ್ಣಯಿಸುತ್ತಾರೆ. ಎರ-ಡನೆಯ ಪ್ರಕಾರದವರು ಸಬಲ ಆಧಾರಗಳಿದ್ದರೂ ಚಿತ್ತಚಾಂಚಲ್ಯದ

ಮೂಲಕ ಯಾವ ಮತವನ್ನೂ ನಿರ್ಣಯಿಸಲಾರರು. ಯಾವ ಮತ-ವನ್ನಾದರೂ ಸಬಲ ಆಧಾರಗಳಿಲ್ಲದೆ ನಿರ್ಣಯಿಸುವುದು ನ್ಯಾಯ್ಯ-ವಾಗದು.

ಈ ಜಗತ್ತಿನ ಉತ್ಪತ್ತಿಯು ಹೇಗಾಯಿತು, ಈಗ ಅದು ಹೇಗದೆ, ಮುಂದೆ ಅದಕ್ಕೆ ಯಾವ ಸ್ಥಿತಿಯು ಪ್ರಾಪ್ತವಾಗುವುದು ಎಂಬ ಮಾತು-ಗಳ ಬಗ್ಗೆ ಸವಿಸ್ತಾರವಾದ ಚರ್ಚೆಯು ಧರ್ಮಗ್ರಂಥಗಳಲ್ಲಿರಬೇಕೆಂಬು-ವುದು ಸರಿಯಾಗಲಾರದು. ವಿದ್ಯುಲ್ಲತೆ, ಉಷ್ಣತೆ ಮೊದಲಾದ ವಿಷಯ-ಗಳ ಮೇಲೆ ನಾಮಾಂಕಿತ ಗ್ರಂಥಕಾರರು ಬರೆದ ಗ್ರಂಥಗಳಲ್ಲಿ ಸಹ ವಿದ್ಯುಲ್ಲತ, ಉಷ್ಣತೆ ಮೊದಲಾದುವುಗಳ ಉತ್ಪತ್ತಿಯ ವಿಷಯವಾಗಿ ಸ್ವಲ್ಪಾದರೂ ಉಲ್ಲೇಖವಿಲ್ಲ. ಅದರಂತೆಯೇ ಜೀವದ ಉತ್ಪತ್ತಿಯು ಹೇಗಾಯಿತೆಂಬುದರ ಬಗ್ಗೆ ಚರಾಚರ ಶಾಸ್ತ್ರದಲ್ಲಿ ಒಬ್ಬನೂ ಸಹ ಬರೆ-ದಂತೆ ಕಂಡುಬರುವುದಿಲ್ಲ. ಹೀಗಿದ್ದ ಮೇಲೆ ಧರ್ಮಗ್ರಂಥಗಳ ಮೇಲೆ-ಯೇ ಇಷ್ಟು ಭಾರವನ್ನು ಹಾಕುವ ಕಾರಣವೇನು?

'ಸಾಯರಾಕ್ಯೂಜದಲ್ಲಿ' 'ಹಾಯರೋ' ಎಂಬ ಬಾದಶಹನು 'ಸಾಯ-ಮೋನಿಡಿಜಸೆಂಬ' ಪಂಡಿತನಿಗೆ ದೇವರು ಯಾರು? ಹೇಗಿದ್ದಾನೆಂಬುದನ್ನು ಹೇಳೆಂದು ಕೇಳಿದನು. ಅದಕ್ಕೆ ಆ ಪಂಡಿತನು ಒಂದು ದಿವಸದ ಅವಧಿಯು ಬೇಕೆಂದು ಹೇಳಿಕೊಂಡನು. ಮರುದಿವಸ ಅರಸನು ಪ್ರಶ್ನದ ಉತ್ತರವೇನೆಂದು ಕೇಳಲು ಮತ್ತೆ ಒಂದು ದಿನದ ಅವಧಿಯನ್ನು ಕೊಡಿರೆಂದು ಬೇಡಿಕೊಂಡನು. ಹೀಗೆ ಬಹಳ ದಿವಸಗಳಾದ ಮೇಲೆ ಹಾಯರೋನು ಆ ಪಂಡಿತನನ್ನು ಕೇಳಲು, "ನಾನು ದೇವರ ವಿಷಯ-ವಾಗಿ ವಿಚಾರಮಾಡಿದ ಹಾಗೆ, ವಿಷಯವು ಹೆಚ್ಚು ಹೆಚ್ಚು ಅಗಾಧ-ವಾಗುತ್ತ ಹೋಗುತ್ತದೆ. ಆದ್ದರಿಂದ ನಿಮ್ಮ ಪ್ರಶ್ನಗಳಿಗೆ ಉತ್ತರ ಕೊಡ-ಲಾರೆನೆಂದು" ಆ ಪಂಡಿತನು ಹೇಳಿದನು.

ಬೇರೆ ಬೇರೆ ಧರ್ಮಗ್ರಂಥಗಳಲ್ಲಿ ಪರಮೇಶ್ವರನ ಸ್ವರೂಪವು ಬೇರೆ ಬೇರೆ ರೀತಿಯಿಂದ ವರ್ಣಿಸಲ್ಪಟ್ಟಿದೆ. ಈ ವಿಷಯವಾಗಿ ವೇದದಲ್ಲಿ ಹೇಳಿಪ್ಪೇನಂದರೆ:— ಸೂರ್ಯನಲ್ಲಿ ತೇಜಸ್ಸೂ, ತೇಜಸ್ಸಿನಲ್ಲಿ ಸತ್ಯವೂ,

ಸತ್ಯದಲ್ಲಿ ಅಕ್ಷರಬ್ರಹ್ಮನೂ ಇರುವರು. ಋಗ್ವೇದ ಸಂಹಿತೆಯಲ್ಲಿ ದೇವರು ವರ್ತುಲಾಕಾರವಾಗಿದ್ದಾನೆಂದು ಕಲ್ಪಿಸಿದ್ದಾರೆ. ಆ ವರ್ತುಲದ ಮಧ್ಯ-ಬಿಂದುವು ಎಲ್ಲ ಕಡೆಯಲ್ಲಿಯೂ ಇರುವುದು. ಆದರೆ ಅದರ ಪರೀಘವು ಎಲ್ಲಿ ಅದೆಯೆಂಬುದು ಯಾರಿಗೂ ಗೊತ್ತಿಲ್ಲ.

ಕ್ರಿಸ್ತೀಜನರ ಧರ್ಮಪುಸ್ತಕದಲ್ಲಿ ದೇವರ ವರ್ಣನೆಯು ಕೆಳಗೆ ಸೂಚಿಸಿದಂತೆ ಇರುತ್ತದೆ.

“ಕೃಪಾಳುವಾದ ದೇವರಲ್ಲಿ ಮತ್ಸರವಿಲ್ಲ, ಗರ್ವವಿಲ್ಲ, ತಿರಸ್ಕಾರವಿಲ್ಲ; ಅವನಿಂದ ಎಂದೂ ದುಷ್ಕೃತಿಯಾಗುವುದಿಲ್ಲ; ಅವನು ಸ್ವಾರ್ಥಿಯಲ್ಲ, ತಾಮಸನಲ್ಲ. ಅವನು ಮಂಗಲರೂಪಿಯೂ ನ್ಯಾಯಿಯೂ ಸತ್ಯ-ಪ್ರಿಯನೂ ಸಹನಶೀಲನೂ ಆಗಿರುವನು. ಸೃಷ್ಟಿಯೊಳಗಿನ ಎಲ್ಲ ವಸ್ತುಗಳು ಲಯಹೊಂದಿದರೂ, ಪರಮೇಶ್ವರನು ಎಂದೂ ಲಯಹೊಂದನು.”

ಧರ್ಮಸಂಬಂಧದಿಂದ ಮನುಷ್ಯನ ಮನಸ್ಸು ಸಾಶಂಕವಾದರೂ ಅವನು ಭಕ್ತಿಹೀನನಾಗುವ ಕಾರಣವಿಲ್ಲ. ಸಾಧುಸಂತರು ಭಕ್ತಿಯಿಂದಲೇ ದೇವರನ್ನು ವಶಮಾಡಿಕೊಂಡಿದ್ದಾರೆ.

ಎಷ್ಟೋ ಜನರು ತಮ್ಮ ಪಾಪಾಚರಣೆಯನ್ನು ಜಪ, ತಪ, ದಾನ-ಧರ್ಮಗಳಿಂದ ಕ್ಷಾಲನಮಾಡಿಕೊಳ್ಳಬೇಕೆಂದು ಯತ್ನಿಸುತ್ತಾರೆ. ಆದರೆ ಈ ಯತ್ನವು ನಿಷ್ಫಲವೇ ಸರಿ. ಯಾಕೆಂದರೆ ಸ್ವರ್ಗಕ್ಕೆ ಸದಾಚರಣೆ-ಯಂಥ ಸುಮಾರ್ಗವು ಮತ್ತೊಂದಿಲ್ಲ.

ಅತಿಪ್ರಾಚೀನಕಾಲದಿಂದ ಮನುಷ್ಯನು ಧರ್ಮಸಂಬಂಧದಿಂದ ವಿಚಾ-ರಮಾಡುತ್ತ ಬಂದರೂ ಈ ಹೊತ್ತಿನ ವರೆಗೆ ಅವನ ಸಂಶಯದ ನಿವೃತ್ತಿಯು ಆದಂತೆ ಕಂಡುಬರುವುದಿಲ್ಲ; ಮುಂದೆ ಆಗುವುದೂ ಕಷ್ಟವೇ; ಆದರೂ ಸಹ ನಾವು ನಮ್ಮ ಉತ್ಪತ್ತಿಯು ಹೇಗಾಯಿತೆಂಬುದರ ವಿಷಯವಾ-ಗಿಯೂ, ಮುಂದೆ ನಮ್ಮ ಗತಿಯು ಏನಾಗುವುದೆಂಬುದರ ವಿಷಯವಾ-ಗಿಯೂ, ಬೇರೆ ಬೇರೆ ಜನರು ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಮನನ-ಮಾಡುವುದು ಅವಶ್ಯವಾಗಿದೆ. ವರ್ಡ್ಸ್‌ವರ್ಥನೆಂಬ ಆಂಗ್ಲಕವಿಯು ಅಭಿ-ಪ್ರಾಯಪಡುವುದೇನಂದರೆ:—

"ಪ್ರಾಣಿಯು ಜನ್ಮಕ್ಕೆ ಬಂದು ಎಲ್ಲವನ್ನೂ ಮರೆತು ಘೋರನಿದ್ರೆಯನ್ನು ಮಾಡುತ್ತಿರುವನು. ಎಲ್ಲಿಂದ ಬಂದೆನೆಂಬ ತಿಳಿವಳಿಕೆಯು ಆತನಿಗೆ ಉಳಿಯದೆ ಪೂರಾ ಭ್ರಾಂತನಾಗಿದ್ದಾನೆ. ಆದರೂ ಸಹ ಕೆಲಮಟ್ಟಿಗೆ ನಿಶ್ಚಿತವಾದ ಮಾತುಗಳನ್ನು ಇಲ್ಲಿ ಹೇಳಬಹುದು. ಜೀವಾತ್ಮವು ಎಂದೋ ಅಸ್ತವಾದದ್ದು ಈಗ ಉದಯವಾಗಿದೆ. ಈ ಲೋಕಕ್ಕೆ ಬರುವಾಗ ಅದು ಪೂರ್ವಜನ್ಮಗಳ ಸಂಸ್ಕಾರವನ್ನೂ, ತತ್ಸಂಬಂಧದ ಗುಣಗಳನ್ನೂ ಬಿಡದೆ, ಪರಮಾತ್ಮನಿಂದ ವೈಭವವನ್ನು ಪಡೆದುಕೊಂಡಿದೆ."

ಸತ್ಯವನ್ನು ತಿಳಿದುಕೊಳ್ಳುವುದಕ್ಕೆ ಮನಃಪೂರ್ವಕವಾಗಿ ಶ್ರಮಬಡುವಂಥ ಅಥವಾ ಧರ್ಮದ ದೆಸೆಯಿಂದ ತಮ್ಮ ಆಯುಷ್ಯವನ್ನೆಲ್ಲ ಅರ್ಪಿಸಿ ಪ್ರಸಂಗವಿಶೇಷದಲ್ಲಿ ಜೀವಕೊಡಲಿಕ್ಕೆ ಸಿದ್ಧರಾದ ಸತ್ಪುರುಷರ ನಿಂದೆಯನ್ನು ನಾವು ಮಾಡುತ್ತೇವೆಂದು ಯಾರೂ ತಿಳಿಯಕೂಡದು. ಆದರೆ ಇದುವರೆಗೆ ಧರ್ಮದ ದೆಸೆಯಿಂದ ಜೀವಕೊಟ್ಟ ಪುರುಷರು ಸತ್ಯದ ದೆಸೆಯಿಂದ ಪ್ರಾಣಕೊಟ್ಟಂತೆ ಕಂಡುಬರುವುದಿಲ್ಲ.

"**ಸತ್ಯಾನ್ನಾಸ್ತಿ ಪರೋ ಧರ್ಮಃ।**" ಎಂದು ಮನುಸ್ಮೃತಿಯು ಸಾರಿಹೇಳುತ್ತದೆ. ಅದನ್ನು ಪ್ರತಿಯೊಬ್ಬನೂ ನೆನಪಿನಲ್ಲಿಟ್ಟು ಸತ್ಯವನ್ನು ಪಾಲಿಸತಕ್ಕದ್ದು. ಯಾಕೆಂದರೆ "ಆತ್ಮಕ್ಕೆ ಸತ್ಯವು ಸೇರುತ್ತದೆ. ಮತ್ತು ಸತ್ಯದ ದೆಶೆಯಿಂದಲೇ ಆತ್ಮವು ಜೀವಿಗಳನ್ನು ಎಲ್ಲ ಕಾರ್ಯಗಳಲ್ಲಿ ಪ್ರವರ್ತಿಸುತ್ತದೆ." ಆದುದರಿಂದ ಸತ್ಯಶೋಧನಕ್ಕಾಗಿ ಪ್ರತಿಯೊಬ್ಬನು ಪರಿಶ್ರಮಮಾಡಬೇಕಲ್ಲದೆ ಎರಡನೆಯವರನ್ನು ಪೀಡಿಸುವ ಕಾರಣವಿಲ್ಲ.

ಧರ್ಮವಿಷಯಕವಾದ ವಿವಾದದಿಂದ ಧರ್ಮದ ಪ್ರಸಾರವಾಗುವುದಿಲ್ಲ. ಮತ್ತು ಧರ್ಮಚ್ಛಲಮಾಡುವುದರಿಂದ ಯಾರೂ ಧರ್ಮಾಂತರ ಮಾಡುವುದಿಲ್ಲ. ತಮ್ಮ ಧರ್ಮವನ್ನು ಸ್ವೀಕರಿಸದೆ ಇದ್ದ ಪರಧರ್ಮಿಗಳು ಕಟ್ಟಕಡೆಗೆ ರೌರವ ನರಕದಲ್ಲಿ ಶಿಕ್ಷೆಯವಾಗಿ ಬೀಳುತ್ತಾರೆಂದು ಅನೇಕ ಧರ್ಮಮೂಢರು ತಿಳಿಯುತ್ತಾರೆ.

ಧರ್ಮದ ದೆಸೆಯಿಂದ ಬಲಾತ್ಕಾರಮಾಡುವಂಥ ಜನರು ದೇವರು ಪರಮ ಕಾರುಣಿಕನೆಂಬ ಮಾತನ್ನು ಮರೆತುಬಿಟ್ಟು ನಿಷ್ಕಾರಣವಾಗಿ ತಮ್ಮ ಬಂಧುಗಳಾದ ಪರಧರ್ಮಿಗಳನ್ನು ಪೀಡಿಸುತ್ತಾರೆ.

"ಸನ್ ೧೪೧೫ನೆಯ ಇಸವಿಯಲ್ಲಿ ವಿಕ್ಲಿಫ್‌ನೆಂಬ ಧರ್ಮಸುಧಾರಕನ ಪ್ರೇತವನ್ನು ಅವನ ಪ್ರತಿಪಕ್ಷಿಗಳು ಗೋರಿಯೊಳಗಿಂದ ಕೆದರಿ ತೆಗೆದು ಸುಟ್ಟು-ಬಿಟ್ಟರು. ಮತ್ತು ಬೂದಿಯನ್ನು ಸಮೀಪದಲ್ಲಿಯೇ ಹರಿಯುತ್ತಿದ್ದ ಹಳ್ಳದಲ್ಲಿ ಚೆಲ್ಲಿಬಿಟ್ಟರು. ಬೂದಿಯು ಆ ಹಳ್ಳದಿಂದ ಎವ್ಹಾನ ನದಿಗೆ, ಎವ್ಹಾನದಿಂದ ಸೆವ್ಹರ್ನಕ್ಕೆ, ಸೆವ್ಹರ್ನದಿಂದ ಸಮುದ್ರಕ್ಕೆ, ಸಮುದ್ರದಿಂದ ಮಹಾಸಾಗರಕ್ಕೆ ಹೋಯಿತು. ಈ ಪ್ರಕಾರ ವಿಕ್ಲಿಫನ ಬೂದಿಯು ಪ್ರವಾಸಮಾಡುತ್ತ, ಯುರೋಪಖಂಡದೊಳಗೆಲ್ಲ ಅವನ ಮತಪ್ರಸಾರವನ್ನು ಮಾಡಿಬಿಟ್ಟಿತು."

ಜ್ಯೂಜನರ (ಯಹುದೀ ಜನರ) ಧರ್ಮಗ್ರಂಥದಲ್ಲಿ ಧರ್ಮದ ಮುಖ್ಯ ಆಚಾರವನ್ನು ಸ್ವಲ್ಪದರಲ್ಲಿ ವಿವರಿಸಿದ್ದಾರೆ. "ಜನರು ನಿನ್ನ ಕೂಡ ಹೇಗೆ ವರ್ತಿಸಬೇಕೆಂದು ಇಚ್ಛಿಸುತ್ತೀಯೋ, ಹಾಗೆಯೇ ನೀನಾದರೂ ಅವರ ಕೂಡ ವರ್ತಿಸು. ಇದೇ ಧರ್ಮದ ಮುಖ್ಯ ಆಚರಣೆಯು."

" **न तत्परस्य संदध्यात्प्रतिकूलं यदात्मनः ।**
**एष संक्षेपतो धर्मः कामादन्यः प्रवर्तते ॥"**

—महाभारत.

(ಯಾವ ಸಂಕಟಗಳಿಂದ ನಮಗೆ ದುಃಖವಾಗುತ್ತದೆಯೋ, ಅಂಥ ಸಂಕಟಗಳು ಎರಡನೆಯವರ ಮೇಲೆ ಬಾರದಂತೆ ಯತ್ನಿಸಬೇಕು. ಇದೇ ಧರ್ಮವು. ಅಧರ್ಮವು ಕಾಮದಿಂದ ಉಂಟಾಗುತ್ತದೆ.)

ಕ್ರೈಸ್ತನು ತನ್ನ ಭಕ್ತರಿಗೆ ಉಪದೇಶಿಸಿದ್ದೇನಂದರೆ:—ಎಲ್ಲ ಪ್ರಾಣಿ-ಗಳ ಮೇಲೆ ಒಂದೇ ಸಮನಾಗಿ ಪ್ರೀತಿಮಾಡುವವರೇ ನನ್ನ ಭಕ್ತರು. ನಿರಾಶ್ರಿತರಾದವರಿಗೆ ಸಹಾಯಮಾಡುವ ವ್ರತವನ್ನು ಕೈಕೊಂಡ ಮಹಾ-ತ್ಮರೇ ಧರ್ಮಿಷ್ಠರು.

ಕಡಿಮೆ ಸುಧಾರಿಸಿದ ಜನರಲ್ಲಿ ಧರ್ಮವು ಪ್ರಾಯಃ ಭಯಂಕರವೆಂಬ ತಿಳುವಳಿಕೆಯು ನೆಲೆಗೊಂಡಿದೆ. ಅವರು ದೇವತೆಗಳು ಮಿಷ್ಟಾನ್ನದಿಂದ

ಇಲ್ಲವೆ ಬಲಿದಾನದಿಂದ ಸಂತುಷ್ಟವಾಗುತ್ತವೆಂದು ತಿಳಿಯುತ್ತಾರೆ. ಒಮ್ಮೊಮ್ಮೆ ಅವುಗಳನ್ನು ಸಂತೋಷಪಡಿಸಲಿಕ್ಕೆ ಅವರು ನರಬಲಿಯನ್ನು ಸಹ ಕೊಡುವರು. ಮಂತ್ರಸಾಮರ್ಥ್ಯವು ಆ ದೇವತೆಗಳ ಆರಾಧನೆಯಿಂದ ಪ್ರಾಪ್ತವಾಗುತ್ತದೆಂದು ಅವರು ನಂಬುತ್ತಾರೆ. ಇಂಥ ಧರ್ಮಾಧಿಕಾರಕ್ಕೆ ಒಳಪಟ್ಟ ಜನರ ಜೀವಕ್ಕೆ ಸ್ವಾಸ್ಥ್ಯವೇ ಇಲ್ಲ. ತಮ್ಮ ಮೇಲೆ ಆ ದೇವತೆಗಳ ರೋಷವು ಎಂದು ಹೇಗಾದೀತೆಂಬುದು ಅವರಿಗೆ ಗೊತ್ತಾಗದಕಾರಣ ಅವರು ಆ ದೇವತೆಗಳಿಗೆ ಬಹಳ ಅಂಜುವರು. ರೋಗ ಮೊದಲಾದ ಅನಿಷ್ಟಗಳು ಆ ದೇವತೆಗಳಿಂದಲೇ ಉಂಟಾಗುವುವೆಂದು ಅವರು ತಿಳಿಯುತ್ತಾರೆ.

ಚಿಕ್ಕ ಮಕ್ಕಳು ಅಜ್ಞಾನದ ಮೂಲಕ ಕತ್ತಲೆಗೆ ಅಂಜುವಂತೆ ಮೂಢಜನರಾದರೂ ಅಜ್ಞಾನದ ಮೂಲಕ ದೇವತೆಗಳು ಕ್ರೂರವಿರುತ್ತವೆಂದು ತಿಳಿಯುತ್ತಾರೆ; ಮತ್ತು ಅವುಗಳಿಗೆ ಅಂಜುತ್ತಾರೆ. ಈ ಅಂಜಿಕೆಯು ವಿದ್ಯಾಪ್ರಸಾರವಾದಂತೆ ತನ್ನಷ್ಟಕ್ಕೆ ತಾನೇ ಕಡಿಮೆಯಾಗುವುದು. ಶುದ್ಧಧರ್ಮದ ಅಸ್ತಿತ್ವವು ಜ್ಞಾನದ ಬೆಳೆವಣಿಗೆಯಾದಂತೆ ಸುದೃಢವಾಗುವುದು; ಆದರೆ ಶುಷ್ಕವಾದದಿಂದ ಎಂದೂ ಅದರ ಅಭಿವೃದ್ಧಿಯಾಗದು. ಧರ್ಮದ ಉತ್ಪತ್ತಿಯು ಪ್ರೇಮದಿಂದ ಉಂಟಾಗಿ ಅದರ ಅಭಿವೃದ್ಧಿಯು ಜ್ಞಾನದಿಂದ ಆಗುವುದು.

ಮೇಲೆ ಹೇಳಿದ ತತ್ವಗಳನ್ನು ಮನನಮಾಡಿ ಶುದ್ಧಧರ್ಮವನ್ನು ಪಾಲಿಸುವವರು ಸುಖಿಗಳಾಗುವರು.

---

# ದ್ವಾದಶಾಧ್ಯಾಯ.

## ಉತ್ಕರ್ಷಾಶೆ.

ಬರಬರುತ್ತ ಮಾನವ ಪ್ರಾಣಿಗಳ ಉತ್ಕರ್ಷವು ಆಗುತ್ತಹೋಗಬಹುದೆಂದು ಆಶಿಸಲಿಕ್ಕೆ ಎರಡು ಕಾರಣಗಳಿವೆ. ಕಾಲಾಂತರದಿಂದ ಸೃಷ್ಟಿಯಲ್ಲಿಯ ಜಡಪದಾರ್ಥಗಳ ಧರ್ಮವು ಗೊತ್ತಾಗಹತ್ತಿ ನಮ್ಮ ಸುತ್ತಲೂ ಪ್ರತಿಕ್ಷಣಕ್ಕೆ ಸಂಭವಿಸುವ ಸೃಷ್ಟಿಚಮತ್ಕಾರಗಳ ಜ್ಞಾನವು ಹೆಚ್ಚಾಗಹತ್ತಿದ್ದರಿಂದ ನಮಗೆ ಈಗ ಉಂಟಾದ ಅನುಕೂಲತೆಗಳಿಗಿಂತ ಹೆಚ್ಚಿನ ಅನುಕೂಲತೆಗಳು ನಮ್ಮ ಮಕ್ಕಳು ಮೊಮ್ಮಕ್ಕಳಿಗೆ ಆಗುವುವೆಂಬುದೇ ಉತ್ಕರ್ಷದ ಒಂದು ಶುಭಸೂಚನೆಯಾಗಿದೆ. ಇನ್ನು ಎರಡನೆಯ ಶುಭಸೂಚನೆ ಯಾವುದೆಂದರೆ:—ಶಿಕ್ಷಣಕ್ರಮದಲ್ಲಿ ಸುಧಾರಣೆಯುಂಟಾಗಿ ಸಾರ್ವತ್ರಿಕ ಶಿಕ್ಷಣವು ಪ್ರಚಾರದಲ್ಲಿ ಬಂದು ಶಾಸ್ತ್ರ, ಕಲೆ, ಕಾವ್ಯ, ಸಂಗೀತ, ಧರ್ಮ ಮೊದಲಾದುವುಗಳ ಯಥಾರ್ಥಜ್ಞಾನದಿಂದ ಮಾನವ ಪ್ರಾಣಿಗಳಿಗೆ ಸದ್ವರ್ತನದ ನಿಯಮಗಳು ಗೊತ್ತಾಗಿ ಅವುಗಳಂತೆ ಅವರು ಆಚರಿಸಹತ್ತಿದರೆ ಅವರ ಉತ್ಕರ್ಷವು ಹೆಚ್ಚಾಗುತ್ತಹೋಗುವುದು. ಮತ್ತು ಅನುಕೂಲವಿದ್ದ ಸುಖಸಾಧನಗಳ ಉಪಭೋಗವನ್ನು ತೆಗೆದುಕೊಳ್ಳಲಿಕ್ಕೆ ಅವರಲ್ಲಿ ವಿಶೇಷವಾದ ಪಾತ್ರತೆಯುಂಟಾಗುವುದರಿಂದ ಅವರು ಸುಖಿಗಳಾಗುವರು.

ದೇವರು ನಿರ್ಮಿಸಿದ ಸೃಷ್ಟಿಯಲ್ಲಿ, ಮನುಷ್ಯರು ಸುಧಾರಣೆಯನ್ನು ಮಾಡುತ್ತಾರೆಂದೆನ್ನುವುದು ಅವರ ಅಹಂಕಾರವನ್ನೂ ಕೃತಘ್ನತೆಯನ್ನೂ ವ್ಯಕ್ತಪಡಿಸುತ್ತದೆಂದು ಕೆಲವರ ಅಭಿಪ್ರಾಯವು. ಇಂಥ ತಪ್ಪು ತಿಳಿವಳಿಕೆಯಿಂದಲೇ ಮನುಷ್ಯನ ಉತ್ಕರ್ಷದ ಗತಿಯು ಕುಂಠಿತವಾಗಿದೆ. ಮನುಷ್ಯನು ತನ್ನ ಬುದ್ಧಿಬಲದಿಂದ ಹೊಸ ಶೋಧಗಳನ್ನು ಮಾಡುತ್ತ ಬಂದಿದ್ದಾನೆ. ಆದರೆ ಶೋಧಕರಿಗೆ ದೇವರು ಶಾಸನಮಾಡಿದಂತೆ

ಕಂಡುಬರುವುದಿಲ್ಲ. ನಿಜವಾಗಿ ನೋಡಲು ಹೊಸ ಶೋಧಗಳಿಂದ ಮನುಷ್ಯನ ಸುಖವು ಹೆಚ್ಚಾಗಬೇಕೆಂದು ಪರಮೇಶ್ವರನ ಇಚ್ಛೆಯಿದ್ದಂತೆ ಕಂಡುಬರುತ್ತದೆ. ಮೂಢರು ಮಾತ್ರ ಮೇಲೆ ಹೇಳಿದಂತೆ ವಿರುದ್ಧ-ಮತವುಳ್ಳವರಿರುವರು. ಮನುಷ್ಯನಿಗೆ ಪ್ರಾಕ್ತನ ಕರ್ಮದಂತೆ ಒದಗುವ ದೇಹಯಾತನೆಗಳೂ ದುಃಖಗಳೂ ಪರಮೇಶ್ವರನ ಇಚ್ಛೆಯಂತೆ ಒದ-ಗುತ್ತವೆಂದು ತಿಳಿಯುವವರು ಕ್ಲೋರೋಫಾರ್ಮ ಮೊದಲಾದ ದುಃಖ-ನಿವಾರಕ ಉಪಾಯಗಳನ್ನು ಯೋಜಿಸುವುದರಿಂದ ದೇವರ ಇಚ್ಛಾಭಂಗ-ವಾಗುತ್ತದೆಂದು ತಿಳಿಯುತ್ತಾರೆ.

ಪ್ರಾಚೀನಕಾಲದಲ್ಲಿ ನಾರ್ಥಂಭ್ರಿಯಾದ ರಾಜನ ಸಭೆಗೆ ಒಬ್ಬ ಕ್ರಿಸ್ತೀ ಸಾಧುವು ಬರಲು ಅವನ ಉಪದೇಶವನ್ನು ಕೇಳಬಹುದೋ ಇಲ್ಲವೋ ಎಂಬ ಮಾತಿನ ನಿರ್ಣಯದ ದೆಸೆಯಿಂದ ಆ ರಾಜನು ಎಲ್ಲ ಮಂತ್ರಿಮಂಡಲವನ್ನೂ ಕರೆದನು. ಆಗ ಒಬ್ಬ ಮಂತ್ರಿಯು ರಾಜನನ್ನು ಕುರಿತು ಅಂದದ್ದೇನಂದರೆ:—“ಮಹಾರಾಜರೇ, ‘ಈ ಉಪದೇಶಕನು. ಮನುಷ್ಯನು ಜನ್ಮಕ್ಕೆ ಬರುವುದಕ್ಕಿಂತ ಮೊದಲು ಎಲ್ಲಿದ್ದನು ಮತ್ತು ಮರ-ಣದನಂತರ ಎಲ್ಲಿ ಹೋಗುವನು’ ಎಂಬ ಪ್ರಶ್ನಗಳಿಗೆ ಸಮರ್ಪಕ ಉತ್ತರ-ಗಳನ್ನು ಕೂಡಲೊಪ್ಪಿದರೆ ಅವನು ಎಲ್ಲರಿಗೂ ಉಪದೇಶಮಾಡಲಿಕ್ಕೆ ಯೋಗ್ಯನು; ಇಲ್ಲವಾದರೆ ಅಯೋಗ್ಯನು.”

ಇತ್ತಿತ್ತಲಾಗಿ ಬುದ್ಧಿವಂತರು ಎಷ್ಟೋ ಹೊಸ ಶೋಧಗಳನ್ನು ಮಾಡಿದ್ದಾರೆ. ಆದರೂ ಇನ್ನೂ ಎಷ್ಟೋ ಹೊಸ ಚಮತ್ಕಾರಗಳ ಶೋಧವು ಆಗಬೇಕಾಗಿದೆ. ಆದರೆ ಅಂಥ ಶೋಧಗಳು ಯಾರಿಂದಲೂ ಆಗಲಿಕ್ಕಿಲ್ಲೆಂದು ಕೆಲವರು ತಿಳಿಯುತ್ತಾರೆ. ಪಾರ್ಕಸಂಬವನು ಅರ-ಬರಿಗೆ:—“ರಾತ್ರಿಯಲ್ಲಿ ಸೂರ್ಯನು ಎಲ್ಲಿ ಹೋಗುತ್ತಾನೆ? ಪ್ರತಿದಿನ ಉದಯವಾಗುವ ಸೂರ್ಯನು ಒಬ್ಬನೋ? ಅಥವಾ ಭಿನ್ನನೋ?” ಎಂದು ಕೇಳಲು, ಅದಕ್ಕೆ ಅವರು ಹೇಳಿದ್ದೇನಂದರೆ:—“ನೀವು ಹೀಗೆ ಕೇಳು-ವುದು ಸರಿಯಲ್ಲ. ಯಾಕೆಂದರೆ ಇಂಥ ಮಾತುಗಳನ್ನು ಗೊತ್ತುಹಚ್ಚು-ವುದು ಮನುಷ್ಯ ಪ್ರಾಣಿಗಳಿಂದ ಎಂದೂ ಆಗದು.” ಎಮ್. ಕೋಮ್ಟ

(M. Comte)ನೆಂಬ ತತ್ವಜ್ಞನು ಗ್ರಹಗಳ ಆಕಾರವೂ ಅಂತರವೂ ಪರಿಮಾಣವೂ ಗತಿಯೂ ಮನುಷ್ಯನಿಗೆ ನಿಶ್ಚಿತವಾಗಿ ಗೊತ್ತಾದರೂ ಅವುಗಳ ಘಟಕಾವಯುವಗಳ ಹಾಗೂ ರಚನೆಯ ವಿಷಯುವಾಗಿ ಶೋಧ-ವಾಗುವುದು ಅಸಂಭವವೆಂದು ಸನ್ ೧೮೪೨ನೆಯ ಇಸವಿಯಲ್ಲಿ ಭವಿಷ್ಯ-ವನ್ನು ಹೇಳಿದನು. ಆದರೆ ಮುಂದೆ ಸ್ವಲ್ಪ ವರ್ಷಗಳಲ್ಲಿಯೇ ಗ್ರಹಗಳ ಘಟಕಾವಯುವ ಹಾಗೂ ರಚನೆಗಳ ವಿಷಯುವಾಗಿ ಶೋಧವಾಯಿತು. ಅಶಕ್ಯವೆಂದು ತೋರಿದ ಸಂಗತಿಗಳೆಲ್ಲ ಶಾಸ್ತ್ರಜ್ಞಾನದಿಂದ ಶಕ್ಯವಾಗುವುವು.

ಜ್ಞಾನವು ಸಾಗರದಂತೆ ವಿಸ್ತೀರ್ಣವಾದುದರಿಂದ ಅದರ ಮರ್ಯಾದೆ-ಯನ್ನು ಗೊತ್ತುಹಚ್ಚುವುದು ಯಾರಿಂದಲೂ ಆಗದು. ಆದರೂ ಸಹ ಈ ಯುಗದಲ್ಲಿ ಎಷ್ಟು ಹೊಸ ಶೋಧಗಳು ಆಗಹತ್ತಿವೆ ನೋಡಿರಿ! ಇನ್ನು ಹೊಸ ಶೋಧಗಳಿಂದ ಜನರಿಗೆ ಉಪಯೋಗವಾಗಬೇಕಾದರೆ ಆ ಶೋಧ-ಗಳಾದನಂತರ ಎಷ್ಟೋ ವರ್ಷಗಳು ಹತ್ತುತ್ತವೆಂಬ ಮಾತಿಗೆ ಅನೇಕ ಉದಾಹರಣೆಗಳುಂಟು. ಉದಾಹರಣಾರ್ಥವಾಗಿ, ವಿದ್ಯುದ್ದೀಪದ ಶೋಧವನ್ನು ತೆಗೆದುಕೊಳ್ಳುವ. ನಿರ್ವಾತವಾದ ಕಾಜಿನ ಪಾತ್ರೆಯಲ್ಲಿ ಕಲ್ಲಿದ್ದಲಿಯ ತುಂಡನ್ನಿಟ್ಟು ವಿದ್ಯುತ್ತನ್ನು ಅದರಲ್ಲಿ ಬಿಟ್ಟರೆ ಅದರಿಂದ ಉತ್ತಮ ಪ್ರಕಾಶವು ಹೊರಡುತ್ತದೆಂಬುದು ನಿಜ. ಆದರೆ ಉಷ್ಣತೆಯ ಯೋಗದಿಂದ ಕಾಜಿನ ಪಾತ್ರೆಯು ಕಾಯ್ದು ಒಡೆದುಹೋಗುವುದು. ಆದುದರಿಂದ ಈ ಶೋಧದಿಂದ ಜನರಿಗೆ ಎಷ್ಟೋ ವರ್ಷಗಳ ವರೆಗೆ ಏನೂ ಲಾಭವಾಗಲಿಲ್ಲ. ಆದರೆ ಇತ್ತಲಾಗಿ ಎಡಿಸನನೆಂಬ ಶೋಧಕನು ಕಲ್ಲಿದ್ದಲಿಯ ಸೂಕ್ಷ್ಮವಾದ ತುಂಡನ್ನು ತೆಗೆದುಕೊಂಡು ನಿರ್ವಾತ ಕಾಜಿನ ಪಾತ್ರೆಯಲ್ಲಿಟ್ಟು ವಿದ್ಯುತ್ತಿನಿಂದ ಬೇಕಾದಷ್ಟು ಬೆಳಕು ಬೀಳುವಂತೆ ಮಾಡಿದನು. ಮತ್ತು ಉಷ್ಣತೆಯು ಕಡಿಮೆಯಾದ್ದರಿಂದ ಕಾಜಿನ ಪಾತ್ರೆಯು ಮೊದಲಿನ ಹಾಗೆ ಒಡೆಯುವ ಸಂಭವವು ತೀರ ಕಡಿಮೆ-ಯಾಯಿತು.

ಸರ್ ಹಂಫ್ರೆಡೇವಿಯು 'ಲಾಫಿಂಗ್ ಗ್ಯಾಸ್' ಎಂಬ ವಾಯುವನ್ನು ಹುಡುಕಿ ತೆಗೆದನು. ಈ ವಾಯುವನ್ನು ಮನುಷ್ಯನಿಗೆ ಮೂಸಿ ನೋಡಿ-

ಸಿದ ಕೂಡಲೆ ಸ್ಮೃತಿತಪ್ಪುವುದರಿಂದ ಶರೀರಕ್ಕೆ ಏನೂ ನೋವಾಗದಂತೆ ಶಸ್ತ್ರಕ್ರಿಯೆಯನ್ನು ಮಾಡಬಹುದೆಂದು ಅವನು ಗೊತ್ತುಹಚ್ಚಿದನು. ಹೀಗೆ ಆ ವಾಯುವಿನ ಉಪಯುಕ್ತತೆಯು ಜನರಿಗೆ ತಿಳಿದಾಗ್ಯೂ ಈ ವಾಯು-ವನ್ನು ೫೦ ವರ್ಷಗಳ ವರೆಗೆ ಡಾಕ್ಟರ ಜನರು ಶಸ್ತ್ರಕ್ರಿಯೆ ಮಾಡುವಾಗ ಉಪಯೋಗಿಸುತ್ತಿದ್ದಿಲ್ಲ. ಈಗ ಮಾತ್ರ ಅದನ್ನು ಉಪಯೋಗಿಸಹತ್ತಿ-ದ್ದಾರೆ.

ಮುದ್ರಣದ ಯುಕ್ತಿಯು ಪ್ರಚಾರದಲ್ಲಿ ಬರುವುದಕ್ಕಿಂತ ಎಷ್ಟೋ ವರ್ಷ ಮೊದಲೇ ಅದು ಜನರಿಗೆ ಗೊತ್ತಿತ್ತು. ರೋಮನ್ನ ಜನರು ಅಚ್ಚುಗಳನ್ನು ಮೊದಲಿನಿಂದಲೇ ಉಪಯೋಗಿಸುತ್ತಿದ್ದರು. ಅಸೀರಿಯನ್ ಜನರು ತಮ್ಮ ರಾಜರ ಹೆಸರುಗಳನ್ನು ಕಟ್ಟಡಗಳ ಮೇಲೂ ಸ್ಮಾರಕ-ಸ್ತಂಭಗಳ ಮೇಲೂ ಅಚ್ಚುಗಳ ಸಹಾಯವಿಂದ ಕೊರೆಯುತ್ತಿದ್ದರು. ಆದರೆ ಮುದ್ರಣಯುಕ್ತಿಯ ಶೋಧಕನಾದ ಕ್ಯಾಕ್ಸಟನ್ನನು ರೋಮನ್ ಅಸೀರಿಯನ್ ಜನರಿಗೆ ಗೊತ್ತಿದ್ದ ಯುಕ್ತಿಯಲ್ಲಿ ಅಲ್ಪಸ್ವಲ್ಪ ಹೆಚ್ಚುಕಡಿ-ಮೆಯನ್ನು ಮಾಡಿ ಈ ಯುಕ್ತಿಯನ್ನು ಪ್ರಚಾರದಲ್ಲಿ ತಂದನು. ರೋಮನ್ ಜನರು ಬೇರೆ ಬೇರೆ ಶಬ್ದಗಳ ಅಚ್ಚುಗಳನ್ನು ಮಾಡಿದ್ದರು. ಅದರ ಬದಲು ಅಕ್ಷರಗಳ ಅಚ್ಚುಗಳನ್ನು ಮಾಡಿದ್ದರಿಂದ ಮುದ್ರಣದ ಕಲೆಯು ಊರ್ಜಿತಾವಸ್ಥೆಯನ್ನು ಹೊಂದಿತು.

ಸೃಷ್ಟಿಚಮತ್ಕಾರಗಳೆಲ್ಲವೂ ಎಷ್ಟು ವಿಚಿತ್ರವೂ ಅನಂತವೂ ಆಗಿವೆ-ಯೆಂಬುದು ಈಗ ಮಾತ್ರ ಜನರಿಗೆ ಗೊತ್ತಾಗಹತ್ತಿದೆ, ಮತ್ತು ಕಾಲಾಂತ-ರದಿಂದ ಅತ್ಯಗಾಧವಾದ ಸೃಷ್ಟಿಚಮತ್ಕಾರಗಳ ಜ್ಞಾನವು ಆಗಬಹುದೆಂಬ ಚಿಹ್ನಗಳು ತೋರಹತ್ತಿವೆ. ಈಗಿನ ಸೂಕ್ಷ್ಮದರ್ಶಕ ಯಂತ್ರಗಳಲ್ಲಿ ಸುಧಾರಣೆಯಾಗುವುದು ಅವಶ್ಯವದೆ. ಇನ್ನೂ ಎಷ್ಟೋ ಹೊಸ ದ್ರವ್ಯ-ಗಳ ಶೋಧವು ಆಗಬೇಕಾಗಿದೆ. ಯಂತ್ರಗಳ ಉಪಯೋಗವು ಪ್ರತಿ-ಯೊಂದು ಕೆಲಸದಲ್ಲಿ ಆಗತಕ್ಕದ್ದಿದೆ. ಇನ್ನು ಮುಂದೆ ವಿದ್ಯುತ್ತಿನಿಂದ ಜಗತ್ತಿನಲ್ಲಿ ವಿಶೇಷವಾದ ಸೌಕರ್ಯಗಳುಂಟಾಗುವ ಸಂಭವವಿದೆ. ಈಗಿನ ಕಾಲಕ್ಕೆ ನಮಗಿದ ಶಾಸ್ತ್ರೀಯ ವಿಷಯದ ಜ್ಞಾನವು ಎಷ್ಟು ಅಕುಂಚಿತ-

ವಾಗಿರುವುದೆಂಬುದು ಕೆಳಗೆ ಕೊಟ್ಟ ಉದಾಹರಣೆಯಿಂದ ಸ್ಪಷ್ಟವಾಗುವುದು. ಸೂಕ್ಷ್ಮದರ್ಶಕಯಂತ್ರದ ಸಹಾಯದಿಂದ ಅತಿಸೂಕ್ಷ್ಮವಾದ ಅಣುರೇಣುಗಳು ಗೋಚರವಾಗುವುದಿಲ್ಲ. ಅಂಥ ಒಂದು ಪರಮಾಣುವಿನ ವ್ಯಾಸವು ಒಂದು ಇಂಚಿನ $\frac{೧}{೫೦,೦೦,೦೦,೦೦೦}$ ವಿರುತ್ತವೆಂದು ಲಾಶ್ಮಿಟ್‌ನೆಂಬ ಶಾಸ್ತ್ರಜ್ಞನು ಶೋಧಿಸಿದ್ದಾನೆ. ಹಾಗಾದರೆ ಅಂಥ ಅಣುರೇಣುವಿನ ಜ್ಞಾನವಾಗುವ ಬಗೆಯೇನು? ಸದ್ಯಃಸ್ಥಿತಿಯ ಮೇಲಿಂದ ನೋಡಲು, ಇಂಥ ಜ್ಞಾನವಾಗುವ ಸಂಭವವು ತೀರ ಕಡಿಮೆಯೆಂದು ತೋರುತ್ತದೆ. ಇನ್ನೊಂದು ಪ್ರತಿಕೂಲ ಸಂಗತಿಯಾವುದೆಂದರೆ, ಪ್ರಕಾಶದ ಒಂದು ವಿಶಿಷ್ಟ ಗುಣಧರ್ಮವು. ಈ ಗುಣಧರ್ಮದ ಮೂಲಕ ಇಂಚಿನ ೧ ಲಕ್ಷಾಂಶಕ್ಕಿಂತ ಕಡಿಮೆ ವ್ಯಾಸವುಳ್ಳ ಅಣುಗಳು ಎಂಥ ಸಾಮರ್ಥ್ಯವುಳ್ಳ ಸೂಕ್ಷ್ಮದರ್ಶಕ ಯಂತ್ರದಿಂದಾದರೂ ಗೋಚರವಾಗಲಾರವು. ಇನ್ನು ಪ್ರಕಾಶದ ಗುಣಧರ್ಮವನ್ನು ಬದಲಿಸುವುದು ಯಾರಿಂದಾದರೂ ಆಗಬಹುದೋ? ಯಾರಿಂದಲೂ ಆಗಲಾರದು. $\frac{೧}{೮೦,೦೦೦}$ ಇಂಚು ವ್ಯಾಸವುಳ್ಳ ಆಲ್ಬ್ಯುಮೆನ್ (Albumen) ಪದಾರ್ಥದ ಒಂದು ಕಣದೊಳಗೆ ೧೨ಕೋಟಿ ೫೦ಲಕ್ಷ ಪರಮಾಣುಗಳು ಇರುತ್ತವೆಂದು ಗೊತ್ತಾಗಿದೆ. ನೀರಿನಂಥ ಪ್ರವಾಹಿ ಪದಾರ್ಥದ ಕಣದೊಳಗೆ ೮ಅಬ್ಜ ಪರಮಾಣುಗಳಿರುತ್ತವೆ. ಅಂಥ ಪರಮಾಣುಗಳು, ದರ್ಶಕಯಂತ್ರಗಳ ಶಕ್ತಿಯಲ್ಲಿ ಎಷ್ಟು ಸುಧಾರಣೆಯಾದರೂ ಗೋಚರವಾಗುವ ಸಂಭವವು ತೀರ ಕಡಿಮೆ.

ಮನುಷ್ಯ ಪ್ರಾಣಿಗಳಿಗೆ ಕೇಳಬಾರದ ಎಷ್ಟೋ ಧ್ವನಿಗಳು ದನಗಳಿಗೆ ಕೇಳಬರುವುವು. ನಮಗೆ ಕಾಣದ ಕೆಲವು ಬಣ್ಣಗಳು ಅವುಗಳಿಗೆ ಕಾಣುವುವು. ಉದಾಹರಣಾರ್ಥವಾಗಿ ದಟ್ಟ ನೀರಲವರ್ಣವು ನಮಗೆ ಕಾಣದಿದ್ದರೂ ದನಗಳಿಗೆ ಗೋಚರವಾಗುವುದು. ಹೀಗೆಯೇ ವಿಚಾರಮಾಡುತ್ತ ಹೋದರೆ ಈ ಜಗತ್ತು ಮನುಷ್ಯರಿಗೆ ಕಾಣಿಸುವುದಕ್ಕಿಂತ ತೀರ ಭಿನ್ನವಾಗಿ ಮಿಕ್ಕ ಪ್ರಾಣಿಗಳಿಗೆ ಕಾಣಿಸುತ್ತಿರಬಹುದೆಂಬ ಅನುಮಾನವುಂಟಾಗುತ್ತದೆ. ನಮ್ಮ ಕಿವಿಯ ಪಟಲದ ಮೇಲೆ ಹವೆಯ

ಆಘಾತವಾಗುವುದರಿಂದ ಧ್ವನಿಯ ಜ್ಞಾನವುಂಟಾಗುತ್ತದೆ. ಅಂಥ ಕೆಲವು ಆಘಾತಗಳಿಂದ ಗಂಭೀರಧ್ವನಿಯೂ ಅವುಗಳಿಗಿಂತ ಹೆಚ್ಚು ಆಘಾತಗಳಿಂದ ಕರ್ಕಶಧ್ವನಿಯೂ ಉಂಟಾಗುವುವು. ಆದರೆ ಸೆಕಂದಿಗೆ ೪೦,೦೦೦ ಆಘಾತಗಳಾದರೆ ಯಾವ ಧ್ವನಿಯೂ ಕೇಳಬರುವುದಿಲ್ಲ.

ಕರ್ಣಪಟಲದ ಮೇಲೆ ಹವೆಯ ಆಘಾತಗಳಾಗುವುದರಿಂದ ಶಬ್ದ-ಜ್ಞಾನವಾಗುವಂತೆ ನೇತ್ರಪಟಲದ ಮೇಲೆ ಪ್ರಕಾಶದ ತರಂಗಗಳು ಬೀಳು-ವುದರಿಂದ ವರ್ಣ, ಆಕಾರ, ಸ್ವರೂಪ ಮೊದಲಾದುವುಗಳ ಜ್ಞಾನವುಂಟಾ-ಗುತ್ತದೆ. ಸೆಕಂದಿಗೆ ೪೦ಕೋಟಿ ತರಂಗಗಳ ಆಘಾತವಾದರೆ ಕೆಂಪು ಬಣ್ಣದ ಜ್ಞಾನವಾಗುತ್ತದೆ, ಮತ್ತು ಆ ತರಂಗಗಳು ಹೆಚ್ಚಾಗುತ್ತ ಹೋದ-ಹಾಗೆ ಕಿತ್ತಳೆ, ಹಳದಿ, ಹಸರು, ಶಾಮ, ನೀಲಿ, ಊದಿ ಮೊದಲಾದ ಬಣ್ಣಗಳು ಅನುಕ್ರಮವಾಗಿ ಕಾಣಹತ್ತುತ್ತವೆ. ೪೦,೦೦೦ದಿಂದ ೪೦-ಕೋಟಿಯ ವರೆಗೆ ಪ್ರಕಾಶತರಂಗಗಳು ನೇತ್ರಪಟಲಕ್ಕೆ ತಾಕಿದರೂ ಯಾವ ಆಕಾರವಾಗಲಿ, ಬಣ್ಣವಾಗಲಿ ನಮ್ಮ ದೃಷ್ಟಿಗೆ ಬೀಳುವುದಿಲ್ಲ. ನಮಗೆ ಪಂಚೇಂದ್ರಿಯಗಳಿದ್ದರೂ ಅನಂತಸೃಷ್ಟಿಚಮತ್ಕಾರಗಳ ಪರಿಚ-ಯವು ನಮ್ಮ ಮರ್ಯಾದಿತವಾದ ಇಂದ್ರಿಯ ಶಕ್ತಿಯಿಂದ ಎಂದೂ ಆಗದು.

ಜಗತ್ತಿನಲ್ಲಿ ಇನ್ನೂ ಅಸಂಖ್ಯಗೂಢ ಸಂಗತಿಗಳಿರುತ್ತವೆಂದು ಶಾಸ್ತ್ರ-ಜ್ಞರು ತರ್ಕಿಸುತ್ತಾರೆ. ನಮಗೆ ಗೊತ್ತಾಗದ ಅನೇಕ ಸಂಗತಿಗಳು ಪಶುಗಳಿಗೆ ಗೊತ್ತಾಗುವುದರಿಂದ ಅವುಗಳಿಗೆ ನಮಗಿಂತ ಭಿನ್ನವಾದ ಜ್ಞಾನೇಂದ್ರಿಯಗಳಿರಬಹುದೆಂದು ಕೆಲವರ ಮತವಿದೆ.

ಯಾವುವಾದರೂ ಪ್ರಾಣಿಗಳ ಪೂರ್ಣಜ್ಞಾನವನ್ನು ಮಾಡಿಕೊಳ್ಳು-ವುದಾದರೆ ಆ ಪ್ರಾಣಿಗಳ ಸೃಷ್ಟಿಸ್ಥಿತಿಲಯ ಮೊದಲಾದ ಅವಸ್ಥೆಗಳನ್ನು ನಿರೀಕ್ಷಿಸಿ, ಆ ಅವಸ್ಥೆಗಳ ಅನ್ಯೋನ್ಯಸಂಬಂಧವನ್ನು ಪರೀಕ್ಷಿಸಿ, ಸೃಷ್ಟಿ-ಶಕ್ತಿಗಳಿಗೆ ಅವುಗಳಲ್ಲಿದ್ದ ಅನುವರ್ತನೆಯನ್ನು ಶೋಧಿಸಿ, ಅವುಗಳ ಬುದ್ಧಿಯೂ ಜ್ಞಾನವೂ ಎಷ್ಟೆಂಬುದನ್ನೂ ಜಗತ್ತು ಅವುಗಳಿಗೆ ಹೇಗೆ ಕಾಣುತ್ತದೆಂಬುದನ್ನೂ ಗೊತ್ತುಹಚ್ಚಿದರೆ ತೀರಿತು; ಇದೇ ಪ್ರಾಣಿಶಾಸ್ತ್ರದ

ನಿಜವಾದ ಅಭ್ಯಾಸವು. ಈ ಅಭ್ಯಾಸವು ಕೇವಲ ವಸ್ತುಸಂಗ್ರಹಾಲಯಗಳ-ಲ್ಲಿಟ್ಟ ಪಶುಪಕ್ಷಿಗಳ ಅವಶೇಷಗಳಿಂದಾಗಲಿ, ಕ್ರಿಮಿಕೀಟಕಗಳಿಂದಾಗಲಿ, ಶುಷ್ಕವನಸ್ಪತಿಗಳಿಂದಾಗಲಿ ಆಗದು. ಮೇಲೆ ಹೇಳಿದಂತೆ ನಾವು ಪ್ರಾಣಿ-ಶಾಸ್ತ್ರದ ಅಭ್ಯಾಸವನ್ನು ಎಡೆಬಿಡದೆ ಮಾಡುತ್ತಹೋದರೆ ಇನ್ನೂ ಶೋಧ-ವಾಗದ ಅನೇಕ ಗೂಢಸಂಗತಿಗಳ ಅರಿವು ನಮಗೆ ಕೆಲಮಟ್ಟಿಗಾದರೂ ಆಗುವುದೆಂಬುದಕ್ಕೆ ಸಂದೇಹವಿಲ್ಲ. ಹೀಗೆ ಮನುಷ್ಯನು ಪ್ರಯತ್ನ-ಮಾಡುತ್ತ ಹೋದಹಾಗೆ ಅವನು ಹೆಚ್ಚಿನ ಉತ್ಕರ್ಷವನ್ನು ಪಡೆಯುವುದು ಎಷ್ಟು ಸುಲಭವೆಂಬುದನ್ನು ನೋಡಿರಿ!

ಜಗತ್ತಿನಲ್ಲಿ ಪ್ರಾಚೀನಕಾಲಕ್ಕಿಂತಲೂ ಈಗಿನ ಕಾಲಕ್ಕೆ ಹೆಚ್ಚು ಸುಧಾ-ರಣೆಯಾಗಿದೆಯೆಂದು ಧಾರಾಳವಾಗಿ ಹೇಳಬಹುದು. ಪೂರ್ವದಲ್ಲಿ ಸೌಜನ್ಯ, ಸದ್ವರ್ತನ, ವಿದ್ಯೆ ಮೊದಲಾದ ಶ್ರೇಷ್ಠಗುಣಗಳು ರಾಜಸಭೆಯಲ್ಲಿ ಮಾತ್ರ ಕಂಡುಬರುತ್ತಿದ್ದುವು. ಅಂದರೆ ಸಾಮಾನ್ಯ ಜನರಲ್ಲಿ ಅಂಥ ಗುಣಗಳು ವಿಶೇಷವಾಗಿ ಕಂಡುಬರುತ್ತಿದ್ದಿಲ್ಲ. ಈಗ ನಾಗರಿಕತ್ವದಲ್ಲಿ ಶ್ರೇಷ್ಠರೆನಿಸಿ-ಕೊಳ್ಳುವ ಆಂಗ್ಲರು ಪ್ರಾಚೀನಕಾಲದಲ್ಲಿ ಗಿಡಗಳನ್ನೂ ದೆವ್ವಗಳನ್ನೂ ಪೂಜಿಸುವ ಕಾಡುಜನರಾಗಿದ್ದರು.

ಇನ್ನು ಇತ್ತಿತ್ತಲಾಗಿ ಹಬ್ಬುಗೊಂಡಿರುವ ನಾಗರಿಕತ್ವಕ್ಕೆ ಮುಖ್ಯ ಕಾರಣಗಳೇನೆಂಬುದನ್ನು ನೋಡುವ. ಅದಕ್ಕೆ ಆ ಆ ದೇಶಗಳಲ್ಲಿಯ ಗ್ರಂಥಪ್ರಸಾರವೇ ಮುಖ್ಯ ಕಾರಣವು. ಲಾರ್ಡ್ ಮೆಕಾಲೆಯು ಆಂಗ್ಲ-ವಾಙ್ಮಯವನ್ನು ಪ್ರಶಂಸಿಸಿರುವಂತೆ ನಾವಾದರೂ ಸಂಸ್ಕೃತವಾಙ್ಮಯ-ವನ್ನು ಪ್ರಶಂಸಿಸಬಹುದು. "ಈ ವಾಙ್ಮಯದಲ್ಲಿ ಶುದ್ಧಜ್ಞಾನವು ತುಂಬಿದ್ದು ಅದು ನಮ್ಮ ದೇಶದ ಚಿರಕಾಲ ಬಾಳುವ ವೈಭವವಾಗಿದೆ. ನಮ್ಮ ಗ್ರಂಥಸಂಗ್ರಹದಲ್ಲ ವೇದಾಂತಗ್ರಂಥಗಳೂ ಪುರಾಣಗಳೂ ತುಂಬಿರುವುದ-ರಿಂದ ಗ್ರಂಥಾವಲೋಕನವನ್ನು ಮಾಡುವವರಿಗೆ ಸುಬೋಧವಾಗದೆ ಇರದು. ಅವುಗಳಲ್ಲಿ ಎಷ್ಟೋ ಗ್ರಂಥಗಳು ಪ್ರಸಿದ್ಧ ಋಷಿಗಳಿಂದಾಗಲಿ, ಶ್ರೇಷ್ಠ ಕವಿಗಳಿಂದಾಗಲಿ ಪ್ರಣೀತವಾದುದರಿಂದ ಅವು ಎಲ್ಲರಿಗೂ ಪೂಜ್ಯ-ವಾಗಿರುವುವು. ಮಾನವ ಕುಟುಂಬದ ಮೇಲೆ ಗ್ರಂಥಾವಲೋಕನ-

ದಿಂದಾಗುವ ಸುಪರಿಣಾಮವು ಶಾಶ್ವತವೆಂದು ನಿಃಸಂಶಯವಾಗಿ ಹೇಳ-ಬಹುದು."

ಇಂಥ ಸಾಧನವು ನಮ್ಮ ಕೈಯಲ್ಲಿದ್ದರೂ ನಾವು ಅದರ ಯೋಗ್ಯ ಉಪಯೋಗವನ್ನು ಮಾಡಿಕೊಳ್ಳುವುದಿಲ್ಲವೆಂದು ಒಪ್ಪಿಕೊಳ್ಳಬೇಕಾಗಿದೆ. ಶರೀರವೃದ್ಧಿಗೆ ವಯೋನಿರ್ಬಂಧವಿದ್ದಂತೆ ಜ್ಞಾನವೃದ್ಧಿಗೆ ಯಾವ ತರದ ನಿರ್ಬಂಧವೂ ಇಲ್ಲ.

ಇನ್ನು ಮುಂಬೆ ಮನುಷ್ಯರಲ್ಲುಂಟಾಗುವ ಪ್ರಗತಿಯು ಕೇವಲ ಭೌತಿಕಶಾಸ್ತ್ರಗಳಲ್ಲಾಗುವ ಹೊಸ ಶೋಧಗಳ ಮೇಲೆಯೇ ಅವಲಂಬಿಸಿ-ರದೆ ಮಾನಸಿಕ ಹಾಗೂ ಆಧ್ಯಾತ್ಮಿಕ ಪ್ರಗತಿಯ ಮೇಲೆಯೇ ಅವಲಂಬಿ-ಸಿರುವುದೆಂದು ಹೇಳಿದರೆ ಅತಿಶಯೋಕ್ತಿಯಾಗದು. ಈಗ ಗೂಢವೆಂದು ತಿಳಿದ ಸಂಗತಿಗಳು ಕೆಲಕಾಲದ ಮೇಲೆ ಜ್ಞಾನವೃದ್ಧಿಯ ಮೂಲಕ ಎಲ್ಲ-ರಿಗೂ ತಿಳಿಯಹತ್ತುವವು. ಮತ್ತು ಮಾನವ ಪ್ರಾಣಿಗಳಲ್ಲಿ ನೀತಿಯೂ ಹೆಚ್ಚಾಗುವುದು. ರಾಜ್ಯದ ವೃದ್ಧಿಯು ಅಥವಾ ದೇಶದ ಉತ್ಕರ್ಷವು ರಾಜ್ಯ ವಿಸ್ತಾರದ ಮೇಲೆ ಇಲ್ಲವೆ ಭೂಮಿಯ ಫಲದ್ರೂಪತೆಯ ಮೇಲೆ ಅವಲಂಬಿಸಿರದೆ ಆ ದೇಶೀಯರ ನೀತಿ ಹಾಗೂ ಬುದ್ಧಿವಂತಿಕೆಗಳ ಮೇಲೆ ಅವಲಂಬಿಸಿರುವುದು.

ಈ ಎಲ್ಲ ಸಂಗತಿಗಳು ಹಲವರಿಗೆ ಗೊತ್ತಿದ್ದರೂ ಆತ್ಮೋನ್ನತಿ-ಯನ್ನು ಮಾಡಿಕೊಳ್ಳುವವರು ತೀರ ಕಡಿಮೆ. ಅಂಥ ಉನ್ನತಿಯನ್ನು ಸಾಧಿಸಲಿಕ್ಕೆ ದೃಢ ನಿಶ್ಚಯವೂ ಸತತೋದ್ಯೋಗವೂ ಬೇಕು. "ಪ್ರಾಣಿ-ಗಳಲ್ಲಿ ಮನುಷ್ಯನಷ್ಟು ಶ್ರೇಷ್ಠನು ಯಾರೂ ಇಲ್ಲ. ಅವನ ವಿಚಾರಶಕ್ತಿಯು ಉದಾತ್ತವೂ, ಬುದ್ಧಿಯು ಅಗಾಧವೂ, ರೂಪವೂ ಸುಂದರವೂ ಆಗಿರು-ವವು." —**ಶೇಕ್ಸಪೀಯರ್.**

ಪ್ರಾಣಿಯು ತನ್ನ ಇಹಲೋಕದ ಅವತಾರವನ್ನು ಒಮ್ಮೆ ಮುಗಿಸಿದ ಮೇಲೆ ಪುನಃ ಎರಡನೆಯ ಯೋನಿಯಲ್ಲಿ ಜನ್ಮ ಹೊಂದುವನು. ಹಿಂದಿನ ಜನ್ಮದಲ್ಲಿ ಪುಣ್ಯದ ಕೃತ್ಯಗಳನ್ನು ಮಾಡಿದವರು ಈ ಜನ್ಮದಲ್ಲಿ ಶ್ರೇಷ್ಠಕುಲ-ದಲ್ಲಿ ಅವತರಿಸುವರು. ಪಾಪಕರ್ಮಿಗಳು ನೀಚಕುಲದಲ್ಲಿ ಹುಟ್ಟುವರು.

ಪುಣ್ಯಾತ್ಮರ ಆಚರಣೆಯು ಯಾವಾಗಲೂ ನಿಷ್ಕಲಂಕವಾಗಿರುವುದರಿಂದ ಅವರು ಮುಂದೆ ಶ್ರೇಷ್ಠಯೋನಿಯಲ್ಲಿ ಜನ್ಮತಾಳಿ ಜಗದುದ್ಧಾರವನ್ನು ತಮ್ಮ ಧರ್ಮೋಪದೇಶದಿಂದ ಸಾಧಿಸುವರು. 'ಬಿತ್ತಿದ್ದನ್ನು ಬೆಳೆದುಕೋ' ಎಂಬ ಮಾತಿನ ಸತ್ಯತೆಯು ಸಣ್ಣ ಬಾಲಕರಿಗೆ ಸಹ ಗೊತ್ತಿರುವುದು. ಪರೋಪಕಾರದಿಂದ ಆನಂದವೂ ಪರಪೀಡನೆಯಿಂದ ದುಃಖವೂ ಮನುಷ್ಯನಿಗೆ ಆಗುವುವು.

ರಾಷ್ಟ್ರದಲ್ಲಿ ಸುಧಾರಣೆಯಾಗಬೇಕಾದರೆ ಪ್ರತಿಯೊಂದು ವ್ಯಕ್ತಿಯಲ್ಲಿ ಆ ಸುಧಾರಣೆಯ ಬೀಜಗಳು ಅಂಕುರಿಸಬೇಕಾಗುವುದು. ಮತ್ತು ಎಲ್ಲರೂ ಏಕಚಿತ್ತದಿಂದ ಪ್ರಯತ್ನಮಾಡಹತ್ತಿದರೆ ಸ್ವಲ್ಪಕಾಲದಲ್ಲಿಯೇ ರಾಷ್ಟ್ರೋನ್ನತಿಯಾಗುವುದು. ಉದಾಹರಣಾರ್ಥವಾಗಿ ಜಪಾನದೇಶವನ್ನು ತೆಗೆದುಕೊಳ್ಳುವ. ಅಲ್ಲಿ ಸ್ವದೇಶಾಭಿಮಾನದ ಜ್ವಾಲೆಯು ಪ್ರತಿಯೊಂದು ವ್ಯಕ್ತಿಯಲ್ಲಿ ಉಜ್ವಲವಾಗಿ ಎಲ್ಲರೂ ಒಮ್ಮನಸಿನಿಂದ ಪ್ರಯತ್ನ ಮಾಡಹತ್ತಿದ್ದರಿಂದ ೪೦ ವರ್ಷಗಳ ಅವಧಿಯಲ್ಲಿಯೇ ಆ ದೇಶವು ಸುಧಾರಣೆಯ ಶಿಖರಕ್ಕೇರಿತು. ಪೃಥ್ವಿಯಲ್ಲಿದ್ದ ಜನರೆಲ್ಲರೂ ರಾಮದಾಸ ಸಾಧುಗಳು ಹೇಳಿದಂತೆ ತಮ್ಮ ಆಯುಷ್ಯವನ್ನು ಸತ್ಕರ್ಮಕ್ಕಾಗಿಯೇ ಯೋಜಿಸುತ್ತ ಯಾವಾಗಲೂ ಮಂಗಲವಾದದ್ದನ್ನೇ ನುಡಿಯುತ್ತಹೋದರೆ ಭೂಲೋಕದಲ್ಲಿಯೇ ಸ್ವರ್ಗಸುಖವನ್ನು ಅನುಭವಿಸಬಹುದು.

ನಮ್ಮ ಕಲ್ಪನೆಗೆ ನಿಲುಕದ ಎಷ್ಟೋ ಗೂಢ ಸಂಗತಿಗಳು ನಮ್ಮ ಪ್ರಗತಿಯಾದ ಹಾಗೆ ನಮಗೆ ತಿಳಿಯುತ್ತ ಹೋಗುವುವು. ನಮಗೆ ವಿಸ್ಮಯವನ್ನುಂಟುಮಾಡುವ ಈ ಜಗತ್ತು ವಿಶ್ವದಲ್ಲಿ ಬಿಂದುವಿನೋಪಾದಿಯಾಗಿದೆ. ಮತ್ತು ನಮ್ಮ ಆಯುರ್ಮರ್ಯಾದೆಯು ಅನಂತಕಾಲದಲ್ಲಿ ಒಂದು ನಿಮಿಷದಂತೆ ಇರುವುದು. ಇಷ್ಟು ವಿಸ್ತಾರವಾದ ಜಗತ್ತಿನ ಉತ್ಪತ್ತಿಯು ಹೇಗೆ ಆಗಿರಬಹುದೆಂಬುದು ನಮ್ಮ ಕಲ್ಪನೆಗೆ ಸಹ ನಿಲುಕುವುದಿಲ್ಲ. ಆದರೂ ಮೇಲಿನ ಗೂಢಪ್ರಶ್ನೆಗಳ ಉತ್ತರವು ಜ್ಞಾನವೃದ್ಧಿಯಾದಂತೆ ನಮಗೆ ತಿಳಿಯುತ್ತ ಹೋಗುವುದೆಂಬುದರಲ್ಲಿ ಸಂದೇಹವಿಲ್ಲ. ಜ್ಞಾನವೃದ್ಧಿಯು ಕೆಲವು ಜನಾಂಗಗಳಲ್ಲಿ ಮಂದಗತಿಯಿಂದಲೂ, ಉಳಿ-

ದವುಗಳಲ್ಲಿ ವೇಗದಿಂದಲೂ ಆಗುತ್ತ ಹೋಗುವುದು. ಆದರೆ ನಾವು ಪ್ರಯತ್ನಮಾಡದೆ ಹೋದರೆ ನಮ್ಮ ಉತ್ಕರ್ಷವು ಎಂದೂ ಆಗದು.

ಜಗತ್ತಿನಲ್ಲಿದ್ದ ವಸ್ತುಗಳೆಲ್ಲವೂ ವಿನಾಶಿಗಳು. ಆದರೆ ಜ್ಞಾನವು ಮಾತ್ರ ಅವಿನಾಶಿಯಾಗಿರುವುದು. —**ಸ್ವಿನ್ಬರ್ನ್.**

ಜ್ಞಾನವೃದ್ಧಿಯಿಂದ ಮನುಷ್ಯನು ಸದ್ಗತಿಯನ್ನು ಹೊಂದುವನೆಂಬುದರಲ್ಲಿ ಸಂದೇಹವಿಲ್ಲ.

# ತ್ರಯೋದಶಾಧ್ಯಾಯ.

## ಸದ್ಗತಿ.

ಒಟ್ಟಿಗೆ ಮನುಷ್ಯ ಜಾತಿಯ ಉತ್ಕರ್ಷವು ಉತ್ತರೋತ್ತರವಾಗಿ ಆಗುತ್ತ ಹೋಗುವುದೆಂಬ ಆಶೆಯು ದೃಢವಾಗಿದ್ದರೂ ವ್ಯಕ್ತಿಶಃ ಮನುಷ್ಯರ ಉತ್ಕರ್ಷವು ಅವರು ವಯೋತೀತರಾದಂತೆ ಆದೀತೆಂಬುದನ್ನು ನಿಶ್ಚಿತ-ವಾಗಿ ಹೇಳುವುದು ಅಸಾಧ್ಯವು. ಯಾಕೆಂದರೆ ತಾರುಣ್ಯದಲ್ಲಿ ಪರಮಾ-ನಂದವನ್ನುಂಟುಮಾಡುವ ಉಪಭೋಗಗಳ ಬಗ್ಗೆ ವೃದ್ಧಾಪ್ಯದಲ್ಲಿ ಔದಾ-ಸೀನ್ಯವುಂಟಾಗುತ್ತದೆ. ಆದರೆ ನಾವು ಆಯುಷ್ಯದ ಸದುಪಯೋಗ-ವನ್ನು ಮಾಡಿ ಸದಾಚರಣೆಯನ್ನು ಪಾಲಿಸಿದರೆ ವೃದ್ಧಾಪ್ಯದಲ್ಲಿ ನಮಗೆ ಸುಖವಾಗದೆ ಇರದು. ನಮ್ಮ ಶಕ್ತಿಯು ಕ್ಷೀಣವಾಗುತ್ತ ಹೋದಹಾಗೆ ಉದ್ಯೋಗ ಮಾಡಬೇಕೆಂಬ ಉತ್ಸಾಹವು ಕಡಿಮೆಯಾಗಿ ಹಿಂದೆ ಉಪ-ಭೋಗಿಸಿದ ಸುಖದ ಹಾಗೂ ಅನುಭೋಗಿಸಿದ ದುಃಖದ ನೆನಪು ಮಾತ್ರ ಮೇಲಿಂದ ಮೇಲೆ ಆಗುತ್ತದೆ. ಆದರೆ ಈ ನೆನಪಿನಿಂದ ನಮಗೆ ಆನಂದ-ವಾಗಲಿ, ಪಶ್ಚಾತ್ತಾಪವಾಗಲಿ ಆಗುವುದು, ನಮ್ಮ ಪೂರ್ವ ವರ್ತನದ ಮೇಲೆಯೇ ಸರ್ವಾಂಶದಿಂದಲೂ ಅವಲಂಬಿಸಿಯದೆ.

ವೃದ್ಧಾಪ್ಯವು ಬಂದಕೂಡಲೆ ಭೋಗತೃಷ್ಣೆಯು ನಾಶವಾಗಿ ಜೀವವೇ ಬೇಸರವಾಗುತ್ತದೆ. ಇನ್ನು ತಾರುಣ್ಯದಲ್ಲಿ ಸದ್ವರ್ತನವನ್ನಿಟ್ಟ ಸತ್ಪುರು-ಷರಿಗೆ ವೃದ್ಧಾಪ್ಯದಲ್ಲಿ ಅವರ ಶಾಂತವೃತ್ತಿಯ ಮೂಲಕ ವಿಶೇಷವಾದ ಸುಖಸಮಾಧಾನವಾಗುತ್ತದೆ. ತಾರುಣ್ಯದಲ್ಲಿ ಸುಖಗಳ ಸವಿಯು ಹೆಚ್ಚೆಂಬದು ಭಾಸವಾದರೂ ಮನಸ್ಸಿಗೆ ಚಿಂತೆಯೂ ಅಸ್ವಸ್ಥತೆಯೂ ಇದ್ದೇ ಇರುತ್ತವೆ. ಯಾವ ಪುರುಷರು ಯೌವನದಲ್ಲಿ ಪರೋಪಕಾರದ ದೆಸೆ-ಯಿಂದ ದೇಹವನ್ನು ಸವಿಸುವರೋ ಅವರು ವೃದ್ಧಾಪ್ಯದಲ್ಲಿ ಪರಮಾ-ನಂದವನ್ನು ಹೊಂದುವರು. ವೃದ್ಧಾಪ್ಯವು ಸಾಯಂಕಾಲದಂತೆ ಇರು-

ವುದು. ಸೂರ್ಯನು ಅಸ್ತವಾದ ಮೇಲೆ ಮೋಡಗಳು ಉಂಟಾದರೆ ಕತ್ತಲೆಯು ಹೆಚ್ಚಾಗುವುದು. ಅವು ಇಲ್ಲದಿದ್ದರೆ ಅಂದವಾದ ಬೆಳ-ದಿಂಗಳು ಬೀಳುವುದರಿಂದ ಎಲ್ಲರಿಗೂ ಆಹ್ಲಾದವಾಗುತ್ತದೆ. ಅದರಂತೆಯೇ ಅಂತ್ಯಕಾಲಕ್ಕೆ ಎಷ್ಟೋ ಜನರಿಗೆ ಕಷ್ಟಗಳಾಗುತ್ತವೆಂಬುದು ನಿಜ. ಆದರೆ ಸದಾಚರಣೆಗಳಿಗೆ ಅಂತ್ಯಕಾಲವು ಶಾಂತವೂ ಸುಖಾವಹವೂ ಆಗುವುದು.

"ಸ್ವರ್ಗದಲ್ಲಿ ವಾಸಿಸುವ ದೇವತೆಗಳು ಅಮರರಾದ ಕಾರಣ ಅವರು ಯಾವಾಗಲೂ ತಾರುಣ್ಯಾವಸ್ಥೆಯಲ್ಲಿಯೇ ಇರುವರು."

— **ಸ್ವಿಡೆನ್‌ಬರ್ಗ್.**

ಇಹಲೋಕದಲ್ಲಾದರೂ ಹೀಗೆ ಅಖಂಡ ತಾರುಣ್ಯವನ್ನು ಭೋಗಿಸುವ ಮಹಾತ್ಮರನ್ನು ಕಾಣಬಹುದು. ಅವರ ಅಂತಃಕರಣವು ಹಸುಗೂಸು-ಗಳಂತೆ ನಿರ್ಮಲವಾಗಿರುವುದರಿಂದ ಅವರ ಆನಂದವೃತ್ತಿಯು ಕಾಲಾಂ-ತರದಿಂದ ಸಹ ಹ್ರಾಸವಾಗುವುದಿಲ್ಲ.

"ವೃದ್ಧಾಪ್ಯವು ನಾಲ್ಕು ಕಾರಣಗಳಿಂದ ದುಃಖದಾಯಕವೆಂದು ಕಂಡುಬರುತ್ತದೆ. ೧. ನಮ್ಮ ವಾಡಿಕೆಯ ಉದ್ಯೋಗಗಳನ್ನು ಬಿಟ್ಟುಕೊಡ-ಬೇಕಾಗುತ್ತದೆ. ೨. ಶಕ್ತಿಯು ಕ್ಷೀಣವಾಗುತ್ತದೆ. ೩. ಭೋಗೇಚ್ಛೆಯು ನಾಶವಾಗುತ್ತದೆ. ೪. ಮೃತ್ಯುವು ಸಮೀಪಿಸುತ್ತದೆ."

— **ಸಿಸಿರೊ.**

ಆದರೆ ಈ ಕಾರಣಗಳಿಂದ ಮನುಷ್ಯನು ಭೀತನಾಗುವ ಕಾರಣವಿಲ್ಲ.

ಮೇಲಿನ ಆಕ್ಷೇಪಗಳ ವಿಷಯಕ್ಕೆ ಕ್ರಮವಾಗಿ ವಿಚಾರಮಾಡಿದರೆ ಆಯುಷ್ಯದಲ್ಲಿ ಕೆಲ ಕಾಲವಾದರೂ ವಿಶ್ರಾಂತಿಯನ್ನು ಉಪಭೋಗಿಸು-ವುದು ಅನಿಷ್ಟವಲ್ಲೆಂದು ಧಾರಾಳವಾಗಿ ಹೇಳಬಹುದು; ಎರಡನೆಯ ಆಕ್ಷೇ-ಪದ ಸಂಬಂಧದಿಂದ 'ಶರೀರಸಂಪತ್ತು' ಎಂಬ ಅಧ್ಯಾಯದಲ್ಲಿ ವಿಸ್ತೃತ-ವಾದ ವಿವೇಚನವು ಮಾಡಲ್ಪಟ್ಟಿದೆ. ಭೋಗೇಚ್ಛೆಯು ನಾಶವಾಗುತ್ತ-ದೆಂಬುದೇ ಮೂರನೆಯ ಆಕ್ಷೇಪವು. ಆದರೆ ಇದು ಇಷ್ಟವೇ ಹೊರತು ಅನಿಷ್ಟವಲ್ಲ. ತಾರುಣ್ಯದಲ್ಲಿ ವಾಡಿಕೆಯಾಗಿ ಕಂಡುಬರುವ ತಾಮಸ-

ವೃತ್ತಿಯು ಅಳಿದು ಸತ್ವವೃತ್ತಿಯು ವೃದ್ಧಾಪ್ಯದಲ್ಲಿ ಉಜ್ವಲವಾಗುವುದು. ಈಸೆಯ ಆಕ್ಷೇಪದ ಸಂಬಂಧದಿಂದ ಮನುಸ್ಮೃತಿಯಲ್ಲಿ ಮಾಡಿದ ವಿಚಾರವನ್ನು ಇದ್ದಕ್ಕಿದ್ದ ಹಾಗೆ ಕೆಳಗೆ ಕೊಟ್ಟಿದ್ದೇವೆ.

"एकः प्रजायते जंतुः एक एव प्रलीयते ।
एकोनुभुंक्ते सुकृतम्, एक एव च दुष्कृतम् ।
मृतं शरीरमुत्सृज्य काष्ठलोष्टसमं क्षितौ ।
विमुखा बांधवा यान्ति धर्मस्तमनुगच्छति ।
तस्माद्धर्मं सहायार्थं नित्यं संचिनुयाच्छनैः
धर्मेण हि साहाय्येन तमस्तरति दुस्तरम् ॥"

(ಪ್ರಾಣಿಯು ಒಬ್ಬನೇ ಜನ್ಮಕ್ಕೆ ಬರುವನು. ಒಬ್ಬನೇ ಸತ್ತುಹೋಗುವನು. ಒಬ್ಬನೇ ಪುಣ್ಯಗಳ ಫಲಗಳನ್ನು ಭೋಗಿಸುವನು. ಒಬ್ಬನೇ ಪಾಪಕರ್ಮಗಳ ಫಲವನ್ನು ಅನುಭೋಗಿಸುವನು. ಬಾಂಧವರು ಮೃತಶರೀರವನ್ನು ಕಟ್ಟಿಗೆಯಂತಾಗಲಿ, ಮಣ್ಣಿನ ಹೆಂಟೆಯಂತಾಗಲಿ ಭೂಮಿಯಮೇಲೆ ಬಿಸಾಟ ಮೋರೆ ತಿರುವಿ ತಮ್ಮ ತಮ್ಮ ಮನೆಗಳಿಗೆ ಹೊರಟುಹೋಗುತ್ತಾರೆ. ಧರ್ಮವು ಮಾತ್ರ ಸತ್ತವನನ್ನು ಹಿಂಬಾಲಿಸುತ್ತದೆ. ಆದುದರಿಂದ ಮನುಷ್ಯನು ಜನ್ಮಕ್ಕೆ ಬಂದು ಪರಲೋಕಪ್ರಾಪ್ತಿಗೆ ಸಹಾಯವಾಗುವಂತೆ ಯಥಾಶಕ್ತಿಪುಣ್ಯವನ್ನು ಲಭಿಸಬೇಕು. ಅಂದರೆ ದುಸ್ತರವಾದ ಅಂಧಕಾರದೊಳಗಿಂದ ಅವನು ಪಾರಾಗುವನು.)

"ಪುಣ್ಯಾತ್ಮರು ಮಹಿಮೆಯಲ್ಲಿ ಸೂರ್ಯನಿಗಿಂತ ಶ್ರೇಷ್ಠರು. ಯಾಕೆಂದರೆ ಪುಣ್ಯದ ಪ್ರಕಾಶವು ಜಗತ್ತಿನಲ್ಲಿ ಶಾಶ್ವತವಾಗಿರುವುದು."

—**ಇಮರ್ಸನ್**.

ಆದರೂ ಎಷ್ಟೋ ಜನರು ಪುಣ್ಯಸಾಧನೆಯನ್ನು ಮಾಡಿಕೊಳ್ಳದೆ ಪಾಪಸಾಧನೆಯನ್ನು ಮಾತ್ರ ಮಾಡುತ್ತಾರೆಂಬುದನ್ನು ನೋಡಿ ಸಖೇದಾಶ್ಚರ್ಯವಾಗುತ್ತದೆ. ಯಾಕೆಂದರೆ ಪಾಪಕರ್ಮಗಳಿಗೆ ಅತಿಘೋರವಾದ ಶಿಕ್ಷೆಯು ತಪ್ಪದು. ಇನ್ನು ಕೆಲವರು ತಮ್ಮ ಸುಖವನ್ನು ಹಾಳುಮಾಡಿಕೊಳ್ಳುವುದಲ್ಲದೆ ನಿರರ್ಥಕವಾಗಿ ಪರಹಿತವನ್ನು ಕೆಡಿಸುವರು.

ಅಂಥವರನ್ನು ಯಾವ ವರ್ಗದಲ್ಲಿ ಸೇರಿಸಬೇಕೆಂಬುದು ಭರ್ತೃಹರಿ ಕವಿಗೆ ಸಹ ತಿಳಿಯದೆ ಹೋಯಿತು.

ಇದೇ ಆಕ್ಷೇಪದ ಸಂಬಂಧದಿಂದ ಪಾಶ್ಚಾತ್ಯ ಪಂಡಿತರು ಏನು ಅನ್ನುತ್ತಾರೆಂಬುದನ್ನು ನೋಡುವ. 'ಮರಣವು ಅನಿಷ್ಟವೆಂದು ತಿಳಿಯುವವರು ಮೂಢರು.' — **ಸಿಸಿರೊ.**

'ಪ್ರೇಮ, ಜ್ಞಾನ, ಸುವಿಚಾರಗಳು ಮನುಷ್ಯನ ನಿಜವಾದ ಸಂಪತ್ತುಗಳು. ಆತ್ಮವೂ ಮೃತ್ಯುವೂ ದೇವರೂ ಅವನ ಬಂಧುಗಳು.'—**ಕಾಲೆರಿಜ್.**
"ಮೃತ್ಯುವಿನಿಂದ ಸುಖದುಃಖಗಳೆಲ್ಲವೂ ಬೈಲಾಗುವುವು. ಅದರಿಂದಲೇ ಬಹು ಜನರು ಮರಣದ ನಿರೀಕ್ಷೆಯನ್ನು ಮಾಡುತ್ತ ಕಾದುಕೊಂಡಿರುವರು. ಮತ್ತು ಜೀವಕ್ಕೆ ಬೇಸತ್ತು ಮರಣವು ಯಾವಾಗ ಬಂದೀತೆಂದು ಹಾದಿಯನೋಡುತ್ತ ಕೂಡ್ರುವುದಕ್ಕಿಂತ ಮೊದಲೇ ಅದು ಒದಗಿದರೆ ಬಹಳ ಇಷ್ಟವು." — **ಸೆನೆಕಾ.**
ಜಗತ್ತಿನ ವ್ಯವಹಾರಗಳಲ್ಲಿ ಮಗ್ನನಾಗಿ ನಾನಾಪ್ರಕಾರದ ವಿಚಾರಗಳನ್ನು ಮಾಡುತ್ತ ಸ್ವಾರ್ಥಸಾಧನೆಯಲ್ಲಿಯೇ ಕಾಲಕಳೆಯುವವರ ಆತ್ಮಕ್ಕೆ ಮರಣದಿಂದ ಸ್ವಾಸ್ಥ್ಯವುಂಟಾಗುತ್ತದೆ.

ಮರಣವು ದುಃಖಕರವಾದದ್ದೆಂಬ ಕಲ್ಪನೆಯು ಭ್ರಾಮಕವಾಗಿದೆ. ಯಾಕೆಂದರೆ ಎಷ್ಟೋ ಜನರು ಶಾಂತಚಿತ್ತದಿಂದ ಪ್ರಾಣಬಿಡುವರು. ಬೀಡನೆಂಬ ಪಂಡಿತನು ಬಾಯಬಲವನ್ನು ಭಾಷಾಂತರಿಸುವಾಗ ಆಸನ್ನಮರಣನಾದನು. ಒಂದು ದಿವಸ ಬೆಳಿಗ್ಗೆ ಅವನ ಲೇಖಕನು ಅವನಿಗುಂಟಾದ ಅಶಕ್ತತೆಯನ್ನು ನೋಡಿ ಅವನಿಗಂದದ್ದೇನೆಂದರೆ:—'ಇನ್ನು ಒಂದು ಅಧ್ಯಾಯವು ಉಳಿದದೆ. ಆದರೆ ನಿಮಗೆ ಅಶಕ್ತಿಯುಂಟಾದ ಕಾರಣ ಅದನ್ನು ಮುಗಿಸುವುದು ಅಸಾಧ್ಯವು.' ಅದಕ್ಕೆ ಬೀಡನು ಉತ್ತರಕೊಟ್ಟದ್ದೇನಂದರೆ:—'ಅದೇನೂ ಅಸಾಧ್ಯವಲ್ಲ. ನಾನು ಹೇಳಿದ್ದನ್ನೆಲ್ಲ ಬೇಗಬೇಗ ಬರೆಯುತ್ತಹೋಗು. ಅಂದರೆ ಅದು ಬೇಗನೆ ಮುಗಿಯುವುದು.' ಅದು ಮುಗಿದಕೂಡಲೆ ಗ್ರಂಥವು ಮುಗಿಯಿತೆಂದು ಆ ಲೇಖಕನು ಹೇಳಲು, ದೇವರಮನೆಗೆ ತನ್ನನ್ನು ಕರೆದುಕೊಂಡು ಹೋಗಿ-

ರೆಂದು ಬೀಡನು ಸೇವಕರಿಗೆ ಅಪ್ಪಣೆಮಾಡಿದನು. ಅಲ್ಲಿ ಅವನನ್ನು ಕೂಡ್ರಿಸಿದನಂತರ ಅವನು ದೇವರಿಗೆ ಪ್ರಾರ್ಥಿಸಿ ಶಾಂತಚಿತ್ತನಾಗಿ ಪ್ರಾಣಬಿಟ್ಟನು.

ಇದರಂತೆಯೇ ಗೇಟ ಎಂಬ ಜರ್ಮನ್ ಕವಿಯು ವಸಂತಋತುವಿನ ವರ್ಣನೆಯನ್ನು ಮಾಡುತ್ತಿರುವಾಗ ಸ್ವಲ್ಪಾದರೂ ಯಾತನೆಯನ್ನು ಹೊಂದದೆ ಪ್ರಾಣಬಿಟ್ಟನು. ಪ್ಲೇಟೋನು ಸಹ ಹೀಗೆಯೇ ಸಮಾಧಾನದಿಂದ ಅಸುವನ್ನು ತೊಲಗಿದನು. ಪ್ರಸಿದ್ಧ ನ್ಯಾಯಾಧೀಶರೂ ವಿಖ್ಯಾತ ಸುಧಾರಕರೂ ಆದ ಮಾಧವರಾವ ರಾನಡೆಯವರು, ಮೇಲೆ ಉಲ್ಲೇಖಿಸಿದ ಜ್ಞಾನಿಗಳಂತೆ, 'ಅನಾಯಾಸೇನ' ಮರಣವನ್ನು ಹೊಂದಿದರೆಂಬುದು ವಾಚಕರ ಸ್ಮರಣೆಯಲ್ಲಿರಬಹುದು.

ಮರಣದನಂತರ ಆತ್ಮವು ಎಲ್ಲಿ ಹೋಗುತ್ತದೆಂಬ ಪ್ರಶ್ನೆಗೆ ಉತ್ತರ ಕೊಡುವುದು ಬಹು ಕಠಿಣವಾಗಿದೆ. ಆತ್ಮವು ಅವಿನಾಶಿಯಾದುದರಿಂದ ನಮ್ಮ ಜೀವಿತವು ಸಂತತಿರೂಪದಿಂದ ಮುಂದೆ ಸಾಗುವುದೆಂದು ಕೆಲವರು ಹೇಳುತ್ತಾರೆ. ಆತ್ಮವು ದೇಹದಿಂದ ಮುಕ್ತವಾದರೂ ಅದಕ್ಕೆ ಆದ ದೇಹಸಂಸ್ಕಾರಗಳ ನೆನಪು ಕೆಲಮಟ್ಟಿಗಾದರೂ ಉಳಿಯುವುದು. ಮನುಷ್ಯರಿಗೆ ನಿದ್ದೆಮಾಡಿದ ಮೇಲೆ ಎಚ್ಚರಿಕೆಯಾಗುವಂತೆ ಆತ್ಮಕ್ಕೆ ಮರಣದನಂತರ ಜಾಗ್ರತಾವಸ್ಥೆಯು ಪ್ರಾಪ್ತವಾಗುವುದು. ಆತ್ಮವು ನಮಗೆ ಗೋಚರವಾಗದಿದ್ದರೂ ಅಮರ್ಯಾದಿತವಾದ ಆಕಾಶದಲ್ಲಿ ನಕ್ಷತ್ರರೂಪದಿಂದಾಗಲಿ, ಗ್ರಹರೂಪದಿಂದಾಗಲಿ ಹೊಳೆಯುತ್ತಿರುವುದು. ಮನುಷ್ಯನು ಮರ್ತ್ಯನಾದಕಾರಣ ಯಥಾಕಾಲಕ್ಕೆ ಮರಣವು ಪ್ರಾಪ್ತವಾಗಲೆಂದು ದೇವರನ್ನು ಬೇಡಿಕೊಳ್ಳುವುದು ಯೋಗ್ಯವೇ ಸರಿ. ಆದರೆ ಮನುಸ್ಮೃತಿಯಲ್ಲಿ ಈ ಅಭಿಪ್ರಾಯಕ್ಕೆ ಕಿಂಚಿದ್ವಿರುದ್ಧವಾದ ನಿದರ್ಶನವು ಕಂಡುಬರುತ್ತದೆ.

नाभिनंदेत मरणं नाभिनंदेत जीवितं।
कालमेव प्रतीक्षेत निर्देशं भृतको यथा ॥ —मनु.

(ಮನುಷ್ಯನು ತಾನಾಗಿಯೇ ಮರಣವನ್ನಾಗಲಿ, ಜೀವಿತವನ್ನಾಗಲಿ ಹಾರೈಸಬಾರದು. ಆದರೆ ಸೇವಕನು ಯಜಮಾನನ ಆಜ್ಞೆಯನ್ನು ನಿರೀಕ್ಷಿಸುವಂತೆ ನಾವಾದರೂ ಸ್ವಾಭಾವಿಕವಾಗಿ ಪ್ರಾಪ್ತವಾಗುವ ಮರಣಕಾಲದ ಪ್ರತೀಕ್ಷೆಯನ್ನು ಮಾಡುತ್ತ ಕುಳಿತುಕೊಳ್ಳಬಹುದು.)

ಸೃಷ್ಟಿಯ ನಿಯಮದಂತೆ ಎಲ್ಲ ವಸ್ತುಗಳ ಕಾಲಮರ್ಯಾದೆಯು ನಿಶ್ಚಿತವಾಗಿದೆ. ಅದರಂತೆಯೇ ಮನುಷ್ಯನಿಗಾದರೂ ಆಯುರ್ಮರ್ಯಾದೆಯುಂಟು. ಈ ಜನ್ಮರೂಪನಾಟಕದಲ್ಲಿ ವೃದ್ಧಾಪ್ಯವು ಕಡೆಯ ದೃಶ್ಯದಂತಿರುವುದು. ದೇಹದಲ್ಲಿ ಅಶಕ್ತತೆಯುಂಟಾಗಿ ಜನ್ಮವು ಬೇಡಾದಕೂಡಲೆ ಮರಣವು ಒದಗಿದರೆ ಬಹಳ ಇಷ್ಟವು. ಆದುದರಿಂದ ಕಾಲವಾದವರ ಬಗ್ಗೆ ದುಃಖಿಸುವುದು ಸರಿಯಲ್ಲ.

**मरणं प्रकृतिः शरीरिणां, विकृतिर्जीवितमुच्यते बुधैः ।**
**क्षणमप्यवतिष्टते श्वसन्, यदि जन्तुर्ननुलाभवानसौ ॥**

—कालिदास.

(ಮರಣವು ಪ್ರಾಣಿಗಳಿಗೆ ಸ್ವಾಭಾವಿಕವಾಗಿರುವುದು. ಜೀವಿತವು ಮಾತ್ರ ಸ್ವಾಭಾವಿಕವಲ್ಲ. ಆದುದರಿಂದ ಒಂದುಕ್ಷಣ ಜೀವದಿಂದಿರುವುದು ಸಹ ದೊಡ್ಡ ಲಾಭವೆಂದು ತಿಳಿಯಬಹುದು.)

ಅಥವಾ

**वासांसि जीर्णानि यथा विहाय नवानि गृह्णाति नरोपराणि ।**
**तथा शरीराणि विहाय जीर्णान्यन्यानि संयाति नवानि देही ॥**

—श्रीमद्भगवद्गीता.

ಹಳೆಯ ವಸ್ತ್ರಂಗಳನುಳಿದು ಹೊಸ ।
ಕೆಲವು ವಸ್ತ್ರಂಗಳನು ಹೊದೆವಂ ।
ತಿಳಿಯ ಭೋಗದದೃಷ್ಟ ತೀರಲು ಜೀವನೀತನುವ ॥
ಕಳಚಿ ಹೊಸತಾದನ್ಯವಹ ತನು ।
ಗಳನು ತಾನೈದುತ್ತಿಹನು ನಿಜ ।
ತಿಳಿಯೆ ದೇಹಭ್ರಮಣ ಕೆಡುವುದು ಪಾರ್ಥ ಕೇಳೆಂದ ॥ —ನಾಗರಸ.

(ಮನುಷ್ಯನು ಹಳೆಯ ವಸ್ತ್ರಗಳನ್ನು ಬಿಟ್ಟು ಹೊಸ ವಸ್ತ್ರಗಳನ್ನು ಧರಿಸುವಂತೆ ಆತ್ಮವು ಹಳೆಯ ಶರೀರಗಳನ್ನು ಬಿಟ್ಟು ಹೊಸ ಶರೀರಗಳನ್ನು ಕೂಡಿಕೊಳ್ಳುತ್ತದೆ.)

ಆದುದರಿಂದ ಮೃತ್ಯುವು ಬಂದರೂ ದುಃಖಿಸಬೇಡ. ಸತ್ತ ಮೇಲೆ ಸುಖವಾಗಲಿಕ್ಕಿಲ್ಲೆಂಬುದು ನಿನಗೆ ನಿಶ್ಚಿತವಾಗಿ ಗೊತ್ತುಂಟೋ? ಇಹ-ಲೋಕಯಾತ್ರೆಯಲ್ಲಿ ಶ್ರಾಂತರಾದ ಜನರು ಕೆಳಗಿನ ವಿಚಾರಗಳ ಮನನ-ದಿಂದ ಎಷ್ಟೋ ಸಮಾಧಾನ ಹೊಂದಬಹುದು. "ನಮ್ಮ ಹಿಂದೆ ಕಾಲ-ವಾದವರಂತೆ ನಾವಾದರೂ ಇನ್ನು ಸ್ವಲ್ಪ ವರ್ಷಗಳಲ್ಲಿಯೇ ಇಹಲೋಕ-ಯಾತ್ರೆಯನ್ನು ಮುಗಿಸಿ ದೀರ್ಘನಿದ್ರೆಯನ್ನು ಮಾಡಹತ್ತುವೆವು. ಇನ್ನು ಇಲ್ಲಿ ಸ್ವಲ್ಪ ಆಯಾಸಬಟ್ಟು ಅಲ್ಪ ವಿರಹಕ್ಲೇಶವನ್ನು ಹೊಂದಿದರೆ ತೀರಿತು. ಮುಂದೆ ಅಖಂಡಸೌಖ್ಯವನ್ನು ಭೋಗಿಸುವುದು ನಮ್ಮ ಭಾಗ್ಯದಲ್ಲಿರುವುದು.

ಶೆಲಿನಾಮಕ ಕವಿಯು ಈ ಸಂಬಂಧದಿಂದ ಬರೆದದ್ದೇನಂದರೆ:— "ಮಲಗಿದವನಿಗೆ ಗಾಢನಿದ್ದೆಯಿಂದ ಎಚ್ಚರಿಕೆಯಾಗುವಂತೆ ಸಂಸಾರರೂಪ ನಿದ್ರೆಯಿಂದ ಮನುಷ್ಯನು ಜಾಗೃತನಾದನೆಂದರೆ ಭವಬಂಧನದಿಂದ ಮುಕ್ತನಾದಂತಾಯಿತು. ಮಾಯೆಯೆಂಬ ಉಪಾಧಿಯ ಮೂಲಕ ಇವನು ನನ್ನ ತಂದೆ, ಇವಳು ನನ್ನ ತಾಯಿ, ಇವರು ನನ್ನ ಅಣ್ಣತಮ್ಮಂ-ದಿರು, ಬಂಧುಗಳು ಎಂಬ ಭಾವನೆಯು ನಮ್ಮಲ್ಲಿ ನೆಲೆಗೊಂಡಿರುವುದು. ಈ ಸಂಸಾರದಲ್ಲಿ ಮತ್ಸರ, ಪರನಿಂದೆ, ದ್ವೇಷ, ದುಃಖ ಮೊದಲಾದುವು-ಗಳಿಂದ ಬಾಧೆಯಾಗುತ್ತದೆಂಬುದು ನಿಜ. ಆದರೆ ಒಮ್ಮೆ ಮೃತ್ಯುವೆಂಬ ಪರಲೋಕದ್ವಾರವನ್ನು ದಾಟದ ಕೂಡಲೆ ಎಲ್ಲ ಪ್ರಕಾರದ ದುಷ್ಟಸಂ-ಸರ್ಗಗಳೂ ದುಃಖಗಳೂ ದೂರವಾಗುವುವು."

ಆತ್ಮವೆಂಬ ಪಕ್ಷಿಯನ್ನು ದೇಹವೆಂಬ ಪಂಜರದಿಂದ ಮುಕ್ತಮಾಡು-ವುದೇ ಮರಣವು. ಮತ್ತು ಆತ್ಮವು ಮರಣದನಂತರ ಸ್ವಸ್ಥಾನಕ್ಕೆ ತೆರಳುತ್ತದೆಂದು ಜನರು ತಿಳಿಯುತ್ತಾರೆ. ಆದರೆ ಶೇಕ್ಸಪಿಯರ್ ಕವಿಯು ಅನ್ನುವುದೇನಂದರೆ:—"ಜಗತ್ತಿನೊಳಗಿನ ಎಲ್ಲ ವಸ್ತುಗಳೂ ಅವಿನಾಶಿಗಳು. ಇನ್ನು ನಾವು ಯಾವ ಸೃಷ್ಟಿವ್ಯಾಪಾರಕ್ಕೆ ಮರಣವೆಂದೆನ್ನುತ್ತೇವೋ ಅದು ಸ್ಥಿತ್ಯಂತರವೇ ಹೊರತು ನಾಶವಲ್ಲ. ಇಹಲೋಕವು ಸ್ವರ್ಗವೆಂಬ ಪಟ್ಟಣದ ಶಾಖಾನಗರದಂತಿರುವುದು. ಮತ್ತು ಆ ಪಟ್ಟಣದ ಅಗಸೆ ಬಾಗಿಲಿಗೆ ನಾವು ಮೃತ್ಯುವೆಂದನ್ನುವೆವು."

**अवगच्छति मूढचेतनः प्रियनाशं हृदिशल्यमर्पितम् ।**
**स्थिरधीस्तु तदेव मन्यते कुशलद्वारतया समुद्धृतम् ॥**

—कालिदास.

(ಪ್ರಿಯ ಜನರ ಮರಣದಿಂದ ಮೂಢನಿಗೆ ಮಾತ್ರ ಎದೆಯಲ್ಲಿ ಭಾಲೆಚುಚ್ಚಿದಷ್ಟು ವ್ಯಥೆಯಾಗುತ್ತದೆ. ಆದರೆ ಮರಣವು ಅಖಂಡ ಸುಖವನ್ನೀಯುವ ಸ್ವರ್ಗದ್ವಾರವೆಂದು ವಿಚಾರಿಯು ತಿಳಿಯುತ್ತಾನೆ.)

ಶರೀರವು ನಿತ್ಯವಾದ ಆತ್ಮದ ವಿನಾಶಿಯಾದ ದೃಶ್ಯ ಸ್ವರೂಪವಾಗಿದೆ.

ಸ್ವರ್ಗಸುಖವು ಹೇಗಿರಬಹುದೆಂಬುದನ್ನು ತಿಳಿದುಕೊಳ್ಳುವ ಬಗ್ಗೆ ಪ್ರತಿಯೊಬ್ಬನಿಗೂ ಕುತೂಹಲವಿರುವುದು. "ಸ್ವರ್ಗವಾಸಿಗಳು ಅನ್ಯೋನ್ಯವಾಗಿ ಪ್ರೇಮಮಾಡುತ್ತ ಆನಂದದಿಂದ ಗಾಯನಮಾಡುತ್ತಿರುವರೆಂದು ನಾವು ತಿಳಿಯುತ್ತೇವೆ." — **ವಾಲರ.**

ಈ ಜಗತ್ತಿನಲ್ಲಿದ್ದಂತೆ ಸ್ವರ್ಗದಲ್ಲಾದರೂ ಜೀವನಕಲಹವು ಇದ್ದೀತೆಂದು ತಿಳಿಯುವುದು ತಪ್ಪು. ಹಾಗಿದ್ದರೆ ಭೂಲೋಕಕ್ಕೂ ಸ್ವರ್ಗಲೋಕಕ್ಕೂ ಸ್ವಲ್ಪಾದರೂ ಭೇದವುಳಿಯದು. ಯಾವತರದ ಕಲಹವೂ ಇಲ್ಲದಿದ್ದರೆ ಈ ಜಗತ್ತಿನಲ್ಲಿ ಸಹ ಸುಖವನ್ನು ಭೋಗಿಸಬಹುದು.

ಈ ಲೋಕದಂತೆ ಸ್ವರ್ಗದಲ್ಲಿ ಸಹ ನಿತ್ಯ ಕ್ರಮದಲ್ಲಿ ಸ್ಥಿತ್ಯಂತರವುಂಟಾದರೆ ಮನಸ್ಸಿಗೆ ವ್ಯಗ್ರತೆಯುಂಟಾಗಿ ಸುಖವು ಕಡಿಮೆಯಾಗಬಹುದು. ಮತ್ತು ಪುನಃ ಪುನಃ ಒಂದೇ ಪ್ರಕಾರದ ಸುಖವನ್ನು ಉಪಭೋಗಿಸಹತ್ತಿದರೂ ಅದರಿಂದ ಒಂದು ತರದ ಬೇಸರಿಕೆಯುಂಟಾಗುವುದು. ಆದುದರಿಂದ ಆತ್ಮಕ್ಕೆ ಅನಂತಕಾಲದ ವರೆಗೆ ಆನಂದವಾಗುವಂತೆ ಪರಮೇಶ್ವರನು ಯೋಜನೆಯನ್ನು ಮಾಡಿದ್ದಾನೋ ಇಲ್ಲವೋ ಎಂಬುದರ ವಿಷಯವಾಗಿ ವಿಚಾರಿಗಳಿಗೆ ಸಂಶಯವುಂಟಾಗುತ್ತದೆ. ಆದರೆ ಕ್ಷಣಭಂಗುರವಾದ ಜಗತ್ತಿನಲ್ಲಿ ಪ್ರಾಣಿಗಳಿಗೆ ನೇತ್ರಸುಖವುಂಟಾಗಲೆಂದು ಅನೇಕ ಪ್ರಕಾರದ ರಮ್ಯವಸ್ತುಗಳನ್ನು ನಿರ್ಮಿಸಿದ ದೇವರ ವಿಶ್ವರೂಪದರ್ಶನವು ಶಾಶ್ವತವಾದ ಸ್ವರ್ಗಲೋಕದಲ್ಲಿ ಆಗುವುದೆಂಬ ಭಾವನೆಯಿಂದ ನಮಗೆ ಅನುಪಮ ಆನಂದವಾಗುವುದು.

ಪದಾರ್ಥ ವಿಜ್ಞಾನಶಾಸ್ತ್ರವನ್ನು ಅಭ್ಯಾಸಿಸಿದರೆ ಈ ಎಲ್ಲ ಸಂಶಯ-ಗಳ ನಿವಾರಣೆಯಾಗುವುದು. ಈಗ ನಮ್ಮ ಬುದ್ಧಿಗೆ ನಿಲುಕದ ಪ್ರಮೇ-ಯಗಳ ನಿರ್ಣಯವು ಇನ್ನು ಮುಂದೆ ಆಗಬಹುದು. ಈಗ ಉಪಲಬ್ಧ-ವಿಲ್ಲದ ಪ್ರಾಚೀನಕಾಲದ ಇತಿಹಾಸಜ್ಞಾನವು ಆಗಹತ್ತುವುದು; ನಾನಾ-ವಿಧವಾದ ವನಸ್ಪತಿಗಳ ಹಾಗೂ ಪ್ರಾಣಿಗಳ ಅಸ್ತಿತ್ವವು ಗೊತ್ತಾಗುವುದು. ಅಂತರಿಕ್ಷದಲ್ಲಿಯ ಅನೇಕ ರಹಸ್ಯಗಳು ತಿಳಿಯುಬರುವುವು; ನಕ್ಷತ್ರಗಳ ವೈಲಕ್ಷಣ್ಯವೂ ಅವುಗಳಾಚೆಗಿರುವ ಅದ್ಭುತಚಮತ್ಕಾರಗಳೂ ದೃಷ್ಟಿಗೆ ಬೀಳುವುವು. ಅಸಂಖ್ಯ ಸೂರ್ಯಗಳ ಸುತ್ತಲೂ ತಿರುಗುವ ಗ್ರಹ-ಮಾಲೆಗಳಲ್ಲಿರುವ ರಮಣೀಯ ಸ್ಥಳಗಳು ಕಾಣಹತ್ತುವುವು. ರಾತ್ರಿಯಲ್ಲಿ ಆಕಾಶದೊಳಗಿನ ಅಸಂಖ್ಯನಕ್ಷತ್ರಗಳಿದ್ದೆಡೆಗೆ ಅಶರೀರನಾಗಿ ಎಂದಾ-ದರೂ ಭ್ರಮಣಮಾಡುವೆನೆಂಬ ನಂಬಿಗೆಯುಂಟಾಗುವುದು. ಸ್ವರ್ಗವು ಅನಂತಸುಖೋಪಭೋಗಗಳ ಆದಿಸ್ಥಾನವಾಗಿದೆ. "ಇಂಥ ಸ್ವರ್ಗ-ಸುಖವನ್ನು ಪೂರ್ಣವಾಗಿ ಭೋಗಿಸಬೇಕೆಂಬ ಭೋಗೇಚ್ಛೆಯು ಎಂದೂ ತೃಪ್ತಿಯಾಗದು." —**ಟ್ರೆಂಚ್**.

"ಸ್ವರ್ಗವು ನಿರಂತರವಾದ ಹಾಗೂ ಶುದ್ಧವಾದ ಪ್ರೇಮದಿಂದ ಪೂರಿತವಾಗಿದೆ. ಅಲ್ಲಿ ಉಜ್ವಲವಾದ ಜ್ಞಾನವು ವಾಸಿಸುತ್ತಿದ್ದು ಅದನ್ನು ಪೂರ್ಣವಾಗಿ ಸಂಪಾದಿಸುವಷ್ಟು ಬುದ್ಧಿಯು ನಮಗೆ ಪ್ರಾಪ್ತವಾಗುತ್ತದೆ. ಅಲ್ಲಿ ಮಮತೆಮಾಡುವ ಜನರ ವಿಯೋಗವು ಎಂದೂ ಆಗದು; ಎಂದೂ ವೈಮನಸ್ಯವುಂಟಾಗದು; ಮಹತ್ಕಾರ್ಯಗಳನ್ನು ಕೈಗೂಡಿಸುವ ಸಾಮ-ರ್ಥ್ಯವು ಬರುವುದು; ಎಲ್ಲ ಮನೋರಥಗಳೂ ಕೈಗೂಡುವುವು; ಇಂಥ ಸ್ವರ್ಗವನ್ನು ದೇವರು ಮನುಷ್ಯಪ್ರಾಣಿಗಳ ದೆಸೆಯಿಂದಲೇ ನಿರ್ಮಿಸಿ-ದ್ದಾನೆ." —**ಗ್ರೇಗ**.

"ಈ ಕಷ್ಟಮಯವಾದ ಇಹಲೋಕದ ಸಂಬಂಧವು ದೂರವಾದ ಮೇಲೆ ನನಗೆ ಮುಕ್ತರಾದ ಸ್ವರ್ಗವಾಸಿಗಳ ಸತ್ಸಂಗವು ಲಭಿಸುವುದು. ಇದಲ್ಲದೆ ಅಲ್ಲಿ ಪ್ರಿಯ ಜನರ ಸಮಾಗಮವಾಗುವುದು. ಆದುದರಿಂದ ನನ್ನ ಆನಂದಕ್ಕೆ ಎಣೆಯೇ ಇಲ್ಲದಂತಾಗುವುದು." —**ಸಿಸಿರೋ**.

ಜ್ಞಾನಿಯಾದ ಸಾಕ್ರೆಟೀಸನು ಮರಣದ ವಿಷಯವಾಗಿ ಹೇಳಿದ್ದೇನೆಂದರೆ:—"ಮೃತ್ಯುವು ಹೇಗಾದರೂ ಇಷ್ಟವೇ. ಮೃತ್ಯುವಿನ ನಂತರ ಮನುಷ್ಯನಿಗೆ ಶೂನ್ಯಾವಸ್ಥೆಯು ಪ್ರಾಪ್ತವಾಗಿ ಅವನ ಜ್ಞಾನವೆಲ್ಲ ನಷ್ಟವಾಗಿ ಹೋಗುತ್ತದೆಂಬುದು ಒಂದು ಪ್ರಕಾರದ ತಿಳಿವಳಿಕೆಯು. ಆತ್ಮವು ಒಂದು ಜಗತ್ತನ್ನು ಬಿಟ್ಟು ಮತ್ತೊಂದು ಜಗತ್ತಿಗೆ ಹೋಗುತ್ತದೆ; ಒಂದು ದೇಹವನ್ನು ಬಿಟ್ಟು ಮತ್ತೊಂದು ದೇಹದಲ್ಲಿ ಸೇರಿಕೊಳ್ಳುತ್ತದೆ. ಮರಣದಿಂದ ನನ್ನ ಪೂರ್ವಜ್ಞಾನವೆಲ್ಲ ನಷ್ಟವಾಗಿ ಆತ್ಮಕ್ಕೆ ಗಾಢನಿದ್ರೆಯಾದಂತೆ ಆಗುತ್ತದೆಂಬುದು ಎರಡನೆಯ ಪ್ರಕಾರದ ತಿಳಿವಳಿಕೆಯು. ಹೀಗಾದರೂ ಸಹ ಮೃತ್ಯುವು ಇಷ್ಟವೇ. ಹಾಗಾದಮೇಲೆ ಅನಂತಕಾಲವು ಸಹ ಒಂದೇ ನಿಮಿಷದಂತೆ ಭಾಸವಾಗುವುದು. ಎಲ್ಲರೂ ಮೃತರಾದಮೇಲೆ ಹೋಗುವ ಸ್ಥಾನಕ್ಕೆ ನಾವು ಹೋಗುವುದರಿಂದ ಹಾನಿಯೇನು? ಈ ಹೊಸಲೋಕದಲ್ಲಿ ಪಕ್ಷಪಾತಿಗಳಾದ ನ್ಯಾಯಾಧೀಶರ ಅಧಿಕಾರವು ತಪ್ಪಿ ಸತ್ಯಪ್ರಿಯರಾದ ಸ್ವರ್ಗದ ನ್ಯಾಯಾಧೀಶರ ಮುಂದೆ ನಮ್ಮ ಪಾಪಪುಣ್ಯಗಳ ಲೆಕ್ಕವಾಗುವುದು. ಸದಾಚರಣೆಯಿಂದ ಪುಣ್ಯಸಂಪಾದನೆಯನ್ನು ಮಾಡಿದವರು ದೇವರಿಗೆ ಪ್ರಿಯರಾಗಿ ಸ್ವರ್ಗಸುಖವನ್ನನುಭವಿಸುವರು. ಅಂಥ ಸ್ಥಾನದಲ್ಲಿ ವಾಸಮಾಡುವುದು ಮಹಾಭಾಗ್ಯವೇ ಸರಿ. ಅಲ್ಲಿ ಮಹಾತ್ಮರ ಕೂಡ ಮಾತಾಡಬಹುದು. ಒಣಹೆಮ್ಮೆಯಿಂದ ಅಲ್ಪಜ್ಞಾನವನ್ನು ಮೆರೆಯಿಸುವ ಜ್ಞಾನಲವದುರ್ವಿದಗ್ಧರ ಪ್ರವೇಶವು ಅಲ್ಲಿ ಎಂದೂ ಆಗದು."

"ಸತ್ಪುರುಷರಿಗೆ ಇಹಲೋಕದಲ್ಲಾಗಲಿ, ಪರಲೋಕದಲ್ಲಾಗಲಿ ಎಂದೂ ಅಪಾಯವಾಗದು. ಅವರ ಇಷ್ಟಮಿತ್ರರ ಮೇಲೆ ಸಹ ದೇವರ ಅನುಗ್ರಹವು ಪೂರ್ಣವಾಗಿರುವುದು. ಮರಣದಿಂದ ಭವತಾಪವು ಹಿಂಗಿ ನನಗೆ ಮುಕ್ತಿಯಾದರೆ ನಾನು ಅತಿಭಾಗ್ಯಶಾಲಿಯು."

ಸಾಲೋಮನ್ ಎಂಬ ಪ್ರಾಚೀನ ಕಾಲದ ರಾಜರ್ಷಿಯು ಈ ವಿಷಯವಾಗಿ ಕೆಲವು ನೀತಿಯ ವಚನಗಳನ್ನು ಬರೆದಿಟ್ಟದ್ದಾನೆ.

"ಪುಣ್ಯವಂತರ ಆತ್ಮವು ಯಾವಾಗಲೂ ದೇವರ ಸನ್ನಿಧಿಯಲ್ಲಿಯೇ ಇರುವುದು. ಮತ್ತು ಅದಕ್ಕೆ ಯಾವ ಉಪಾಧಿಗಳ ಉಪಸರ್ಗವೂ ಆಗದು.

"ಪುಣ್ಯವಂತರು ಸಹ ಮರಣಹೊಂದುತ್ತಾರೆಂಬುದು ಅನಿಷ್ಟವೆಂದು ಮೂಢರು ತಿಳಿಯುತ್ತಾರೆ.

"ಅವರು ಇಹಲೋಕವನ್ನು ಬಿಟ್ಟು ಹೋದಕೂಡಲೆ ನಾಶಹೊಂದು-ವರೆಂದು ಅಜ್ಞರು ತಿಳಿಯುತ್ತಾರೆ. ಆದರೆ ಪುಣ್ಯವಂತರು ಅಖಂಡ ಸುಖಶಾಂತಿಯನ್ನು ಭೋಗಿಸುತ್ತಾರೆಂಬುದು ಅವರ ಬುದ್ಧಿಗೆ ಸಹ ನಿಲು-ಕದು.

"ಮೃತ್ಯುವು ಒಂದು ಪ್ರಕಾರದ ಶಾಸನವೆಂದು ಭಾವಿಸಿದರೂ ಸಹ ಪುಣ್ಯವಂತರು ಅಮರರಾಗುತ್ತಾರೆ.

"ಪರಮೇಶ್ವರನು ಇಂಥ ಪುಣ್ಯಶೀಲರಿಗೆ ಸಂಕಟಗಳನ್ನು ಒದಗಿಸಿ ಅವರ ಸತ್ವಪರೀಕ್ಷೆಯನ್ನು ಮಾಡುವನು. ಮತ್ತು ಅದರಲ್ಲಿ ಇಳಿದವರೇ ಅವನ ಕೃಪೆಗೆ ಪಾತ್ರರಾಗುವರು.

ನಾವು ಐಹಿಕಬಂಧನಗಳಿಂದಲೂ ತಾಪಗಳಿಂದಲೂ ಮುಕ್ತರಾಗಿ ಇಹಲೋಕವನ್ನು ಬಿಟ್ಟು ಪರಲೋಕಕ್ಕೆ ಹೋದಮೇಲೆ ಪೂರ್ವಜನ್ಮದಲ್ಲಿ ಪ್ರಸಿದ್ಧರೆಂದು ಹೊಗಳಲ್ಪಟ್ಟ ಸಾಧುಗಳ, ಗ್ರಂಥಕಾರರ ಹಾಗೂ ಪ್ರಿಯ-ಜನರ ಸಮಾಗಮವು ಅಲ್ಲಿ ಯಥೇಚ್ಛವಾಗಿ ಆಗುವುದು. ಸರ್ವಶಕ್ತಿ-ಮಂತನೂ ಚರಾಚರವತ್ಸಲನೂ ಆದ ಸೃಷ್ಟಿಕರ್ತನ ಸೇವೆಯಲ್ಲಿ ನಿರತ-ರಾಗಿ ಅವನ ಪ್ರೀತಿಯ ಆಸ್ವಾದವನ್ನು ತೆಗೆದುಕೊಳ್ಳುವ ಪ್ರಸಂಗವು ಲಭಿಸುವುದು ಸಾಧಾರಣ ಭಾಗ್ಯವೇ? ದೇವದೂತರ ಹಾಗೂ ಇತರ ಪುಣ್ಯಾತ್ಮರ ಸತ್ಸಂಗದಲ್ಲಿ ನಮ್ಮ ಕಾಲವು ಬಹು ಆನಂದದಿಂದ ಹೋಗು-ವುದು ಕಡಿಮೆ ಪುಣ್ಯವೇ? ಆಗ ಐಹಿಕ ಸುಖೋಪಭೋಗಗಳೆಲ್ಲ ಸ್ವರ್ಗ-ದಲ್ಲಿಯ ನಿರಂತರ ಸುಖದ ಮುಂದೆ ನಿರ್ಮಾಲ್ಯದಂತೆ ತುಚ್ಛವೆಂದು ಕಂಡು-ಬರುವುವು.



# ಅನುಬಂಧ.

**ಟೀಪು:**— ಈ ಪುಸ್ತಕದಲ್ಲಿ ಉಲ್ಲೇಖಿಸಲ್ಪಟ್ಟ ಪ್ರಸಿದ್ಧ ಗ್ರಂಥಕಾರರ ಚರಿತ್ರಗಳನ್ನು ಸಂಕ್ಷಿಪ್ತವಾಗಿ ಕೆಳಗೆ ಕೊಟ್ಟಿದ್ದೇವೆ.

**ಜಾರ್ಜ ಹರ್ಬರ್ಟ್**—(೧೫೯೩–೧೬೩೨) ಇಂಗ್ಲಿಷ ಕವಿಯೂ ಧರ್ಮೋಪದೇಶಕನೂ ಆಗಿದ್ದನು. ಟೆಂಪಲ (ಗುಡಿ) ಎಂಬ ಶಿರೋಲೇಖವನ್ನಿಟ್ಟು ಕೆಲವು ಪದ್ಯಗಳನ್ನು ಬರೆದನು. ಅದೇ ಪುಸ್ತಕದ ಗದ್ಯದಲ್ಲಿ ಧರ್ಮೋಪದೇಶಕರು ಪಾಲಿಸತಕ್ಕ ನಿಯಮಗಳನ್ನು ಸರಸಾಗಿ ವರ್ಣಿಸಿದ್ದಾನೆ.

**ಜಾನ್ ರಸ್ಕಿನ್**—(೧೮೧೯–೧೯೦೦) ಕಲಾಮಿಮಾಂಸಕ. ಆಕ್ಸಫರ್ಡದಲ್ಲಿ ಶಿಕ್ಷಣಹೊಂದಿದ ಮೇಲೆ ಮಾಡರ್ನ ಪೇಂಟರ್ಸ (ಆಧುನಿಕ ಚಿತ್ರಕಾರರು), ಶಿಲ್ಪಕಲೆಯ ೭ ಜ್ಯೋತಿಗಳು ಎಂಬ ಪುಸ್ತಕಗಳನ್ನು ಬರೆದು ಚಿತ್ರಕಲೆಯ ವಿಷಯಕ್ಕೆ ಜನರಲ್ಲಿ ನೆಲೆಗೊಂಡ ತಪ್ಪು ತಿಳಿವಳಿಕೆಗಳನ್ನು ತೆಗೆದುಹಾಕಿದನು. ಟರ್ನರನೆಂಬ ಚಿತ್ರಕಾರನು ಇವನ ಗುರುವು. ಅರ್ಥಶಾಸ್ತ್ರ, ಶಿಕ್ಷಣ ಮೊದಲಾದ ವಿಷಯಗಳ ಮೇಲೆ ಅನೇಕ ಗ್ರಂಥಗಳನ್ನು ಬರೆದನು. ಕೆಂಬ್ರಿಜದ ವಿಶ್ವವಿದ್ಯಾಲಯದವರು ಇವನ ವಿದ್ವತ್ತೆಗೆ ಮೆಚ್ಚಿ, ಇವನಿಗೆ L. L. D. ಪದವಿಯನ್ನು ಕೊಟ್ಟರು.

**ಜೆರಮಿ ಟೇಲರ್**–(೧೬೧೩–೧೬೬೭) ಧರ್ಮೋಪದೇಶಕ. ೧ನೆಯ ಚಾರ್ಲಸನ ರಾಜಪುರೋಹಿತನು. ಚಾರ್ಲಸನ ವಧೆಯಾದ ಮೇಲೆ ಇವನು ಅಯರ್ಲಂಡಕ್ಕೆ ಹೋದನು. ಯೆಸೂ ಕ್ರಿಸ್ತನ ಚರಿತ್ರವನ್ನು ಬರೆದಿದ್ದಾನೆ. ಇವನ ಲೇಖಗಳ ವಿಚಾರವು ಗಹನವಾಗಿರುವುದು.

**ಸೆಂಟ್ ಬರ್ನರ್ಡ್**—(೯೨೩–೧೦೦೮) ಆಲ್ಪ್ಸ ಪರ್ವತದ ಹಿಮದಲ್ಲಿ ಮುಚ್ಚಿಹೋದ ಪ್ರವಾಸಿಕರನ್ನು ತೆಗೆದು ಅವರಿಗೆ ಉಪಚಾರ ಮಾಡುವುದರ ದೆಸೆಯಿಂದ ಅನೇಕ ಮಠಗಳನ್ನೂ ಶಿಷ್ಯರನ್ನೂ ಸ್ಥಾಪಿಸಿದವನು ಇವನೇ.

**ಮಾರ್ಕಸ್ ಅರೇಲಿಯಸ್**—ರೋಮದ ಶೂರ ಶಿಪಾಯಿಯು. ಕೆಲವು ಕಾಲ ಬಾದಶಹನಾಗಿದ್ದನು. ೨೬೦ನೆಯ ಇಸವಿಯಲ್ಲಿ ಮರಣಹೊಂದಿದನು.

**ಎಪಿಕ್ಟಿಟಸ್**—೧ನೆಯ ಶತಮಾನದಲ್ಲಿ ರೋಮದ ತತ್ವಜ್ಞಾನಿಯು. "ಸ್ಟೋಯಿಕ್" ಎಂಬ ಮತದ ಪ್ರವರ್ತಕನು. ಆತ್ಮವು ಅಮರವಿರುತ್ತದೆಂಬ ತತ್ವವನ್ನು ಯುರೋಪದಲ್ಲಿ ಸಾರಿದನು. ಪ್ರಸಿದ್ಧ ಲೇಖಕನು.

**ಸೆನೆಕಾ**—(ಕ್ರಿ. ಪೂ. ೩–ಕ್ರಿ. ಶ. ೬೫) ರೋಮದ ಪ್ರಸಿದ್ಧ ಲೇಖಕ. ನೀರೋ ಬಾದಶಹನು ಸಣ್ಣವನಿದ್ದಾಗ ಅವನ ಶಿಕ್ಷಕನಾಗಿದ್ದನು. ನೀರೋನು ಪಟ್ಟವೇರಿದ ಬಳಿಕ ಇವನಲ್ಲಿದ್ದ ದ್ರವ್ಯವನ್ನು ಅಪಹರಿಸಬೇಕೆಂದು ಇವನನ್ನು ಅಪರಾಧಿಯೆಂದು ನಿರ್ಣಯಿಸಿದರು. ಆಗ ಸೆನೆಕಾನು ನಾಡಿಯನ್ನು ಕೊಯ್ದುಕೊಂಡು ಸತ್ತನು.

**ಎಪಿಕ್ಯೂರಸ್**—(ಕ್ರಿ. ಪೂ. ೩೪೨–೨೭೦) ಗ್ರೀಸದ ತತ್ವಜ್ಞಾನಿಯು. ಆನಂದವೇ ಆಯುಷ್ಯದ ಧ್ಯೇಯವೆಂದು ಪ್ರತಿಪಾದಿಸಿದನು. ಇವನು ಶುದ್ಧ ಆಚರಣೆಯುವನಿದ್ದನು. ಆದರೆ ಅವನ ಶಿಷ್ಯರು ಅವನ ಮತದ ವಿಪರ್ಯಾಸವನ್ನು ಮಾಡಿದರು. ಇವನು ೩೦೦ ಗ್ರಂಥಗಳನ್ನು ಬರೆದನಂತೆ. ಇವನು ನಾಸ್ತಿಕ ಮತದವನೆಂದು ಜನರ ತಿಳಿವಳಿಕೆ.

**ಹೆಲ್ಪ್ಸ**—(೧೮೧೭–೧೮೭೫) ಇತಿಹಾಸ ಲೇಖಕ, ಮತ್ತು ಪ್ರಬಂಧಕಾರ. ೧೮೩೫ರಲ್ಲಿ ಕೆಂಬ್ರಿಜದ ಬಿ. ಎ. ಪದವಿಯನ್ನು ಸಂಪಾದಿಸಿ ಇಂಗ್ಲಂಡದ ಸಿವ್ಹಿಲ ಸರ್ವೀಸಿನಲ್ಲಿ ಸೇರಿದನು. ಇವನು ಕೋಲಂಬಸನ. ಚರಿತ್ರ, ಅಮೇರಿಕಾದಲ್ಲಿ ಸ್ಪಾನಿಷ ಜನರ ರಾಜ್ಯ, ಮತ್ತು ಅದಕ್ಕೂ ಗುಲಾಮರ ವ್ಯಾಪಾರಕ್ಕೂ ಇದ್ದ ಸಂಬಂಧ ಮುಂತಾದ ಅನೇಕ ಪುಸ್ತಕಗಳನ್ನು ಬರೆದನು.

**ಬೇಕನ್**—(೧೫೬೧–೧೬೨೬) ಎಲಿಜಾಬೇಥ ರಾಣಿಯ ಆಳಿಕೆಯಲ್ಲಿ ನ್ಯಾಯಾಧೀಶನೂ, ಲೇಖಕನೂ, ತತ್ವಜ್ಞಾನಿಯೂ ಆಗಿದ್ದನು.

**ಪ್ಲೇಟೊ**—(ಕ್ರಿ. ಪೂ. ೪೨೯–೩೪೭) ಗ್ರೀಸದ ಪ್ರಸಿದ್ಧ ತತ್ವಜ್ಞಾನಿಯು. ಸಾಕ್ರೆಟೀಸನ ಪರಮ ಶಿಷ್ಯನು. ಇವನು ಶರೀರದಿಂದ

ದುಂಡಗಾಗಿದ್ದುದರಿಂದಲೂ ಇವನ ಎದೆಯು ವಿಶಾಲವಾಗಿದ್ದುದರಿಂದಲೂ ಇವನಿಗೆ 'ಪ್ಲೇಟೊ' ಎಂಬ ಹೆಸರು ಬಂದಿತು.

**ಸಾಕ್ರೆಟೀಸ**—(ಕ್ರಿ. ಪೂ. ೪೬೮-೩೯೯) ಇವನು ಗ್ರೀಸದ ಅತಿ-ಪ್ರಸಿದ್ಧನಾದ ತತ್ವಜ್ಞಾನಿಯು. ಸ್ವದೇಶದ ಪರಿಪಾಠದಂತೆ ಇವನು ದಂಡಿನಲ್ಲಿ ಕೆಲವು ದಿವಸ ಸೇರಿ, ಯುದ್ಧದಲ್ಲಿ ಝೆನೋಫೋನನನ್ನು ಉಳಿಸಿಕೊಂಡನು. ಇವನ ವಿಚಾರದ ಸ್ವಾತಂತ್ರ್ಯವೂ ಉತ್ತಮ ವಿವಾದ-ಮಾಡುವ ಪದ್ಧತಿಯೂ ವಿದ್ವಾಂಸರನ್ನು ಸಹ ಅಚ್ಚರಿಗೊಳಿಸುವುವು. ಇವನ ವಿಚಾರಗಳು ಶಾಶ್ವತವಾಗಿ ಉಳಿಯುವಂತೆ ಇವನ ಶಿಷ್ಯರಾದ ಪ್ಲೇಟೊ, ಝೆನೋಫೋನರು ಗ್ರಂಥಗಳನ್ನು ಬರೆದಿದ್ದಾರೆ.

**ಸಿಸಿರೋ**—(ಕ್ರಿ. ಪೂ. ೧೦೬-೪೩) ರೋಮದ ಅತಿ ವಿಖ್ಯಾತನಾದ ವಕ್ತೃವು; ರಾಜಕರಣ ಪಟುವಾಗಿದ್ದನು. ಇವನು ಸೀಝರನ ಮಿತ್ರನು.

**ಅರಿಸ್ಟಾಟಲ**—(ಕ್ರಿ. ಪೂ. ೩೮೪-೩೨೨) ಗ್ರೀಸದ ಪ್ರಸಿದ್ಧ ತತ್ವ-ಜ್ಞಾನಿಯು. ಅಲೇಕ್ಸಾಂದ್ರನ ಗುರುವು.

**ಸರಜಾನ ಹರ್ಶಲ್**—(೧೭೯೦-೧೮೭೧) ಪ್ರಸಿದ್ಧ ಜ್ಯೋತಿಷ-ಶಾಸ್ತ್ರಜ್ಞ. ಯುರೆನಸ್ ಗ್ರಹವನ್ನು ಶೋಧಿಸಿದನು.

**ಕ್ವಿನ್ಸಿ ಅಡಾಮ್ಸ**—(೧೭೬೭-೧೮೪೮) ಅಮೇರಿಕದ ಸಂಯುಕ್ತ ಸಂಸ್ಥಾನದ ೨ನೆಯ ಪ್ರೆಸಿಡೆಂಟನ ಮಗನು. ದಾಸ್ಯಪದ್ಧತಿಯನ್ನು ನಿಲ್ಲಿಸ-ಲಿಕ್ಕೆ ಪ್ರಯತ್ನಮಾಡಿದನು.

**ಮೂಂಟಗಾಮರಿ**—(೧೭೭೧-೧೮೫೪) ಇಂಗ್ಲಿಷ ಕವಿ. ಕೆಲವು ಕಾಲ ವರ್ತಮಾನಪತ್ರದ ಸಂಪಾದಕನಾಗಿದ್ದನು ಆಗ ಅನೇಕ ಸಾರೆ ದಂಡ-ಶಿಕ್ಷೆಗಳನ್ನು ಭೋಗಿಸಿದನು. ಇವನು ಬರೆದ 'ಸ್ವಿತ್ಸರ್ಲಂಡದೊಳ-ಗಿನ ಪ್ರವಾಸಿ' ಎಂಬ ಕವಿತಾಪುಸ್ತಕವು ಬಹುಜನ ಪ್ರಿಯವಾಗಿದೆ.

**ಮಿಲ್ಟನ್**—(೧೬೦೮-೧೬೭೪) ಇಂಗ್ಲಂಡದ ಪ್ರಸಿದ್ಧ ಕವಿ. ಇವನು ಚಿಕ್ಕವಸಿದ್ದಾಗ ಅತಿಸುಂದರನಾಗಿದ್ದುದರಿಂದ ಇವನಿಗೆ ಕೆಂಬ್ರಿಜದ ಕಾಲೇಜದಲ್ಲಿ 'ಲೇಡಿ ಆಫ್ ದಿ ಕಾಲೇಜ' ಎಂದು ಕರೆಯುತ್ತಿದ್ದರು.

ಇವನ ಕವಿತೆಗಳಲ್ಲಿ 'ಪ್ಯಾರಾಡಾಯಿಜ ಲಾಸ್ಟ' (ಮನುಷ್ಯನು ಸ್ವರ್ಗವನ್ನು ಕಳೆದುಕೊಂಡು ಕೆಳಗೆ ಬಂದನು) ಎಂಬುದೂ ನಾಟಕಗಳಲ್ಲಿ ಸಾಮ್ಸನ್ ಅಗಾನಿಸ್ಟಿಸ್ ಎಂಬುದೂ ಉತ್ತಮವಾಗಿರುವುವು.

**ಟೆನಿಸನ್**—(೧೮೦೯–೧೮೯೨) ವ್ಹಿಕ್ಟೋರಿಯಾ ರಾಣಿಯ ಕಾಲಕ್ಕೆ ಆಸ್ಥಾನ ಕವಿಯಾಗಿದ್ದನು. ಅರ್ಥರ ಹ್ಯಾಲಾಮ ಎಂಬ ತನ್ನ ಮಿತ್ರನ ಸ್ಮರಣಾರ್ಥ "ಇನ್ ಮೆಮೋರಿಯಮ್" ಎಂಬ ಉತ್ತಮ ಕವಿತೆಯನ್ನು ಬರೆದನು.

**ಬಿಥಿಯಸ್**—(೪೫೫–೫೨೬) ರೋಮದ ತತ್ವಜ್ಞಾನಿಯೂ ಗಣಿತ-ಜ್ಞನೂ. ಅವನು ಬರೆದ 'Consolation of Philosophy' ಎಂಬ ಗ್ರಂಥವು ಪ್ರಸಿದ್ಧವದೆ.

**ಪ್ಲುಟಾರ್ಕ** – (ಜನ್ಮ ೪೮) ಗ್ರೀಸದ ಪ್ರಸಿದ್ಧ ಚರಿತ್ರಲೇಖಕನು. ಹಾಗು ತತ್ವಜ್ಞಾನಿಯು. ಇವನು ಬರೆದ 'ಪ್ರಸಿದ್ಧ ಪುರುಷರ ಚರಿತ್ರಗಳು' ಎಂಬ ಗ್ರಂಥವು ಉತ್ತಮವಾಗಿರುವುದು. ಇವನು ಬಹಳ ಮುದುಕನಾಗಿ ತೀರಿಕೊಂಡನು.

**ಲವ್ಹಲೇಸ**—(೧೬೧೮–೧೬೫೮) ಇಂಗ್ಲಿಷ ಕವಿ.

**ವರ್ಡ್ಸ್‌ವರ್ಥ (ಉಯಿಲ್ಯಮ್)** ೧೭೭೦–೧೮೫೦— ಕೇಂಬ್ರಿಜದಲ್ಲಿ ಬಿ. ಎ. ಪದವಿಯನ್ನು ಪಡೆದ ನಂತರ ಕವಿತೆಗಳನ್ನು ಬರೆಯ ಹತ್ತಿದನು. ಇವನು ೧೪ ಚರಣಗಳುಳ್ಳ 'ಸಾನೆಟ್' ಎಂಬ ಕವಿತೆಗಳನ್ನು ಬರೆದನು. ಎಕ್ಸಕರ್ಶನ್ (ಪ್ರವಾಸ) ಎಂಬುದು ಉತ್ತಮ ಗ್ರಂಥವು. ೧೮೪೩ರಲ್ಲಿ ಸೌದೇನ ತರುವಾಯ ಆಸ್ಥಾನ ಕವಿಯಾದನು. 'ಕಾಲೆರಿಜ್, ಡಿಕ್ವೆನ್ಸಿ' ಎಂಬ ಕವಿಗಳು ಇವನ ಮಿತ್ರರು.

**ಗ್ರೇ**—(೧೭೧೬–೧೭೭೧) ಇಂಗ್ಲಿಷ ಕವಿ. 'ಎಲೆಜಿ ಇನ್ ಎ ಕಂಟ್ರಿ ಚರ್ಚ ಯಾರ್ಡ' (ದುಃಖದ ಕವಿತೆ) ಎಂಬ ಅತ್ಯುತ್ತಮ ಕವಿತೆಯನ್ನು ಬಹಳ ಮನೋಹರವಾಗಿ ಬರೆದಿದ್ದಾನೆ.

**ಇಮರ್ಸನ್**—(೧೮೦೩–೧೮೮೨) ಅಮೇರಿಕದ ಗ್ರಂಥಕಾರ. ಅನೇಕ ನಿಬಂಧಗಳನ್ನು ಬರೆದಿದ್ದಾನೆ. ೧೮೪೯ರಲ್ಲಿ ಇಂಗ್ಲಂಡಕ್ಕೆ ಬಂದು ನಪೊಲಿ-

ಯುನ್, ಸ್ವಿಡೆನ್‌ಬರ್ಗ ಮೊದಲಾದವರ ವಿಷಯಕ್ಕೆ ವ್ಯಾಖ್ಯಾನಗಳನ್ನು ಕೊಟ್ಟನು.

**ಜೊವೆಟ್**—(೧೮೧೭-೧೮೯೩) ಧರ್ಮೋಪದೇಶಕ. ಆಕ್ಸಫರ್ಡ ವಿಶ್ವವಿದ್ಯಾಲಯದಲ್ಲಿ ಗ್ರೀಕ ಭಾಷೆಯ ಪ್ರೊಫೆಸರನಾಗಿದ್ದನು. ಬಾಯ-ಬಲ್ಲಿನ ವಿಷಯಕ್ಕೆ ಅನೇಕ ನಿಬಂಧಗಳನ್ನು ಬರೆದನು.

**ಶೇಕ್ಸಪಿಯರ**—(೧೫೬೪-೧೬೧೬) ಇಂಗ್ಲಂಡದ ಕಾಲಿದಾಸನು ಎಲಿಜಾಬೇಥ ರಾಣಿಯ ಕಾಲಕ್ಕೆ ಆಗಿಹೋದ ಕವಿಮಂಡಲದಲ್ಲಿ ಸೂರ್ಯ-ನಂತಿದ್ದನು. ೩೯ ನಾಟಕಗಳನ್ನು ಬರೆದನು. ಅವುಗಳಲ್ಲಿ ಕೆಲವು ಐತಿ-ಹಾಸಿಕ ನಾಟಕಗಳೂ ಕೆಲವು ಆನಂದಪರ್ಯವಸಾಯಿ ನಾಟಕಗಳೂ ಕೆಲವು ಶೋಕಪರ್ಯವಸಾಯಿ ನಾಟಕಗಳೂ ಇರುವುವು. ಅವುಗಳಲ್ಲಿ ಹಾಮ್ಲೆಟ್, ತ್ರಾಟಿಕಾ (Taming of the shrew) ಇವು ಪ್ರಸಿದ್ಧವಿರು-ವುವು.

**ಸ್ವಿನ್ಬರ್ನ**—(೧೮೩೭-೧೯೦೯) ಇಂಗ್ಲಂಡದ ಆಧುನಿಕ ಕವಿ. ಇವನ• ಬರಹದ ಪದ್ಧತಿಯು ವಿಲಕ್ಷಣವಾದುದು.

**ಸ್ವಿಡೆನ್‌ಬರ್ಗ**—೧೬೮೮-೧೭೭೨) ಸ್ವೀಡನ್ನದ ಉಪದೇಶಕ. ಹೊಸದೊಂದು ಮತವನ್ನು ಸ್ಥಾಪಿಸಿದನು. ಅದರ ತತ್ವಗಳೇನಂದರೆ ದೇವರು ಒಬ್ಬನೇ. ಅವನು ಯಾರೆಂದರೆ ಯೇಸೂ ಕ್ರಿಸ್ತನು.

**ಕಾಲೆರಿಜ್**—(೧೭೭೨-೧೮೩೪) ಇಂಗ್ಲಿಷ ಕವಿ. ಕವಿತೆ-ಕಲೆಗಳ ಮೀಮಾಂಸಕ. ವರ್ಡ್ಸವರ್ಥ ಕವಿಯ ಸ್ನೇಹಿತ.

**ವಾಲರ**—(೧೬೦೫-೧೬೮೭) ಇಂಗ್ಲಿಷ ಕವಿ. ೧೬೪೩ರಲ್ಲಿ ರಾಜ-ದ್ರೋಹಕ್ಕಾಗಿ ಇವನಿಗೆ ಶಿಕ್ಷೆಯಾಗಿತ್ತು. ಸುಲಭವಾದ ಕವಿತೆಗಳನ್ನು ಬರೆದಿದ್ದಾನೆ.

**ಟ್ರೆಂಚ್**—(೧೮೦೭-೧೮೮೬) ಧರ್ಮೋಪದೇಶಕ ಮತ್ತು ಕವಿ. ಕೆಲವು ಕಾಲ ವೆಸ್ಟಮಿನಿಸ್ಟರದ ಡೀನನಾಗಿದ್ದನು.

**ಗ್ರೇಗ**—(೧೮೦೯-೧೮೮೧) ಪ್ರಬಂಧಕಾರ.

# ಓದತಕ್ಕ ಮನೋಹರ ಪುಸ್ತಕಗಳು.

## ಶ್ರೀ ಹನುಮಂತರಾವ ದೇಶಪಾಂಡೆ, ಬಿ. ಎ.,

ಹೆಡ್‌ಮಾಸ್ತರ, ಟ್ರೇನಿಂಗ ಸ್ಕೂಲ, ಧಾರವಾಡ.

## ಇವರಿಂದ ರಚಿತವಾದ ಪುಸ್ತಕಗಳು.

೧. **ಶಿಕ್ಷಣ ಪದ್ಧತಿ**—ಬೆಲೆ ೧ ರೂ. ೪ ಆಣೆ. ಈ ಪುಸ್ತಕದಲ್ಲಿ ಶಿಕ್ಷಣ ಶಾಸ್ತ್ರದ ಹೊಸ ವಿಚಾರಗಳೂ ಮಾಂಟಿಸೋರಿ, ಡಾಲ್ಟನ ಪ್ಲಾನ ಎಂಬ ಹೊಸ ಪದ್ಧತಿಗಳೂ ವಿವರಿಸಲ್ಪಟ್ಟಿವೆ. ಸಾಕ್ರೆಟೀಸ, ಹರ್ಬರ್ಟ, ಫ್ರೂಬೆಲ್, ಪೆಸ್ಟಾಲೋಝಿ ಮೊದಲಾದ ಶಿಕ್ಷಣಸುಧಾರಕರ ಪ್ರಯೋಗಗಳ ವಿವೇಚನವು ಇದರಲ್ಲಿರುವದು.

೨. **ಹಿಂದುಸ್ತಾನದ ಇತಿಹಾಸ**— ಬೆಲೆ ೧ ರೂ. (೧ನೆಯ ಭಾಗ) (ವೇದಕಾಲದಿಂದ ಮುಸಲ್ಮಾನರ ಆಳಿಕೆಯ ವರೆಗೆ) ಹಿಂದುಸ್ಥಾನದ ವಾಙ್ಮಯ, ಶಾಸ್ತ್ರ, ಕಲೆ, ರಾಜ್ಯಪದ್ಧತಿ, ಸಾಮಾಜಿಕ ಸ್ಥಿತಿ ಇವುಗಳ ಪ್ರಗತಿಯು ಪ್ರಾಚೀನ ಕಾಲದಲ್ಲಿ ಹೇಗೆ ಇತ್ತೆಂಬದು ಯಥಾಸ್ಥಿತವಾಗಿ ವರ್ಣಿಸಲ್ಪಟ್ಟಿದೆ. ವೇದದೊಳಗಿನ ಋಕ್ಕುಗಳನ್ನೂ ಉಪನಿಷತ್ತಿನೊಳಗಿನ ಕಥೆಗಳನ್ನೂ ಕೊಟ್ಟಿದೆ. ದಕ್ಷಿಣದ ರಾಜ್ಯಗಳ ವಿಷಯವಾಗಿ ಸುಸಂಗತವಾದ ವಿವೇಚನವು ಮಾಡಲ್ಪಟ್ಟಿದೆ. ಇದನ್ನು ಓದಿದರೆ ಸ್ವಾಭಿಮಾನವು ಉಕ್ಕುವದು. ಪ್ರಾಚೀನ ಕಾಲದಿಂದ ಹಿಂದುಸ್ತಾನವು ಒಂದೇ ರಾಷ್ಟ್ರವಿತ್ತೆಂಬದು ವಾಚನದಿಂದ ತಿಳಿಯುವದು.

೩. **ಹಿಂದುಸ್ತಾನದ ಇತಿಹಾಸ**— ೨ನೆಯ ಭಾಗ (ಅಚ್ಚಾಗುತ್ತಲಿದೆ.) ಬೆಲೆ ೧ ರೂ. ಮುಸಲ್ಮಾನ ಮರಾಟರ ಇತಿಹಾಸವೂ ಪೋರ್ತುಗೀಜ ಇಂಗ್ಲಿಷ ಫ್ರೆಂಚ ಡಚ್ಚರ ಪ್ರಾರಂಭದ ಕಾಲವೂ ವಿವರಿಸಲ್ಪಟ್ಟಿವೆ. ಹೊಸ ಶೋಧಗಳ ಆಧಾರದಿಂದ ಪಕ್ಷಪಾತರಹಿತವಾಗಿ ಪ್ರತಿಯೊಂದು ಕಾಲದ ವಿವೇಚನವನ್ನು ಮಾಡಿದೆ. ಈ ಕಾಲದ ವಾಙ್ಮಯ, ಕಲೆ, ರಾಷ್ಟ್ರದ ಅಭಿವೃದ್ಧಿ ಮೊದಲಾದವುಗಳ ವಿಚಾರವು ಯಥಾಸ್ಥಿತವಾಗಿರುವದು.

ಈ ಪುಸ್ತಕಗಳು ಗ್ರಂಥಕರ್ತರಲ್ಲಿಯೂ, ಧಾರವಾಡದ ಕರ್ನಾಟಕ ಶಂಕರ ಭಾಂಡಾರದಲಿಯೂ. ಕರ್ಮವೀರ ಪುಸ್ತಕಾಲಯದಲ್ಲಿಯೂ ದೊರೆಯುವವು.

ಯೆ



